

ಕರ್ನಾಟಕ

# ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೩೩, ಸಂಚಿಕೆ : ೦೨

ಜುಲೈ–ಡಿಸೆಂಬರ್ ೨೦೧೯

ಸಂಪಾದಕ

ಪ್ರೊ. ಬಿ.ಪಿ. ವೀರೇಂದ್ರ ಕುಮಾರ್

ಬಿ.ಎಂ.ಶ್ರೀ. ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ (ರಿ)
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ ಬೆಂಗಳೂರು–೫೬೦೦೧೯.
ದೂರವಾಣಿ : ೨೬೬೧೫೮೭೭, ೨೬೬೭೬೭೭೩
ವಿ–ಅಂಚೆ : bmsritrust@gmail.com bmsrilochana@gmail.com

## ಬಿ.ಎಂ.ಶ್ರೀ. ಪ್ರತಿಷ್ಠಾನದ ಪದಾಧಿಕಾರಿಗಳು

ಕರ್ನಾಟಕ

# ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೩೩, ಸಂಚಿಕೆ : ೦೨

ಜುಲೈ – ಡಿಸೆಂಬರ್ ೨೦೧೯

ಸಂಪಾದಕ

ಪ್ರೊ. ಬಿ.ಪಿ. ವೀರೇಂದ್ರ ಕುಮಾರ್



ಬಿ.ಎಂ.ಶ್ರೀ. ಪ್ರತಿಷ್ಠಾನ

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ. ಕಲಾಭವನ (ರಿ)

೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ

ಬೆಂಗಳೂರು–೫೬೦೦೧೯.

ದೂರವಾಣಿ : ೨೬೬೧೫೮೭೭, ೨೬೬೭೬೭೭೩

ಪಿ–ಅಂಚೆ : bmsritrust@gmail.com bmsrilochana@gmail.com

**KARNATAKA LOCHANA**
Half yearly Research Journal
Edited by Prof. B.P. Veerendra Kumar and
Published by B.M.Sri. Prathistana
M.V.Si. P.G. Research Centre
B.M.Sri. Kalabhavan(R), 3rd Main Road
Narasimharaja Colony, Bangalore 560 019.
Ph.No. 080-26615877, 26676773
e-mail
bmsritrust@gmail.com
bmsrilochana@gmail.com

July - December 2019 (Vol. 33, No. 2)

Pages: viii + 148
Published in Jan : 2020



Subscription Details :

**Annual : Rs. 100/-**

**Life : Rs. 1500/-**

ಚಂದಾ ವಿವರ:
ವಾರ್ಷಿಕ : ರೂ. ೧೦೦/-
ಆಜೀವ : ರೂ. ೧೫೦೦/-

# ಸಂಪಾದಕರ ನುಡಿ...

ಈ ಸಂಚಿಕೆಗೆ ವಸ್ತುವೈವಿಧ್ಯತೆಗಳಿಂದ ಕೂಡಿದ ಸಂಶೋಧನಾ ಬರಹಗಳು ಬಂದಿರುವುದು ಸಂತಸ ತಂದಿದೆ. ಪ್ರೊ.ಪಿ. ಸುಬ್ರಾಯಭಟ್‌ರವರು, ಡಾ.ಪಿ. ಕೃಷ್ಣಭಟ್‌ರವರು ಸಂಪಾದಿಸಿದ 'ಪಂಪಭಾರತ ದೀಪಿಕೆ' ಯ ಮೇಲೊಂದು ಕ್ಷಕಿರಣ ಎಂಬ ಪ್ರಂಬಂಧವನ್ನು ಸಿದ್ಧಮಾಡಿಕೊಟ್ಟಿರುವುದು ಸ್ತುತ್ಯರ್ಹ ಸಂಗತಿ. ಇದರಲ್ಲಿ ಡಿ.ಎಲ್.ಎನ್. ನಂತರ ಪಂಪಭಾರತರ ಬಗೆಗೆ ವಿದ್ವತ್ ಪೂರ್ಣ ವಿಶ್ಲೇಷಣೆಯನ್ನು ಡಾ.ಪಿ.ಸುಬ್ರಾಯ ಭಟ್ಟರು ಮಾಡಿರುವುದು ವಿದ್ವತ್ ಪ್ರಪಂಚಕ್ಕೆ ಒಂದು ವಿಶಿಷ್ಟಕೊಡುಗೆ ಎಂದೇ ನನ್ನ ಭಾವನೆ. ಹಸ್ತಪ್ರತಿಗಳ ಬಗೆಗೆ ಡಾ.ಸಿ. ನಾಗಭೂಷಣರವರ ಬರಹ, ಹಸ್ತಪ್ರತಿಗಳು ಕನ್ನಡ ಸಂಸ್ಕೃತಿಯನ್ನು ಪುನಃ ರಚಿಸಿಕೊಳ್ಳುವ ಸಾಮರ್ಥ್ಯವಿರುವುದನ್ನು ಗಮನಿಸಿ ವಿಶ್ಲೇಷಿಸಿರುವುದು, ಹೊಸ ಆಯಾಮವೊಂದನ್ನು ನೀಡಿದೆ. 'ಪ್ರೆಹರಾ' ಎಂಬ ಶಬ್ದದ ಬಗೆಗೆ ಇರುವ ಗೊಂದಲಗಳನ್ನು ಹೊಗಲಾಡಿಸಿ ಅದಕ್ಕೊಂದು ಸ್ಪಷ್ಟತೆ ತಂದುಕೊಡುವಲ್ಲಿ ಡಾ.ಬಿ.ರಾಜಶೇಖರಪ್ಪನವರ ಪ್ರಯತ್ನ ಮೆಚ್ಚುವಂಥದ್ದು. ಅಕ್ಕನ ಬದುಕಿನಲ್ಲಿ ಬಹುಮಹತ್ವದ ಪ್ರಸಂಗವಾದ 'ಕಿನ್ನರಿ ಬೊಮ್ಮಯ್ಯ' ಭೇಟಿ ಸನ್ನಿವೇಶದ ಬಗೆಗೆ ವಿಶ್ಲೇಷಿಸಿರುವ ಡಾ. ದಾಕ್ಷಾಯಣಿಯಡಹಳ್ಳಿರವರ ಬರಹ ಹೊಸ ಬೆಳಕನ್ನು ನೀಡುತ್ತದೆ. ಕೈಲಾಸಂರವರ ಮೊದಲ ನಾಟಕ 'ಟೊಳ್ಳುಗಟ್ಟಿ' ಯ ಪ್ರಥಮ ಮುದ್ರಣದ ಮುನ್ನುಡಿಯ ಬಗೆಗೆ ಗಮನ ಸೆಳೆಯುವ ಡಾ.ಬಿ.ನಂಜುಂಡಸ್ವಾಮಿರವರ ಲೇಖನ ಐತಿಹಾಸಿಕ ಮಹತ್ವವನ್ನು ಪಡೆದಿದೆ. ಎಂಬತ್ತರ ದಶಕದ 'ಕೆಂಪು ಬಂಗಾಳ' ದ ಒಳಹೊರಗನ್ನು ಕಟ್ಟಿಕೊಡುವ ಎಚ್.ಎಸ್.ರಾಘವೇಂದ್ರರಾವ್ ರವರ ಪ್ರವಾಸಕಥನ 'ಜನಗಣಮನ' ದ ಬಗೆಗೆ ಡಾ. ಎಚ್. ಶಶಿಕಲಾರವರ ವಿಶ್ಲೇಷಣೆ ಅನೇಕ ಒಳ ನೋಟಗಳಿಂದ ಕೂಡಿದೆ. ವಚನಗಳ ಬಹು ಪಠ್ಯೀಯ ಗುಣ ಕಾರಣವಾಗಿ ವಚನಗಳ ಭಾಷೆ ಇವತ್ತಿನ ಕನ್ನಡದಂತೆ ಮತ್ತು ಇವತ್ತಿನ ಭಾಷೆಯ ವ್ಯಾಕರಣವನ್ನೇ ಹೊಂದಿರುವುದನ್ನು ಶೋಧಿಸಿರುವ ಬಸವರಾಜ ಕೋಡಗುಂಟಿಯವರ ಲೇಖನ ಭಾಷಾಶಾಸ್ತ್ರದ ದೃಷ್ಟಿಯಿಂದ ಪ್ರಮುಖವಾದುದು.

ಗುಡಿಗಳು ದರ್ಗಗಳಾಗಿ ಪರಿವರ್ತನೆ ಹೊಂದಿರುವ ಹಾಗೂ ಅವುಗಳ ಬಗೆಗೆ ಮುಸ್ಲಿಮರು ಹಾಗೂ ಲಿಂಗಾಯಿತ, ಸಮಾಜದವರು ಪೂಜೆಯ ಅವಕಾಶ ಪಡೆದಿರುವ ಸಂಗತಿಯನ್ನು ಶ್ರೀ ವೀರಣ್ಣದಂಡೆ ಹಾಗೂ ಶ್ರೀಮತಿ ಜಯಶ್ರೀ ದಂಡೆಯವರು ತಮ್ಮ ಲೇಖನದಲ್ಲಿ ಪ್ರಸ್ತಾಪಿಸಿರುವುದು ಕುತೂಹಲ ಹುಟ್ಟಿಸುತ್ತದೆ. ಪೂರ್ವಗ್ರಹ ಪೀಡನೆಯಿಲ್ಲದೆ ಘನೀಕೃತ ಆಕರಗಳೊಂದಿಗೆ ಡಾ. ಕೆಳದಿ ಗುಂಡಾಜೊಯಿಸರು ಪ್ರಸ್ತುತ ಪಡಿಸಿರುವ 'ಅಹಿಚ್ಛತ್ರ' ಪ್ರದೇಶದ ವಿವೇಚನೆ ಒಂದು ಅಪೂರ್ವ ಸಂಶೋಧನವೇ ಆಗಿದೆ. ಚಿರಪರಿಚಿತವಾದ ಸಂಸ್ಕೃತದ ಪ್ರಸಿದ್ಧವಾದ ಕಾವ್ಯ ಮೀಮಾಂಸೆಗಿಂತ ಭಿನ್ನವಾಗಿ ಬೌದ್ಧರು ಲೋಕವನ್ನು ಮತ್ತು ಕಾವ್ಯವನ್ನು ನೋಡುವ 'ಬೌದ್ಧ ಕಾವ್ಯ ದೃಷ್ಟಿ' ಕುರಿತಂತೆ ನಟರಾಜ್ ಬೂದಾಳ್ ಅವರ ವಿಶ್ಲೇಷಣೆ ಇದರಲ್ಲಿ ಪ್ರತಿಫಲಿತವಾಗಿದೆ.

ಸಂಪಾದಕತ್ವದ ಜವಾಬ್ದಾರಿಯನ್ನು ಹಗುರ ಮಾಡುತ್ತಿರುವ ಗೆಳೆಯರೂ ಬಿ.ಎಂ.ಶ್ರೀ ಪ್ರತಿಷ್ಠಾನದ ಅಧ್ಯಕ್ಷರೂ ಆದ ಡಾ. ಆರ್. ಲಕ್ಷ್ಮೀನಾರಾಯಣ ಅವರಿಗೆ, ಸಹಕರಿಸುತ್ತಿರುವ ಕಾರ್ಯದರ್ಶಿಯವರುಗಳಾದ ಶ್ರೀ.ಬಿ.ಆರ್. ರವೀಂದ್ರನಾಥ್ ಹಾಗೂ ಡಾ. ವಿಜಯಾ ಸುಬ್ಬರಾಜ್‌ರವರಿಗೆ ಹಾಗೂ ಸಿಬ್ಬಂದಿವರ್ಗದವರಿಗೆ, ಸುಂದರವಾಗಿ ಮುದ್ರಿಸಿ ಕೊಡುತ್ತಿರುವ ಅನ್ನಪೂರ್ಣೇಶ್ವರಿ ಪ್ರಿಂಟರ್ಸ್ ಅವರಿಗೆ ಗೌರವಪೂರ್ವಕ ವಂದನೆಗಳು.

**01-01-2020**

ಪ್ರೊ.ಬಿ.ಪಿ.ವೀರೇಂದ್ರಕುಮಾರ್
ಸಂಪಾದಕರು

## ಲೇಖಕರಿಗೆ ಸೂಚನೆಗಳು...

೧. ಸಾಹಿತ್ಯ-ಸಂಸ್ಕೃತಿಗಳಿಗೆ ಸಂಬಂಧಿಸಿದ ಸಂಶೋಧನೆ ವಿಮರ್ಶೆಗಳ ಅಪ್ರಕಟಿತ ಬರಹಗಳನ್ನು 'ಕರ್ನಾಟಕ ಲೋಚನ' ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಸ್ವೀಕರಿಸಲಾಗುವುದು.

೨. ಲೇಖನಗಳು ನುಡಿ ಅಥವಾ ಬರಹ ತಂತ್ರಾಂಶದಲ್ಲಿ ಬೆರಳಚ್ಚು ಮಾಡಿದವಾಗಿರಬೇಕು ಅಥವಾ ಸ್ಫುಟವಾದ ಕೈಬರಹದಲ್ಲಿರಬೇಕು.

೩. ಲೇಖನಗಳು ಒಪ್ಪಿತವಾದ ಮಾದರಿಯಲ್ಲಿ ಸೂಕ್ತ ಉಲ್ಲೇಖಗಳು ಮತ್ತು ಟಿಪ್ಪಣಿಗಳಿಂದ ಕೂಡಿರಬೇಕು.

೪. ಚಿತ್ರಗಳು, ನಕ್ಷೆಗಳು ಮೊದಲಾದುವನ್ನು ಸ್ಕ್ಯಾನ್ ಮಾಡಿದ ತಂತ್ರಾಂಶದಲ್ಲಿ ನೀಡಬೇಕು.

೫. ಲೇಖಕರು ತಮ್ಮ ವಿಳಾಸ, ದೂರವಾಣಿ ಸಂಖ್ಯೆ ಮತ್ತು ವಿ-ಅಂಚೆಗಳನ್ನು ತಪ್ಪದೆ ನೀಡಬೇಕು.

೬. ಅಸ್ವೀಕೃತ ಬರಹಗಳನ್ನು ಹಿಂದಿರುಗಿಸಲಾಗುವುದಿಲ್ಲ ಮತ್ತು ಈ ಬಗೆಗೆ ಪತ್ರವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

೭. ಲೇಖನಗಳನ್ನು ಪ್ರತಿಷ್ಠಾನದ ಅಂಚೆವಿಳಾಸಕ್ಕೆ ಅಥವಾ bmsrilochana@gmail.com ಈ ವಿ-ಅಂಚೆಗೆ ಕಳುಹಿಸಬಹುದು.

೮. ಪ್ರಕಟವಾದ ಬರಹಗಳಿಗೆ ಪ್ರತಿಷ್ಠಾನವು ಸಾಂಕೇತಿಕ ಗೌರವ ಸಂಭಾವನೆಯನ್ನು ನೀಡುತ್ತದೆ.

೯. ಲೇಖನದಲ್ಲಿನ ಅಭಿಪ್ರಾಯಗಳು ಲೇಖಕರದೇ ಆಗಿದ್ದು ಪ್ರತಿಷ್ಠಾನದ ನಿಲುವುಗಳನ್ನು ಪ್ರತಿನಿಧಿಸುವುದಿಲ್ಲ.

# ಈ ಸಂಚಿಕೆಯಲ್ಲಿ...

ಈ ಸಂಚಿಕೆಯ ಲೇಖಕರು

* ದಿವಂಗತ ಶ್ರೀ. ಪಿ. ಸುಬ್ರಾಯ ಭಟ್ ಕಾಸರಗೋಡು
* ಡಾ. ಸಿ. ನಾಗಭೂಷಣ , ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ
* ಡಾ.ಬಿ.ರಾಜಶೇಖರಪ್ಪ, ಕನ್ನಡ ಪ್ರಾಧ್ಯಾಪಕರು ಪ್ರಾಂಶುಪಾಲರು(ನಿ), ೨ನೇಯ ಕ್ರಾಸ್, (ಪಶ್ಚಿಮ) ಜೆ.ಸಿ.ಆರ್. ಬಡಾವಣೆ, ಚಿತ್ರದುರ್ಗ -೫೭೭೫೦೦ ಮೊ.
* ಡಾ. ದಾಕ್ಷಾಯಣಿ ಯಡಹಳ್ಳಿ, ಡೊಂಬಿವಲಿ ಮೊ: ೯೬೬೪೧೪೨೪೧೩
* ಡಾ. ಬಿ.ನಂಜುಂಡಸ್ವಾಮಿ, ಪಂಡಿತ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್ , ಬಿ.ಹೆಚ್. ರಸ್ತೆ ತುಮಕೂರು-೫೭೨೧೦೨ ಮೊ-೯೮೮೦೯೯೬೧೯೬
* ಡಾ. ಎಚ್. ಶಶಿಕಲಾ , ಸಹಾಯಕ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬೦೦೫೬ ಮೊ- ೯೯೮೦೦೭೧೭೧೫.
* ಬಸವರಾಜ ಕೋಡಗುಂಟಿ, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಕಲಬುರಗಿ,
* ಸೀತಾರಾಮ ಜಾಗಿರದಾರ
* ಡಾ. ವೀರಣ್ಣದಂಡೆ ಪ್ರಾಧ್ಯಾಪಕ ಇಮೆರಿಟಸ್, ಡಾ. ಜಯಶ್ರೀ ದಂಡೆ, ಪ್ರಾಧ್ಯಾಪಕರು ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ- ೫೮೫೧೦೬
* ಡಾ.ಮುತ್ತು ರಾಜ್, ೪೦ಅಡಿ ಮುಖ್ಯರಸ್ತೆ, ಕುಮಾರಸ್ವಾಮಿ ಬಡಾವಣೆ, ೨ನೇ ಹಂತ, ಬೆಂಗಳೂರು- ೫೬೦೦೭೮ ಮೊ- ೯೮೪೫೭೯
* ಡಾ.ಕೆಳದಿ ಗುಂಡಾಜೋಯಿಸ್
* ಡಾ. ನಟರಾಜ್ ಬೂದಾಳ್, ನಿವೃತ್ತ ಕನ್ನಡ ಪ್ರಾಧ್ಯಾಪಕರು, 'ಗೌರಿ' ನಳಂದ ಶಾಲೆ ಹಿಂಭಾಗ, ಸಪ್ತಗಿರಿ ಬಡಾವಣೆ, ತುಮಕೂರು - ೫೭೨ ೧೦೧ ಮೊ - ೯೮೪೪೩೮೭೧೭೫
* ಪ್ರೊ.ಎಂ.ಎಸ್. ರಘುನಾಥ್, ನಂ.ಹೆಚ್.ಐ.ಜಿ ೪೦, ೬ನೇ ಮುಖ್ಯರಸ್ತೆ, ಕೆ.ಹೆಚ್.ಬಿ. ಕಾಲೋನಿ, ೨ನೇ ಹಂತ, ಬಸವೇಶ್ವರನಗರ, ಬೆಂಗಳೂರು-೫೬೦೦೭೯. ಮೊ॥ ೯೪೪೮೪ ೬೮೯೩೯

## ಪ್ರೊ.ಪಿ.ಸುಬ್ರಾಯ ಭಟ್, ಕಾಸರಗೋಡು ಅವರ ಲೇಖನವನ್ನು ಸಂಪಾದಿಸಿರುವ ಡಾ. ಪಿ. ಶ್ರೀಕೃಷ್ಣಭಟ್, ಕಾಸರಗೋಡು ಅವರ ಸಂಪಾದಕರ ಮಾತು

ಪ್ರೋ। .ಪಿ. ಸುಬ್ರಾಯ ಭಟ್ಟರು {೧೯೨೨-೧೯೭೬} ಬಹುಶ್ರುತ ವಿದ್ವಾಂಸರು, ಕಾಲೇಜು ಪ್ರಾಧ್ಯಾಪಕರಾಗಿ ಕನ್ನಡ ಪದವಿ ಮತ್ತು ಸ್ನಾತಕೋತ್ತರ ಪದವಿ ವಿದ್ಯಾರ್ಥಿಗಳಿಗೆ, ದೀರ್ಘಕಾಲ, ಪ್ರಾಚೀನ ಹಾಗೂ ಮಧ್ಯಕಾಲೀನ ಕನ್ನಡ ಕಾವ್ಯಗಳನ್ನು, ಛಂದಸ್ಸು, ಅಲಂಕಾರ ಮುಂತಾದ ಶಾಸ್ತ್ರವಿಷಯಗಳನ್ನು ಪರಿಣಾಮಕಾರಿಯಾಗಿ ಬೋಧಿಸಿದವರು. ಅಭಿಜಾತ ಕಾವ್ಯಗಳ ವ್ಯಾಖ್ಯಾನದಲ್ಲಿ ಅವರಿಗೆ ವಿಶೇಷವಾದ ಒಲವು. ಕಾಲೇಜು ಪ್ರಾಧ್ಯಾಪಕರಾಗುವ ಮೊದಲು ಅವರು ಪ್ರಾಚೀನ ತಾಳೆಯೋಲೆ ಗ್ರಂಥಭಂಡಾರ ಹಾಗೂ ಪ್ರಾಚ್ಯ ಪುಸ್ತಕ ಭಂಡಾರಗಳಲ್ಲಿ ಪ್ರಾಚ್ಯ ಗ್ರಂಥಗಳ ಹಸ್ತಪ್ರತಿಗಳನ್ನು ಸಿದ್ಧಪಡಿಸುವ ಮತ್ತು ಪ್ರಾಚೀನ ಗ್ರಂಥಗಳನ್ನು ಪರಿಶೋಧಿಸಿ ಮುದ್ರಣಕ್ಕೆ ಸಿದ್ಧಗೊಳಿಸುವ ಕಾಯಕದಲ್ಲಿ ಕೆಲವು ವರ್ಷಗಳ ಕಾಲ ದುಡಿದಿದ್ದರು. ಕನ್ನಡದ ಅಭಿಜಾತ ಕಾವ್ಯಗಳ ಓದಿನ ವಿಧಾನ, ಅರ್ಥೈಸುವಿಕೆ, ಪಾಠನಿರ್ಣಯ ಮೊದಲಾದವುಗಳ ಬಗೆಗೆ ಅಪಾರವಾದ ಪಾಂಡಿತ್ಯವನ್ನುಗಳಿಸಿದ್ಧರು. ಕವಿರನ್ನನ 'ಸಾಹಸಭೀಮ ವಿಜಯ'ದ ಮೇಲಿನ 'ವ್ಯಾಖ್ಯಾನ'ವಾದ 'ಗದಾಯುದ್ಧ ದರ್ಪಣಂ' (೧೯೭೬) ಅವರ ಮೇರುಕೃತಿಯಾಗಿದೆ. ಅವರ ವೈದುಷ್ಯಕ್ಕೆ ಸಾಕ್ಷ್ಯವಾಗಿ ಮೆಚ್ಚುಗೆ ಪಡೆದಿದೆ. 'ಪಂಪಭಾರತ ದೀಪಿಕೆಯ ಮೇಲೊಂದು ಕ್ಷಕಿರಣ' ಎಂಬ ಲೇಖನ ಅವರ ಪಾಂಡಿತ್ಯದ ಒರೆಗಲ್ಲಾಗಿದೆ.

ಡಾ. ಡಿ.ಎಲ್. ನರಸಿಂಹಾಚಾರ್ಯರ 'ಪಂಪಭಾರತ ದೀಪಿಕೆ' ಎಂಬ ವ್ಯಾಖ್ಯಾನ ಗ್ರಂಥ (೧೯೭೧)ವನ್ನು ಪ್ರೊ.ಪಿ. ಸುಬ್ರಾಯ ಭಟ್ಟರು ಬಹಳವಾಗಿ ಮೆಚ್ಚಿಕೊಂಡಿದ್ದರು. ಅದನ್ನು ಕೂಲಂಕಷವಾಗಿ ಅಧ್ಯಯನ ಮಾಡಿದ್ದರು ಹಲವಡೆಗಳಲ್ಲಿ ಡಿ.ಎಲ್.ಎನ್ ಅವರ ಅಭಿಪ್ರಾಯಗಳೊಂದಿಗೆ ಭಿನ್ನಮತ ಹೊಂದಿದ್ದರು. ಪ್ರಾಚೀನ ಕಾವ್ಯಗಳ ವಿಶ್ಲೇಷಣೆಯಲ್ಲಿ, ಅನ್ವಯಾರ್ಥಗಳ ನಿರ್ಣಯದಲ್ಲಿ ಸಂದಿಗ್ಧತೆ, ಭಿನ್ನಮತಗಳು ತಲೆದೋರುವುದು ತೀರಾ ಸಹಜ. ಡಿ.ಎಲ್.ಎನ್ ಅವರೇ ಹೇಳುವಂತೆ "ಹಲವೆಡೆಗಳಲ್ಲಿ ಭಿನ್ನಾಭಿಪ್ರಾಯಗಳಿಗೆ ಅವಕಾಶವಿದೆ. ನನ್ನದೇ ಸರಿಯೆಂಬ ಹಠವೇನೂ ಇಲ್ಲ. ಜಿಜ್ಞಾಸುವಿನ ದೃಷ್ಟಿಯಿಂದ ಕೆಲವಂಶಗಳನ್ನು ಚರ್ಚಿಸಿದೆ. ನನಗೆ ಸಂದೇಹಗಳೆಂದು ತೋರಿದೆಡೆಗಳಲ್ಲಿ ಪ್ರಶ್ನೆ ಚಿಹ್ನೆಯನ್ನು ಧಾರಾಳವಾಗಿ ಬಳಸಿದ್ದೇನೆ. ತಿಳಿಯದ ಅಂಶಗಳಿಗೂ ಇದೇ ಚಿಹ್ನೆಯನ್ನು ಅಲ್ಲಲ್ಲಿ ಹಾಕಿದೆ. ಈ ಪ್ರಶ್ನೆ ಚಿಹ್ನೆಗಳನ್ನು ತೆಗೆದು ಹಾಕುವ ಕೆಲಸ ಮುಂದಿನ ವಿದ್ವಾಂಸರಿಗೆ ಸೇರಿದುದಾಗಿದೆ". [ಅರಿಕೆ: ಪು:ಖಿiಖಗಿ]

ಈ ಮಾತನ್ನೇ ಆದರ್ಶವಾಗಿಟ್ಟುಕೊಂಡು ಮುಂದುವರಿದವರು ಪ್ರೊ. ಪಿ.ಸುಬ್ರಾಯ ಭಟ್ಟರು "ಏಕಲವ್ಯನಿಗೆ ದ್ರೋಣಾಚಾರ್ಯರು ಹೇಗೋ ನನಗೆ ಡಿ.ಎಲ್.ನರಸಿಂಹಾಚಾರ್ಯರೂ ಹಾಗೆ" ಎಂಬ ಗೌರವಭಾವ ಅವರದು. "ಪಂಪಭಾರತ ದೀಪಿಕೆಯು ಡಿ.ಎಲ್.ನರಸಿಂಹಾಚಾರ್ಯರ ಅದ್ಭುತ ಪ್ರತಿಭೆ, ಅನರ್ಘ್ಯ ಪಾಂಡಿತ್ಯ, ದಿವ್ಯದರ್ಶನಗಳನ್ನು ಪ್ರತಿಬಿಂಬಿಸುವ ನಿಲುಗನ್ನಡಿಯಂತಿದೆ. ಈ ದೀಪಿಕೆಯಿಂದ ಪಂಪ ಧ್ರುವತಾರೆಯಾಗಿದ್ದಾನೆ". [......ಕ್ಷಕಿರಣ ಲೇಖನದ ಆರಂಭದಲ್ಲಿ ಬರುವ ಮಾತು] ಎಂಬುದು ಭಟ್ಟರ ಮೆಚ್ಚುಗೆಯ ಮಾತು. ಪ್ರಸ್ತುತ ಲೇಖನದಲ್ಲಿ ಅಳವಡಿಸಿಕೊಂಡಿರುವ ರೀತಿಯ ಬಗೆಗೆ ಅವರೇ ಸ್ಪಷ್ಟಪಡಿಸುತ್ತಾರೆ. ಡಾ.ಡಿ.ಎಲ್.ಎನ್.ಅವರ ಅಭಿಪ್ರಾಯಗಳಿಗೆ ಭಿನ್ನವಾದ ಅಭಿಪ್ರಾಯಗಳನ್ನು ಮಾತ್ರ ನಾನಿಲ್ಲಿ ಸಂಗ್ರಹಿಸಿದ್ದೇನೆ. ಹಾಗೆ ಸಂಗ್ರಹಿಸುವಾಗ ಮೊದಲು ಡಿ.ಎಲ್.ಎನ್ ಅವರ ಅಭಿಪ್ರಾಯಗಳನ್ನು ಆಶ್ವಾಸಾನುಗುಣವಾಗಿ ಪದ್ಯಸಂಖ್ಯೆಯನ್ನು ಕೊಟ್ಟು ಬಳಿಕ ನನ್ನ ಅಭಿಪ್ರಾಯವನ್ನು ಕೊಟ್ಟಿರುವೆನು. ಪ್ರತಿಪದ್ಯಕ್ಕೂ ಸಂದರ್ಭವನ್ನು ಕೊಟ್ಟಿಲ್ಲ. ಸಹೃದಯರು ಪಂಪಭಾರತವನ್ನೂ ಪಂಪಭಾರತ ದೀಪಿಕೆಯನ್ನೂ ನೋಡಿಕೊಂಡು ಈ ಲೇಖನವನ್ನು ಪರಾಂಬರಿಸಬೇಕು" (ಅದೇ) ಈ ಧೋರಣೆಯಿಂದ ರೂಪುಗೊಂಡುದೇ 'ಪಂಪಭಾರತದೀಪಿಕೆಯ ಮೇಲೊಂದು ಕ್ಷಕಿರಣ' ಎಂಬ ವಿಮರ್ಶಾ ಪರವಾದ ಲೇಖನ. ಇದು ಅಪೂರ್ಣಸ್ಥಿಯಲ್ಲಿದ್ದು ೭ನೇ ಆಶ್ವಾಸದ ೩೫ನೇ ಪದ್ಯದ ವಿಶ್ಲೇಷಣೆಯೊಂದಿಗೆ ನಿಂತು ಬಿಟ್ಟಿದೆ. ಲೇಖಕರ ಮೇಲಿನ ಮಾತುಗಳಲ್ಲಿ ಅವರ ವಿನಯ ಶೀಲತೆ, ಡಿ.ಎಲ್.ಎನ್ ಬಗೆಗಿದ್ದ ಗೌರವಭಾವ, ಲೇಖನದ ಸ್ವರೂಪ ಹಾಗೂ ಉದ್ದೇಶ ಎಲ್ಲವೂ ಸ್ಪಷ್ಟವಾಗುತ್ತವೆ. ಈಲೇಖನವು ಸು.೧೯೭೬ರ ಹೊತ್ತಿಗೆ ಸಿದ್ಧವಾದುದು. ಇದು ಕರಡುರೂಪದಲ್ಲೇ ಇತ್ತೀಚೆಗೆ ನನ್ನ ಕೈ ಸೇರಿದುದಾಗಿದೆ. ಇಲ್ಲಿ ತಾನು ಅನುಸರಿಸಿದ ವಿಧಾನವನ್ನು ಲೇಖಕರೇ ಹೇಳಿಕೊಂಡಿದ್ದಾರೆ. ಅವರು ಎಲ್ಲಿಯೂ ಮೂಲ ಕಾವ್ಯದ ಪದ್ಯಗಳನ್ನಾಗಲೀಪದ್ಯಭಾಗಗಳನ್ನಾಗಲೀ ಕೊಟ್ಟಿಲ್ಲ. ಕೇವಲ ಆಶ್ವಾಸ ಮತ್ತು ಪದ್ಯಸಂಖ್ಯೆಗಳನ್ನು ನಮೂದಿಸಿದ್ದಾರೆ. ಸಾಂದರ್ಭಿಕವಾಗಿ ಪಂಪಭಾರತ ದೀಪಿಕೆಯ ಮಾತುಗಳನ್ನು ಅಲ್ಲಲ್ಲಿ ಉದ್ಧರಿಸಿದ್ದಾರೆ. ಆದರೆ, ಇಲ್ಲಿನ ಸಂಪಾದನೆಯಲ್ಲಿ ಮಾತ್ರ ಓದಿ ಅರ್ಥೈಸುವುದಕ್ಕೆ ಅನುಕೂಲಕರವಾಗಲೆಂದು, ಮೂಲ ಲೇಖನಕ್ಕೆ ಭಂಗ ಬಾರದಂತೆ ಪ್ರತ್ಯೇಕವಾದ ವಿಧಾನವನ್ನು ಅನುಸರಿಸಲಾಗಿದೆ. ಮೊದಲಿಗೆ ಆಯಾ ಭಾಗಕ್ಕೆ ಸಂಬಂಧಿಸಿದಂತೆ 'ವಿಕ್ರಮಾರ್ಜುನ ವಿಜಯ'ದ ಪದ್ಯಗಳು ಇಲ್ಲವೆ ಮಾತುಗಳು; ಬಳಿಕ ಪಂಪಭಾರತ ದೀಪಿಕೆಯ ಅನ್ವಯಾರ್ಥಾದಿಗಳು ಮತ್ತು ಕೊನೆಯಲ್ಲಿ ಸುಬ್ರಾಯ ಭಟ್ಟರ ವ್ಯಾಖ್ಯಾನ ಇವಿಷ್ಟನ್ನು ಅನುಕ್ರಮವಾಗಿ 'ವಿಕ್ರಮಾರ್ಜುನ ವಿಜಯ', 'ದೀಪಿಕೆ' ಮತ್ತು 'ಕ್ಷಕಿರಣ' ಎಂಬ ಉಪಶೀರ್ಷಿಕೆಗಳೊಂದಿಗೆ ಪ್ರಸ್ತುತಪಡಿಸಲಾಗಿದೆ. ಕೆಲವೆಡೆಗಳಲ್ಲಿ ಮಾತ್ರ ಸಂಪಾದಕನ ಟಿಪ್ಪಣಿಗಳನ್ನು ಕಂಸದಲ್ಲಿ (ಸಂ) ಎಂದು ಸೂಚಿಸಲಾಗಿದೆ.

ಪ್ರೊ.ಸುಬ್ರಾಯ ಭಟ್ಟರು ಪ್ರಸ್ತುತ ವಿಮರ್ಶಾತ್ಮಕ ಲೇಖನದಲ್ಲಿ, ತನಗೆ ಉಚಿತವೆಂದು ತೋರಿದಲ್ಲಿ, ದೀಪಿಕೆಯ ಅಭಿಪ್ರಾಯಕ್ಕೆ ತಿದ್ದುಪಡಿ ಸೂಚಿಸಿದ್ದಾರೆ.

ಮತ್ತೆ ಕೆಲವೆಡೆಗಳಲ್ಲಿ "...ಸರಿಯೆಂದುತೋರುವುದಿಲ್ಲ, ..ಎಂದಾಗಿರಬೇಕು, .. ಎಂದಲ್ಲವೇ, .. ಹೊಂದುತ್ತದೆಯಲ್ಲವೇ, ..... ಎಂದಾಗಬೇಡವೇ?, ......... ಹೀಗೆ ಅರ್ಥೈಸುವುದು ಉಚಿತವಲ್ಲವೇ" ಎಂಬಿತ್ಯಾದಿಯಾಗಿ ತಮ್ಮ ಅಭಿಮತವನ್ನು ಮಂಡಿಸಿದ್ದಾರೆ.

'ಕ್ಷಕಿರಣ'ದಲ್ಲಿ ಪ್ರಸ್ತಾಪಿಸಿದ ಒಳನೋಟಗಳೆಲ್ಲ ಪಂಪಭಾರತವನ್ನು ಹಾಗೆಯೇ ಪಂಪಭಾರತ ದೀಪಿಕೆಯನ್ನು ಅಧ್ಯಯನ ಮಾಡುವ ಅಭ್ಯಾಸಿಗಳನ್ನು ಚಿಂತನೆಗೆ ಪ್ರೇರೇಪಿಸುವಲ್ಲಿ ಯಶಸ್ವಿಯಾಗಬಹುದು ಎಂದು ನಿರೀಕ್ಷಿಸಲಾಗಿದೆ.

# ಪಂಪಭಾರತ ದೀಪಿಕೆಯ ಮೇಲೊಂದು ಕ್ಷ ಕಿರಣ

ಪ್ರೊ. ಪಿ. ಸುಬ್ರಾಯಭಟ್, ಕಾಸರಗೋಡು

೧. ವಿಕ್ರಮಾರ್ಜುನ ವಿಜಯ : ೧-೨೯

ಸುರಭಿದೇವತೆಯೆಂಬ ಕಾಪಿನೆ ಮಾಣ್ದುದೇಱುವುದೊಂದದೆಂದಿರದೆ ಮಾಣ್ದುದು ದೇವ ವಾರಣವೇೞ್ ಉಂಟವು ಪೋದೊಡಾ ಖರಕರಂಗರಿದೆಂದೆ ಮಾಣ್ದರೆ ಮಾಣ್ದುವಾ ಹರಿ ನೀನೆ ಪೇೞರಿಯವೆಂದಿವು ಭದ್ರದೇವರ ಚಾಗದೊಳ್ಪೊೞಗಾದುದೇ

ದೀಪಿಕೆ

ಈ ಪದ್ಯದಲ್ಲಿ ಅನೇಕ ಪಾಠಕ್ಲೇಶಗಳಿರುವುದರಿಂದ ಅದರ ಅರ್ಥ ಸರಿಯಾಗಿ ಆಗುವುದಿಲ್ಲ. ಕೊನೆಯ ಪಂಕ್ತಿ: ಅರಿಯವೆಂದಿವು – ಅಪೂರ್ವವಸ್ತುಗಳಾದ ಇವು; ಭದ್ರದೇವನ ಚಾಗದೊಳ್– ಭದ್ರದೇವನು ಮಾಡುವ ದಾನಗಳಲ್ಲಿ, ಪೊಱಗಾದುವೇ– ಹೊರಗಾದುವೇ. ಆದುವು ಎಂಬ ಭಾವ. ಈ ಅಪೂರ್ವ ವಸ್ತುಗಳು ಯಾವುವು? ಸುರಭಿ– ಕಾಮಧೇನು, ಬೇಡಿದವರಿಗೆ ಬೇಡಿದ್ದನ್ನೆಲ್ಲ ಕೊಡುತ್ತೇನೆಂದು ಹೇಳುವ ಆ ದೇವತೆಯ, ಗೋಸಣೆ – ಕೂಗು, ಸಾರಿಹೇಳುವುದು; ಮಾಣ್ದುದು – ನಿಂತು ಹೋಯಿತು. [ಇಲ್ಲಿ 'ಕಾಪಿನೆ', ಎನ್ನವುದರ ಬದಲು 'ಗೋಸಣೆ' ಎಂಬ ಪಾಠಾಂತರವನ್ನು ಸ್ವೀಕರಿಸಿ ಅರ್ಥೈಸಲಾಗಿದೆ] ಎಂದರೆ ಬದ್ದೆಗನ ದಾನ ಕಾಮಧೇನುವನ್ನು ಕೂಡ ಮೀರಿಸಿತು. ಉಳಿದ ವಸ್ತುಗಳ ಸ್ವರೂಪ ಖಚಿತವಾಗಿ ತಿಳಿಯುವುದಿಲ್ಲ. ಖರಕರ– ಸೂರ್ಯ, ದೇವವಾರಣ– ಇಂದ್ರನ ಆನೆ, ಐರಾವತ; ಏೞೆಯುಂಟವು– ಅವು ಏಳೇ ಇವೆ ಎಂದರೆ ಏನೋ? ಆ ಹರಿ – ಆ ಕುದುರೆಗಳು, ಎಂದರೆ ಸೂರ್ಯನ ಸಪ್ತಾಶ್ವಗಳು. ಪದ್ಯದ ತಾತ್ಪರ್ಯ ತಿಳಿಯುವಂತಿಲ್ಲ.

ಕ್ಷಕಿರಣ:

ಈ ಪದ್ಯದ ಅನ್ವಯ:

ಸುರಭಿ, ದೇವತೆಯೆಂಬರ ಆವಿರೆ ಮಾಣ್ದುದು. ದೇವವಾರಣಂ ಏಱುವುದು ಒಂದೆ ಅದು ಎಂದು ಇರದೆ ಮಾಣ್ದುದು. ಆ ಹರಿ ಏೞೆಉಂಟು; ಅವು ಪೋದೊಡೆ ಆ ಖರಕರಂಗೆ ಅರಿದು ಎಂದೆ ಮಾಣ್ದುದು. ನೀನೆ ಪೇೞ್. ಇವು ಅರಿಯವು ಎಂದು ಭದ್ರದೇವರ ಚಾಗದೊಳ್ ಪೊಱಗಾದುದೇ.

ತಾತ್ಪರ್ಯ : ಕಾಮಧೇನುವು ದೇವತೆಗಳೆನ್ನುವವರ ಗೋವಾದುದರಿಂದ ಅದನ್ನು ಬಿಟ್ಟದ್ದು. ಇಂದ್ರನಿಗೆ ಏರುವುದಕ್ಕೆ ಐರಾವತ ಒಂದೇ ಇದೆ ಎಂಬ ಕಾರಣದಿಂದ

ಅದನ್ನು ಬಿಟ್ಟದ್ದು. ಸೂರ್ಯನಿಗೆ ಇರುವುದು ಏಳೇ ಕುದುರೆಗಳು. ಅವುಗಳನ್ನು ತಾನು ವಶಪಡಿಸಿಕೊಂಡರೆ ಅವನ ಕಾರ್ಯವು ಕಷ್ಟವಾಗಬಹುದೆಂದೇ ಅವುಗಳನ್ನು ಬಿಟ್ಟೇಬಿಟ್ಟದ್ದು. ಸಹೃದಯನೇ! ಈಗ ನೀನೇ ಹೇಳು, ಇವು ಕಷ್ಟಸಾಧ್ಯವೆಂಬುದರಿಂದ ಭದ್ರದೇವರ ತ್ಯಾಗಕ್ಕೆ ಹೊರತಾದುವಲ್ಲದೆ ಬೇರೇನೂ ಅಲ್ಲ.

ಕಾಮಧೇನು, ಐರಾವತ, ಸೂರ್ಯಾಶ್ವಗಳನ್ನು ದೇವತೆಗಳಿಗಾಗಿ, ದೇವೇಂದ್ರನಿಗಾಗಿ ಸೂರ್ಯನಿಗಾಗಿ ಕರುಣೆದೋರಿ ಬಿಟ್ಟದ್ದು. ಇವೆಲ್ಲವೂ ಭದ್ರದೇವನ ತ್ಯಾಗಕ್ಕೆ ಸೇರಿದವುಗಳೇ ಸರಿ.

'ದೇವತೆಯೆಂಬ ಕಾಪಿನೆ' ಎನ್ನುವುದು 'ದೇವತೆಯೆಂಬರಾವಿರೆ – ದೇವತೆಯೆಂಬರ ಆವಿರೆ– ಆವು+ಇರೆ, ಎಂದಾಗಬೇಕು. ಇದು ಪ್ರತಿಕಾರನ ಪ್ರಮಾದವೆನ್ನುವುದರಲ್ಲಿ ಅನುಮಾನವಿಲ್ಲ.

೨. ವಿಕ್ರಮಾರ್ಜುನ ವಿಜಯ : ೧–೩೩

ತಱಿಸಂದು ಲಾಟರೊಳ್ ತ
ಳ್ತಿಟಿದೇಟಿಂ ಪೇಟಿಕೇಳ್ದು ಮಂಡಲ ಮಿನ್ನುಂ
ತಿಱುನೀರಿಕ್ಕುವುದೆನಸಿದ
ತಱಿ ಸಲವಿನ ಚಲದ ಬಲದ ಕಲಿ ನರಸಿಂಹಂ

**ದೀಪಿಕೆ :**

ತಿಱುನೀರಿಕ್ಕುವುದು – ತರ್ಪಣೋದಕವನ್ನು ಕೊಡುತ್ತಿದೆ; ಎನಸಿದ – ಎನ್ನಿಸಿಕೊಂಡ; ತಱಿಸಲವಿನ– ಸ್ಥಿರಸಂಕಲ್ಪದ; ಚಲದ–ಹಠದ; ಬಲದ–ಶಕ್ತಿಯ; ಕಲಿ–ಶೂರನು; ನರಸಿಂಹಂ– ನರಸಿಂಹನಾಗಿದ್ದಾನೆ.

ಇಲ್ಲಿ ಏಱು=ಯುದ್ಧ; ತಿಱುನೀರ್=ತಿಱುವ ನೀರ್ ಎಂದರೆ ತೆರುವ ನೀರು, ಸತ್ತವರಿಗಾಗಿ ತರ್ಪಣ ಕೊಡುವ ನೀರು.*** **ಕ್ಷಕಿರಣ:**

ಇಲ್ಲಿ ತಿಱುನೀರ್ ಎಂದರೆ ಪವಿತ್ರವಾದ ನೀರು, ಪುಣ್ಯ ತೀರ್ಥ ಎಂದಲ್ಲವೇ? ಶ್ರೀ (ಸಂ) ತಿಱು(ತ್ಭ); ತಿಱುವಡಿ – ಶ್ರೀಪಾದ ತಿರುನೀರಕ್ಕುವುದು ಎಂಬುದಕ್ಕೆ 'ಕಿಱು ನೀರುಕ್ಕುವುದು' ಎಂಬ ಪಾಠಾಂತರವಿರುವುದು ಗಮನಾರ್ಹ

ಲಾಟರೊಳ್ ತಟ್ತಿರಿದ ಏಱಿಂ ಪೇಱು ಕೇಳ್ದು ಮಂಡಲಂ ಇನ್ನುಂ ಕಿಱುನೀರುಕ್ಕುವುದು – ಎಂದರೆ ಹಿಂದೆಂದೋ ನಡೆದ ಯುದ್ಧವನ್ನು (ಕುರಿತು) ಹೇಳಿದಾಗ ಅದನ್ನು ಕೇಳಿ ಆ ಲಾಳಮಂಡಲವು ಈಗಲೂ ಬೆವರುತ್ತಿದೆ ಎಂದರೆ ಅಲ್ಲಿಯ ಜನರು ಭಯದಿಂದ ಈಗಲೂ ಬೆವರುತ್ತಿದ್ದಾರೆ ಎಂಬ ತಾತ್ಪರ್ಯವಾಗುತ್ತದೆ.

ನೀರುಕ್ಕು – ಬೆವರು; ಕಿಱು ನೀರುಕ್ಕು; ಕಿಱುಬೆಮರುಕ್ಕು – ಸಣ್ಣಗೆ ಬೆವರು ಸುರಿಸು.

[ನೀರುಕ್ಕು ಎಂಬುದಕ್ಕೆ ಬೆವರು ಎಂಬ ಅರ್ಥ ಪ್ರಚಲಿತವಾಗಿದೆಯೇ? – ಸಂ]

೩. **ವಿಕ್ರಮಾರ್ಜುನ ವಿಜಯ : ೧–೫೧**

... ಉಗ್ರೋದ್ಘಾಸಿ ಭಾಸ್ವದ್ಭುಜ ಪರಿಘನಂ ...

**ದೀಪಿಕೆ** : ಉಗ್ರೋದ್ಭಾಸಿ ಭಾಸ್ವದ್ಭುಜ ಪರಿಘನಂ – ಭಯಂಕರವೂ ಶ್ರೇಷ್ಠವೂ ಆದ ಕತ್ತಿಯಿಂದ ಪ್ರಕಾಶಮಾನವಾದ ತೋಳೆಂಬ ಪರಿಘಾಯುಧವುಳ್ಳ – ಪರಿಘ – ಕಬ್ಬಿಣದ ಒನಕೆ

**ಕ್ಷಕಿರಣ** : ಈ ಅರ್ಥ ಸರಿಯಲ್ಲ. ಪರಿಘವೆಂದರೆ ಹೆಬ್ಬಾಗಿಲಿನ ಅಗುಳಿ, ಚಿಲಕ, ಲಾಳವಿಂಡಿಗೆ; ಭುಜಪರಿಘನಂ ಎಂದರೆ ಪರಿಘದಂತೆ ದೀರ್ಘವೂ ಕಠಿಣವೂ ಆಗಿರುವ ತೋಳುಗಳುಳ್ಳವನು ಎಂದರ್ಥ (ನೋ: ಪುರಪರಿಘಾಯತಾತ್ಮಭುಜಂ. ಕನ್ನಡ ಅಭಿಜ್ಞಾನ ಶಾಕುಂತಲ)

೪. **ವಿಕ್ರಮಾರ್ಜುನ ವಿಜಯ** : ೧–೩೨

. ಜೋಲ್ವ ಶಾಳಿನವಶಾಳಿಗೆ ಪಾಯ್ವ ಶುಕಾಳಿ...............

**ದೀಪಿಕೆ:**

ಜೋಲ್ವ – ಜೋತುಬಿದ್ದಿರುವ, ಶಾಲಿ –ಬತ್ತ; ನವಶಾಲಿಗೆ – ಈ ಹೊಸದಾದ ನೆಲ್ಲಿಗೆ; ಆ ಫಿಷಯಾಂತರಾಳಮಂ – ಆ ದೇಶದ ಹರವನ್ನು

**ಕ್ಷಕಿರಣ** :

(ನವ) ಶಾಳಿಗೆ – ಈ ಹೊಸದಾದ ನೆಲ್ಲಿಗೆ. ಇಲ್ಲಿ ಸಂಪಾದಕರ ಸ್ವೀಕೃತಪಾಠ ಅನಗತ್ಯ. ಇಲ್ಲಿರುವ ಪಾಠಾಂತರ 'ವನ' (ಕ.ಖ.ಫ ಎಂಬುದೇ ಸರಿಯಾದುದೆಂದು ತೋರುತ್ತದೆ. 'ವನಶಾಳಿ' ಎಂದರೆ 'ಶಾಳಿವನ' – ನೆಲ್ಲು ಹೊಲಗಳ ಸಮೂಹ (ಕಂಜವನ = ತಾವರೆಗಳ ಸಮೂಹ ಎಂಬಂತೆ)

೫. **ವಿಕ್ರಮಾರ್ಜುನ ವಿಜಯ:** ೧–೭೧

ಕ್ರಮವಂ ವಿಕ್ರಮದಿಂದೆ ತಾಳ್ದುವ ಮಗಂ............ ನಿಜಕ್ರಮಮಂ ಎನ್ನಕುಲಮುಂ ತಕ್ಕೂರ್ಮೆಯುಂ ಮಾಸದೇ

**ದೀಪಿಕೆ** :

ಕ್ರಮಮಂ – ಪರಂಪರಾಗತ ಪದವಿಯನ್ನು; ವಿಕ್ರಮದಿಂದೆ – ಪರಾಕ್ರಮದಿಂದ; ತಾಳ್ದುವ – ತಾಳುವ; ಎನ್ನಕುಲಮುಂ – ತನ್ನ ಕುಲದ ಯಶಸ್ಸೂ; ನಿಜಕ್ರಮಮಂ – ಸಹಜವಾದ ಕ್ರಮವನ್ನು, ಪದವಿಯನ್ನು; ತಕ್ಕೂರ್ಮೆಯುಂ – ಅತಿಶಯವಾದ ಯೋಗ್ಯತೆಯೂ; ಮಾಸದೇ – ಮಾಸುವುದಿಲ್ಲವೇ? ಮಾಸುತ್ತದೆ ಎಂದು ತಾತ್ಪರ್ಯ. ತಕ್ಕೂರ್ಮೆ = ತಕ್ಕು + ಊರ್ಮೆ; ತಕ್ಕು – ಯೋಗ್ಯತೆ; ಊರ್ಮೆ – ಆಧಿಕ್ಯ

**ಕ್ಷಕಿರಣ:**

ಕ್ರಮಮಂ ವಿಕ್ರಮದಿಂದೆ ತಾಳ್ದುವ ಮಗನ್ – ಪರಂಪರಾಗತ ಪದವಿಯನ್ನು ಪರಾಕ್ರಮದಿಂದ ತಾಳುವ ಮಗ. ಇಲ್ಲಿ ಕ್ರಮ ಎಂದರೆ ಪರಾಕ್ರಮ ಎಂದರ್ಥ. ಹಾಗೆಯೇ ನಿಜಕ್ರಮಮಂ ಎಂದರೆ ಸಹಜವಾದ ಕ್ರಮವನ್ನು, ಪದವಿಯನ್ನು ಎಂದಲ್ಲ. ತನ್ನ ರಾಜ್ಯವನ್ನು ಎಂದಾಗಬೇಕು. ಎನ್ನಕುಲಮುಂ ತಕ್ಕೂರ್ಮೆಯಂ ಮಾಸದೇ – ನನ್ನ ವಂಶದ ಯಶಸ್ಸೂ ಅತಿಶಯವಾದ ಯೋಗ್ಯತೆಯೂ ಮಾಸುವುದಿಲ್ಲವೇ?

'ತಕೂರ್ಮೆಯಂ' ಎಂಬ ಪಾಠಾಂತರವಿದೆ. (ತತ್+ಕೂರ್ಮೆ) ಇದನ್ನು

ಲಕ್ಷಿಸಬೇಕು. ಶಂತನು ಕಾಮಿನೀ ವ್ಯಾಮೋಹ, ಪುತ್ರವ್ಯಾಮೋಹಗಳ ಸೆಳೆತಕ್ಕೆ ಸಿಕ್ಕಿದ್ದಾನೆ. ಈ ಉಭಯ ಸಂಕಟವನ್ನು ಮನಸ್ಸಿಗೆ ತಂದುಕೊಂಡಲ್ಲಿ ಈ ಪಾಠವೇ ಯೋಗ್ಯವೆಂದು ತೋರದಿರದು. ಯೋಜನಗಂಧಿಯನ್ನು ವರಿಸುವುದರಿಂದ ಜನಾಪವಾದವೂ ಕುಲಕ್ಕೆ ಕಳಂಕವೂ ಬರುವುದಷ್ಟೇ ಅಲ್ಲ, ಇದುವರೆಗೆ ತನ್ನ ಮೇಲಿಟ್ಟಿದ್ದ ತತ್ - ಗಾಂಗೇಯನ ಕೂರ್ಮೆಯೂ - ವಾತ್ಸಲ್ಯವೂ ಮಾಸದೇ - ಕುಂದುವುದಿಲ್ಲವೇ ಎಂಬ ಧರ್ಮಸಂಕಟದಲ್ಲಿ ಚಡಪಡಿಸುತ್ತಾನೆ ಶಂತನು.

೬. **ವಿಕ್ರಮಾರ್ಜುನ ವಿಜಯ** : ೧-೭೨

.. ತನ್ನಯ ತಂದೆಯೆಂದುದನೆ ಕೊಟ್ಟು ..

**ದೀಪಿಕೆ :**

ತನ್ನಯ ತಂದೆಯೆಂದುದನೆ ಕೊಟ್ಟು - ತನ್ನ ತಂದೆ ಹೇಳಿದ್ದನ್ನೇ ದಾಶರಾಜನಗೆ ಕೊಟ್ಟು

**ಕ್ಷಕಿರಣ :**

ಇಲ್ಲಿಯ ತನ್ನಯ ತಂದೆ ಎಂದರೆ ಶಂತನುವೇ? ಹಾಗಿದ್ದರೆ ಅವನು ಅಂದುದಾದರೂ ಏನು? 'ತನ್ನಯ ತಂದೆ' ಎಂದರೆ ಆಕೆಯ (ಯೋಜನಗಂಧಿಯ) ತಂದೆಯಾದ ದಾಶರಾಜ ಎಂದಲ್ಲವೇ? ಎಂದುದನೆ ಕೊಟ್ಟು ಎಂದರೆ ಅವನು ಕೇಳಿದುದನ್ನೆಲ್ಲ ಸಲ್ಲಿಸಿ ಅರ್ಥಾತ್ ಯೋಜನಗಂಧಿಯಲ್ಲಿ ಜನಸುವ ಹಿರಿಯ ಮಗನಗೇ ರಾಜ್ಯಾಧಿಕಾರವನ್ನಿತ್ತು. ಇಲ್ಲಿ 'ಕನ್ನೆಯ ತಂದೆ' ಎಂಬ ಪಾಠ ಇದ್ದಿರಬಹುದೇ?

೭. **ವಿಕ್ರಮಾರ್ಜುನ ವಿಜಯ** : ೧-೭೫

ಈಗಳಬ್ಬೆಯೆಂದತ್ತಿಗೆಯೆಂಬ ಮಾತನೆನಗೇನೆನಲಕ್ಕುಮೊ

**ದೀಪಿಕೆ :**

ಈಗಳ್ - ಈಗ, ಅಬ್ಬೆಯೆಂದು - ತಾಯಿಯೆಂದು ಕರೆದು, ಆಮೇಲೆ, ಅತ್ತಿಗೆಯೆಂಬ ಮಾತಂ - ಪ್ರೀತಿಸಿದವಳು, ನಲ್ಲಳು ಎಂಬ ಮಾತನ್ನು ಎನಗೆ - ನನಗೆ, ಎನಲ್ - ಹೇಳಲು, ಅಕ್ಕುಮೊ - ಆಗುತ್ತದೆಯೋ? ಆಗುವುದಿಲ್ಲ ಎಂಬ ಭಾವ.

**ಕ್ಷಕಿರಣ :**

'ಅಬ್ಬೆಯೆಂದತ್ತಿಗೆಯೆಂಬ ಮಾತನೆನಗೇನನಲಕ್ಕುಮೊ' ಈ ಪಾಠ ಸರಿಯೆಂದು ತೋರುವುದಿಲ್ಲ. 'ಅಬ್ಬೆಯೆಂಬತ್ತಿಗೆಯೆಂಬ ಮಾತನೆಲಗೇ ಎನಲಕ್ಕುಮೊ' ಎಂಬ ಭಿನ್ನಪಾಠವೇ ಸರಿಯಾದುದು. ಇಲ್ಲಿ 'ಅತ್ತಿಗೆ' ಎಂಬ ಪದಕ್ಕೆ 'ನಲ್ಲೆ' ಎಂದು ಅರ್ಥವನ್ನು ಹೇಳಿದ್ದು ಸರಿಯೆಂದು ತೋರುವುದಿಲ್ಲ. ಅಬ್ಬೆಯ ಸ್ಥಾನ ಅತ್ತಿಗೆಗೆ. ಅಬ್ಬೆ, ಅತ್ತಿಗೆ ಎಂದು ಹೇಳಬೇಕಾದ ಈ ನಾಲಿಗೆಯಲ್ಲಿ 'ಎಲಗೇ' ಎಂದು ಹೇಗೆನ್ನಲಿ ಎಂಬುದು ಭೀಷ್ಮನ ಚಿಂತೆ. ಪತ್ನಿಯನ್ನು ಎಲೇ, ಎಲಗೇ, ಏನೇ ಇತ್ಯಾದಿಯಾಗಿ ಪ್ರೇಮಾಧಿಕ್ಯದಿಂದಲೋ ಅಧಿಕಾರವಾಣಿಯಿಂದಲೋ ಸಂಬೋಧಿಸುವುದು ಗಂಡಿನ ಜಾಯಮಾನ.

೮. **ವಿಕ್ರಮಾರ್ಜುನ ವಿಜಯ** : ೧–೭೫ರ ಮುಂದಿನ ವಚನ ; ಎಂದು ನುಡಿದ ಗಾಂಗೇಯನ ನುಡಿಯೊಳವಸರಮಂ ಪಸರಮಂ ಪಡೆಯದೆ.

**ದೀಪಿಕೆ :**

ಅವಸರಮಂ – ಅವಕಾಶವನ್ನು, ಪಸರಮಂ – ಸಲಿಗೆಯನ್ನು, ಪಡೆಯದೆ – ಹೊಂದದೆ.

**ಕ್ಷಕಿರಣ :**

ಇಲ್ಲಿ ಅಪಸ್ವರ ಎಂಬ ಸಂಸ್ಕೃತ ಶಬ್ಧದ ತದ್ಭವ ಅವಸರ. ಪಸರಮಂ = ಮೆಚ್ಚುಗೆಯನ್ನು ಎಂದರೆ ಕಹಿ ಅನುಭವವನ್ನು ಅರ್ಥಾತ್ ಗಾಂಗೇಯನ ಮಾತಿನಿಂದ ದುಃಖವನ್ನಾಗಲೀ ಸಂತೋಷವನ್ನಾಗಲೀ ಹೊಂದದೆ ಎಂದಾಗಬೇಡವೇ?

೯. **ವಿಕ್ರಮಾರ್ಜುನ ವಿಜಯ** : ೧–೭೭

. ಎನ್ನಂ ಕರಂ ನಂಬಿದಂಬೆಯೊಳೆನ್ನಂಬೆವಲಂ ..

**ದೀಪಿಕೆ :**

ಎನ್ನಂ ಕರಂ ನಂಬಿದ – ನನ್ನನ್ನು ವಿಶೇಷವಾಗಿ ನಂಬಿದ, ಅಂಬೆಯೊಳ್ – ಅಂಬೆಯಲ್ಲಿ; ಎನ್ನ ಅಂಬೆವಲಂ – ನನ್ನ ಬಾಣವೇ ನಿಶ್ಚಯವಾಗಿಯೂ

**ಕ್ಷಕಿರಣ:**

ಎನ್ನಂಬೆ (ವ)ಲಂ – ನನ್ನ ಬಾಣವೇ ನಿಶ್ಚಯವಾಗಿಯೂ. ಇಲ್ಲೇನೋ ಕ್ಲಿಷ್ಟತೆಯಿದೆ. 'ಎನ್ನಂಬೆವೊಲಂ' ಎಂಬ ಪಾಠವೇ (ಕ.ಖ.ಗ) ಸರಿಯಾಗಿರಬೇಕು. ಪರಶುರಾಮನಿಗೆ ತನ್ನ ತಾಯಿಯ ಮೇಲೆ ಅಪಾರ ಭಕ್ತಿಗೌರವಗಳು, ಅಂತಹ ವಿಶ್ವಾಸದಿಂದ ಕೂಡಿದವನಾಗಿ ಆ ವಿವಾಹ ಕಾರ್ಯವನ್ನು ಮಾಡುತ್ತೇನೆ. ನನ್ನಿಂದಲ್ಲದೆ ಇತರರಿಂದ ಇದು ಸಾಧ್ಯವೇ? ಬಹುಶಃ ಇಲ್ಲಿ 'ಎನ್ನಂಬೆವೊಲಾಂ' ಎಂದು ಇದ್ದಿರಬಹುದೇ ಹೇಗೆ? ಎನ್ನ + ಅಂಬೆವೊಲ್ + ಆಂ.

೧೦. **ವಿಕ್ರಮಾರ್ಜುನ ವಿಜಯ : ೧–೭೭** ರ ಅನಂತರದ ವಚನ . ಪರಶುರಾಮನ ಬರಮಂ ಗಾಂಗೇಯಂ ಕೇಳ್ದಿದಿರ್ವಂದು ಕನಕ ರಜತ ಪಾತ್ರಂಗಳೊಳ್ ಅರ್ಘ್ಯಮಂ ಕೊಟ್ಟು

**ದೀಪಿಕೆ :**

ಬರಮಂ – ಆಗಮನವನ್ನು, ಇದಿರ್ವಂದು – ಎದುರಾಗಿ ಬಂದು, ಎದುರ್ಗೊಂಡು; ಕನಕರಜತ ಪಾತ್ರಂಗಳೊಳ್ – ಚಿನ್ನದ, ಬೆಳ್ಳಿಯ ಪಾತ್ರೆಗಳಲ್ಲಿ, ಅರ್ಘ್ಯಮಂ – ಕೈತೊಳೆಯುವ ನೀರನ್ನು

**ಕ್ಷಕಿರಣ :**

ಅರ್ಘ್ಯಮಂ – ಕೈತೊಳೆಯುವ ನೀರನ್ನು – ಈ ಸಂದರ್ಭದಲ್ಲಿ ಇದು ಸರಿಯೇ? ಕುಡಿಯುವುದಕ್ಕೆ ಕೊಡುವ ನೀರಲ್ಲವೇ? ಅತಿಥಿ ಸತ್ಕಾರಾವಸರದಲ್ಲಿ ಕೊಡುವ ಹೂ, ಹಣ್ಣು, ಕಾಯಿ, ನೀರು ಇವುಗಳೇ ಮುಂತಾದ ಪದಾರ್ಥಗಳಿಗೆ ಅರ್ಘ್ಯವೆನ್ನುವರು (ಅರ್ಘ್ಯ ಎಂಬುದಕ್ಕೆ ಕೈ ತೊಳೆಯುವ ನೀರು ಎಂಬುದಲ್ಲದೆ ಪೂಜಾದ್ರವ್ಯಗಳು

ಎಂಬ ಅರ್ಥವೂ ಉಂಟು – ಸಂ)

೧೧. **ವಿಕ್ರಮಾರ್ಜುನ ವಿಜಯ** : ೧–೮೨

ಕಿಡುಗುಮೆ ರಾಜ್ಯಂ ರಾಜ್ಯದ
ತೊಡರ್ಪುದೇವಾಟ್ಟಿ ನನ್ನಿಯ ನುಡಿಯಂ
ಕಿಡೆನೆಗಟಿ ನಾನುಮೆರಡಂ
ನುಡಿದೊಡೆ ಹರಿಹರ ಹಿರಣ್ಯಗರ್ಭರ್ ನಗರೇ

**ದೀಪಿಕೆ :**

ರಾಜ್ಯಂ ಕಿಡುಗುಮೆ – ರಾಜ್ಯವು ಕೆಟ್ಟೇಕೆಡುತ್ತದೆ ಎಂದರೆ ಅಶಾಶ್ವತ. ತೊಡರ್ಪು – ರಾಜ್ಯದ ತೊಡಕು, ಬಂಧನ, ಕಟ್ಟು; ಏವಾಟ್ಟಿ –ಏನು ಪ್ರಯೋಜನ ಎಂದರೆ ಈ ನಶ್ವರವಾದ ರಾಜ್ಯದ ತೊಡರಿನಿಂದ ನನಗೇನು ಪ್ರಯೋಜನ? ಬಾಟ್ಟಿ –ಬದುಕು; ನನ್ನಿಯ ನುಡಿಯಂ – ಸತ್ಯದ ಮಾತನ್ನು, ಪ್ರತಿಜ್ಞೆಯನ್ನು; ಕಿಡಿ ನೆಗಟಿ – ಹಾಳಾಗುವಂತೆ ನಡೆದರೆ, ನಾನುಂ – ನಾನು ಕೂಡ, ಎರಡಂ ನುಡಿದೊಡೆ – ಎರಡು ಮಾತನ್ನಾಡಿದರೆ ಎಂದರೆ ಸುಳ್ಳಾಡಿದರೆ

**ಕ್ಷಕಿರಣ :**

ಈ ಪದ್ಯದ ಅರ್ಥವನ್ನು ಸ್ಪಷ್ಟಪಡಿಸಿಲ್ಲ. 'ನಾನು' ಎಂಬ ರೂಪ ಹಳಗನ್ನಡದಲ್ಲಿಲ್ಲ 'ಆನ್' ಎಂಬುದು ಹಳಗನ್ನಡ ರೂಪ.

ರಾಜ್ಯಂ ಕಿಡುಗುಮೆ ಎಂದರೆ ರಾಜ್ಯವು ಕೆಟ್ಟೇಕೆಡುತ್ತದೆ, ಅಶಾಶ್ವತ. ಇದು ಪ್ರಶ್ನಾರ್ಥಕವಲ್ಲವೇ? 'ರಾಜ್ಯವು ಕೆಟ್ಟು ಹೋಗುವುದೇ? ಹಾಗಿದ್ದಲ್ಲಿ, ರಾಜ್ಯದ ತೊಡರ್ಪು ಅದೇ ವಾಟ್ಟಿ – ರಾಜ್ಯದ ತೊಡಕು ಏನು ಪ್ರಯೋಜನ? ನನ್ನಿಯ ನುಡಿಯಂ ಕಿಡೆನೆಗಟಿನ್ – ಪ್ರತಿಜ್ಞೆಯು ಕೆಡುವಂತೆ ನಡೆಯೆನು; ಆನುಂ ಎರಡಂ ನುಡಿದೊಡೆ – ನಾನೂ ಸುಳ್ಳಾಡಿದೆನೆಂದಾದರೆ' – ಹೀಗೆ ಅರ್ಥೈಸುವುದು ಉಚಿತವಲ್ಲವೇ?

೧೨. **ವಿಕ್ರಮಾರ್ಜುನ ವಿಜಯ** : ೧–೮೭ರ ಅನಂತರದ ವಚನ

ಷೋಡಶ ಕ್ರಿಯೆಗಳಂ ಗಾಂಗೇಯಂ ತಾಂ ಮುಂತಿಟ್ಟು ಮಾಡಿ

**ದೀಪಿಕೆ :**

ಷೋಡಶ ಕ್ರಿಯೆಗಳಂ – ಹದಿನಾರು ಕರ್ಮಗಳನ್ನು; ಮುಂತಿಟ್ಟು – ಪ್ರಧಾನವಾಗಿ ಇಟ್ಟು ಮಾಡಿ;

**ಕ್ಷಕಿರಣ :**

'[ಗಾಂಗೇಯಂ ತಾಂ] ಮುಂತಿಟ್ಟು ಮಾಡಿ – [ಗಾಂಗೇಯನು ತಾನು] ಪ್ರಧಾನವಾಗಿ ಇಟ್ಟು ಮಾಡಿ' – ಇಲ್ಲಿ ಅರ್ಥ ಸ್ಪಷ್ಟವಿಲ್ಲ. ಇದು ಬಹುಶಃ ಗಾಂಗೇಯಂ ತಾಂ ಮುಂತಿರ್ದುಮಾಡಿ' ಎಂದರೆ 'ತನ್ನ ಮುಂದಾಳುತನದಲ್ಲಿ ನೆರವೇರಿಸಿ' ಎಂದಾಗಿರಬೇಕು.

೧೩. ವಿಕ್ರಮಾರ್ಜುನ ವಿಜಯ : ೧–೯೨

.. ಗಂಗೆಯ ಮಡು ಕರೆಗಣ್ಮಿದುದು

**ದೀಪಿಕೆ :**

.. ಗಂಗೆಯ ಮಡು – ಗಂಗಾನದಿಯ ಮಡು; ಕರೆಗಣ್ಮಿದುದು – ಎರಡು ದಡಗಳನ್ನು ತೀಡಿಕೊಂಡು ಹರಿಯಿತು. . ಕರೆಗಣ್ಮ= ಕರೆಯು – ತೀರವನ್ನು, ಪಾತ್ರದ ಅಂಚುಗಳನ್ನು + ಕಣ್ಮ<ಕಲ್ಮ– ತುಂಬು [ತಮಿಳು:ಕೀಲಮು – ತುಂಬು, ಮೀರು]

**ಕ್ಷಕಿರಣ :**

ಕರೆಗಣ್ಮ – ಕರೆಯಂ+ಕಣ್ಮ – ದಡವನ್ನು ತುಂಬು. ಇದು ಸರಿಯೇ? ಕರೆಗೆ+ಅಣ್ಮ–

– ದಡಕ್ಕೆ ಹಾಯು ಎಂದಲ್ಲವೇ?

೧೪. ವಿಕ್ರಮಾರ್ಜುನ ವಿಜಯ : ೧–೯೩

.. ಆಂ ಮರುಳಿಯೆನೆಯಱಿದುಮಱಿಯದೆ

ದೀಪಿಕೆ :

.. ಆಂ ಮರುಳಿಯೆನ್ – ನಾನು ತಿಳಿಯದವಳು, ಭ್ರಮೆಗೊಂಡವಳು ಇದ್ದೇನೆ. ಅಱಿದುಮಱಿಯದೆ – ತಿಳಿದೂ ತಿಳಿಯದೆ.

ಕ್ಷಕಿರಣ :

ಮರುಳಿಯೆನ್ – ನಾನು ಭ್ರಮೆಗೊಂಡವಳಾಗಿದ್ದೇನೆ. – ಇಲ್ಲಿಯ ಪದವಿಂಗಡಣೆ ಸಮರ್ಪಕವಲ್ಲ 'ಮರುಳಿಯೆನೆ + ಅಱಿದುಂ' ಎಂದಾಗಬೇಕು. ಮರುಳಿಯೆನೆ ಎಂದರೆ ಹುಚ್ಚಿಯಂತೆ – ಹುಚ್ಚುಹಿಡಿದವಳಂತೆ – ಬುದ್ಧಿಗೆಟ್ಟು ಎಂದಾಗಬೇಕು.

**೧೫. ವಿಕ್ರಮಾರ್ಜುನ ವಿಜಯ : ೧–೧೦೫ ರ ಅನಂತರದ ವಚನ.**

ಕರ್ಣನು ಶಾಪಹತನಾಗಿ ಮಗುೞ್ದು ಬಂದು ಸೂತನ ಮನೆಯೊಳಿರ್ಪನ್ನೆಗಂ ..

**ದೀಪಿಕೆ :**

ಮಗುೞ್ದು ಬಂದು –ಹಿಂದಿರುಗಿ ಬಂದು, ಸೂತನ ಮನೆಯೊಳ್ – ಸಾರಥಿಯ ಮನೆಯಲ್ಲಿ; ಇರ್ಪನ್ನೆಗಂ – ಇರುತ್ತಿರಲು

**ಕ್ಷಕಿರಣ :**

ಸೂತನ ಮನೆಯೊಳ್ – ಸಾರಥಿಯ ಮನೆಯಲ್ಲಿ. ಪ್ರಕೃತ ಸಂದರ್ಭದಲ್ಲಿ ಈ ಅರ್ಥ ಸರಿಯೇ? ಇಲ್ಲಿ ಸೂತನೆಂದರೆ 'ಬೆಸ್ತನು' ಎಂದಲ್ಲವೇ?

೧೬. ವಿಕ್ರಮಾರ್ಜುನ ವಿಜಯ : ೨–೪

ಪಳಂಚಲೆವ ಪಂಚ ಜಡೆ

**ದೀಪಿಕೆ :**

ಪಳಂಚಲೆವ ಪಂಚ ಜಡೆ – ಬೆನ್ನಗೆ ಅಪ್ಪಳಿಸಿ ಅಲುಗಾಡುತ್ತಿರುವ ಐದು ಜಡೆಗಳು

**ಕ್ಷಕಿರಣ :**

ಇಲ್ಲಿ ಪಂಚ ಜಡೆ ಎಂದರೆ ವಿಶಾಲ, ದೊಡ್ಡ ಎಂದರ್ಥವಲ್ಲವೇ? ಪಂಚಾಸ್ಯ ಎಂಬಂತೆ.

೧೭. ವಿಕ್ರಮಾರ್ಜುನ ವಿಜಯ : ೨-೭

ಬೇಡಿದುದಂ ಬೇಡುವ ಪುಡಿಯಾಡುವ

**ದೀಪಿಕೆ :**

ಬೇಡಿದುದಂ ಬೇಡುವ – ಬಯಸಿದ್ದನ್ನೇ ಬಯಸುವ, ಕೇಳಿದ್ದನ್ನೇ ಕೇಳುವ; ಪುಡಿಯಾಡುವ – ಧೂಳಾಟವಾಡುವ

**ಕ್ಷಕಿರಣ :**

ಮೂಲದಲ್ಲಿ 'ಬೇಡದುದಂ' ಎಂದಿದ್ದುದನ್ನು ಬೇಡಿದುದಂ ಎಂದು (ದೀಪಿಕೆಯಲ್ಲಿ) ತಿದ್ದಿಕೊಳ್ಳಲಾಗಿದೆ. ಹಾಗೆ ತಿದ್ದುವ ಅಗತ್ಯವೇನದೆ? ಬೇಡದುದನ್ನೇ ಬೇಡುವ ಅರ್ಥಾತ್ ದುರ್ಲಭವಾದ ವಸ್ತುವನ್ನು ಯಾಚಿಸುವ ಎಂದರೆ ಅರ್ಥಪುಷ್ಟಿ ಹೆಚ್ಚಲ್ಲವೇ?

[ಬೇಡಿದುದಂ ಎಂಬುದಕ್ಕೆ ಪಾಠಾಂತರಗಳಿಲ್ಲ. ಸಂ]

೧೮. ವಿಕ್ರಮಾರ್ಜುನ ವಿಜಯ : ೨-೧೮

ನಡೆ ನೋಡಿ ನೋಡಿ ತೊಟ್ಟಗೆ ಕೊಳೆ ಮೇಲೆ ಪಾಯ್ದುವಳನಪ್ಪಿದನಾವಿಭು

**ದೀಪಿಕೆ :**

ನಡೆ ನೋಡಿ ನೋಡಿ – ಕಣ್ಣು ನಾಟಿ ನೋಡಿ; ತೊಟ್ಟಗೆ – ಬೇಗನೆ; ಕೊಳೆ – ಹಿಡಿಯಲು; ಮೇಲೆ ಪಾಯ್ದುವಳಂ – ಮೇಲೆ ನುಗ್ಗಿದ ಅವಳನ್ನು

**ಕ್ಷಕಿರಣ :**

ತೊಟ್ಟಗೆ ಕೊಳೆ ಮೇಲೆ ಪಾಯ್ದುವಳಂ – ಬೇಗನೆ ಹಿಡಿಯಲು ಮೇಲೆ ನುಗ್ಗಿದ ಅವಳನ್ನು. ಈ ಅರ್ಥ ಸರಿಯೇ? ಹಾಗಿದ್ದಲ್ಲಿ ಕಾಮುಪರವಶಳಾದವಳು ಮಾದ್ರಿಯೆಂದಾಗುವುದಿಲ್ಲವೇ? ಇದು ಕವಿಯ ಆಶಯಕ್ಕೆ ವಿರುದ್ಧವಾದುದು. ಇಲ್ಲಿ ಸಂಧಿ ವಿಂಗಡಿಸಿದ್ದು ತಪ್ಪಾಗಿದೆ. ತೊಟ್ಟನೆ ಕೊಳೆ ಮೇಲೆ ಪಾಯ್ದು + ಅವಳಂ + ಅಪ್ಪಿದಂ +ಆವಿಭು ಎಂದಾಗಬೇಕು. ಮುಂದಿನ ಪದ್ಯ ೨೦ರಲ್ಲಿ ಈ ಆಶಯ ಸ್ಪಷ್ಟವಾಗುತ್ತದೆ.

೧೬. ವಿಕ್ರಮಾರ್ಜುನ ವಿಜಯ : ೨-೧೯

ಲತಾಂಗಿ ತೊಟ್ಟಗೆ ಕೊಳೆ ನೋಡಿ

**ದೀಪಿಕೆ :**

ತೊಟ್ಟಗೆ ಕೊಳೆ ನೋಡಿ – ಬೇಗನೇ ಕಣ್ಣಲ್ಲಿಯೇ ಕುಡಿಯುವಂತೆ ನೋಡಿ

**ಕ್ಷಕಿರಣ :**

ತೊಟ್ಟಗೆ ಕೊಳೆನೋಡಿ – ಬೇಗನೇ ಕಣ್ಣಲ್ಲಿಯೇ ಕುಡಿಯುವಂತೆ ನೋಡಿ. ಇದು ಸರಿಯಲ್ಲ. ತೊಟ್ಟಗೆ ಕೊಳೆ – ಬೀಳುತ್ತಿರುವವನ್ನು ಬೀಳದಂತೆ ಫಕ್ಕನೆ ಅಧರಿಸಿ ಹಿಡಿದು. ಬಳಿನೋಡಿ ಎಂದಾಗಬೇಕು.

೧೭ ವಿಕ್ರಮಾರ್ಜುನ ವಿಜಯ : ೨-೨೨

. ಇಂತು ಬಿದಿಯೆ ತಂದಿಕ್ಕುವುದೇ

**ದೀಪಿಕೆ :**

ಬಿದಿಯೆ – ವಿಧಿಯೇ .....ತಂದಿಕ್ಕುವುದೇ – ತಂದು ಎಸೆಯುವುದೇ, ಹಾಕುವುದೇ?

**ಕ್ಷಕಿರಣ :**

ಇಲ್ಲಿ ಇಕ್ಕು ಪದಕ್ಕೆ 'ಕೊಲ್ಲು' ಎಂಬ ಅರ್ಥವೇ ಸಮಂಜಸವೆಂದು ತೋರುತ್ತದೆ.

೧೮. ವಿಕ್ರಮಾರ್ಜುನ ವಿಜಯ : ೨-೩೧

...ಪರಿದನಬರುಮೊಡನರ್ದಿರೆ ಮರನಂ ಮುಟ್ಟಲ್ಕೆ ಪಡೆಯದೆ

**ದೀಪಿಕೆ :**

ಅನಬರುಂ – ಅಷ್ಟುಬಾಲಕರೂ, ಪರಿದು – ಓಡಿ; ಮರನನಡರ್ದಿರೆ – ಮರವನ್ನು ಹತ್ತಿರಲು; ಮುಟ್ಟಲ್ಕೆ ಪಡೆಯದೆ – ಮುಟ್ಟಲಾಗದೆ.

**ಕ್ಷಕಿರಣ :**

ಇಲ್ಲಿ 'ಮರನನಡರ್ದಿರೆ' ಎಂಬ ಪಾಠಾಂತರ ಎಲ್ಲಿ ಸಿಕ್ಕಿತು?

ಮುದ್ರಿತ ಪುಸ್ತಕದಲ್ಲಿ 'ಒಡನಡರ್ದಿರೆ' ಎಂದಿದೆ. ಇದೇ ಸರಿಯಾದುದು. ಮುಟ್ಟಲ್ಕೆ ಪಡೆಯದೆ – ಅವರನ್ನು ಮುಟ್ಟಲಾಗದೆ – ಹಿಡಿಯಲಾರದೆ. ಮರವನ್ನು ಮುಟ್ಟಲಾಗದೆ ಎಂದಲ್ಲ.

**೧೯. ವಿಕ್ರಮಾರ್ಜುನ ವಿಜಯ : ೨-೩೪ರ** ಅನಂತರದ ವಚನ.

ಅಂತು ಪಂಚಾಂಗ ವ್ಯಾಕರಣದ ವೃತ್ತಿಭೆದಮಪ್ಪ ಛಂದೋವೃತ್ತಿಯೊಳಂ

**ದೀಪಿಕೆ :**

.. ಛಂದೋವಿಚ್ಛಿತಿಯೊಳಂ – ಛಂದಸ್ಸಿನಲ್ಲಿಯೂ (ಈ ಭಾಗಕ್ಕೆ ಸ್ಪಷ್ಟವಾಗಿ ಅರ್ಥವಾಗುವುದಿಲ್ಲ)

**ಕ್ಷಕಿರಣ :**

'ಛಂದೋವೃತ್ತಿಯೊಳಂ' ಎಂಬುದಕ್ಕೆ 'ಛಂದೋವಿಚ್ಛಿತ್ತಿಯೊಳಂ' ಎಂಬ ಪಾಠಾಂತರವಿದೆ. ಛಂದೋವಿಚ್ಛಿತ್ತಿ ಎಂದರೆ ಛಂದೋಭೇದ ಎಂದರ್ಥ. ಆದುದರಿಂದ ಇಲ್ಲಿ ಛಂದೋಭೇದಗಳಲ್ಲಿಯೂ ಎಂಬ ಅರ್ಥಗ್ರಾಹ್ಯ.

**೨೦. ವಿಕ್ರಮಾರ್ಜುನ ವಿಜಯ : ೨-೫೦**

ಖಳನೊಳವಿಂಗೆ ಕುಪ್ಪೆವರಂ ಎಂಬವೊಲ್ ಆಂಬರಮುಂಟೆ ನನ್ನದೊಂದಳವು

**ದೀಪಿಕೆ :**

ಖಳ – ದುಷ್ಟನೇ, ನೀಚನೇ; ನೊಳವಿಂಗೆ – ನೊಣಕ್ಕೆ, ಕುಪ್ಪೆ –ಕಸದ ಕುಪ್ಪೆ, ತಿಪ್ಪೆ; ವರಂ – ಶ್ರೇಷ್ಠ; ಎಂಬವೊಲ್ – ಎನ್ನುವಂತೆ, ನನ್ನದೊಂದು ಅಳವು – ನನ್ನ ಒಂದು ಸಾಮರ್ಥ್ಯ; ಆಂಬರಂ – ನನ್ನವರೆಗೂ, ಉಂಟೇ – ಇದೆಯೇ ಇಲ್ಲವೆಂಬ ಭಾವ

**ಕ್ಷಕಿರಣ :**

ಇಲ್ಲಿ 'ಖಳ' ಎಂಬುದು ಸಂಬೋಧನೆಯೇ? ನೊಳಕ್ಕೆ ವಿಶೇಷಣವಲ್ಲವೇ? ದುಷ್ಟ ನೊಣದ ಹಾರಾಟ ಎಲ್ಲಿಯವರೆಗೆ? ಕುಪ್ಪೆಯನ್ನು ಕಂಡೊಡನೆ ಎಂತಹ

ದುಷ್ಟ ಸೊಣವೂ ಅದರ ಮೇಲೆ ಎರಗುತ್ತದೆ. ಅಲ್ಲಿಂದ ಮುಂದಕ್ಕೆ ಅದು ಹಾರಲಾರದು ಅದರಂತೆ ಕ್ಷುದ್ರಕೀಟಸದೃಶನಾದ ನೀನು ನನಗೆ ಎಷ್ಟರವನು?

**೨೧. ವಿಕ್ರಮಾರ್ಜುನ ವಿಜಯ : ೨-೬೧**

...ವಿದ್ದೆಯಂ ಗುಣಕಱುಗೊಂಡು ಕೊಟ್ಟೆನೆಗೆ

ಆ ದ್ರುಪದನಂ ಗಡ ಕೋಡಗಗಟ್ಟುಗಟ್ಟಿ ತಂದಣಿಯರಮೊಪ್ಪಿಸು.

**ದೀಪಿಕೆ :**

ಗುಣಕಱುಗೊಂಡು – ಒಲಿದು, ಪ್ರೀತಿಸಿ; ಅಣಿಯರಂ – ಅತಿಶಯವಾಗಲು

**ಕ್ಷಕಿರಣ :**

ಗುಣಕಱುಗೊಂಡು – ಇದು ಗುಣಕೆ +ಅಱುಳ್ + ಕೊಂಡು – ಸದ್ಗುಣಕ್ಕೆ ಮೆಚ್ಚಿಕೊಂಡು ಎಂದಲ್ಲವೇ? ಅಣಿಯರಂ – ಅತಿಶಯವಾಗಲು ಎಂಬುದರ ಬದಲು ಕೂಡಲೇ, ಬೇಗನೇ ಎಂಬ ಅರ್ಥ ಹೊಂದುತ್ತದೆಯಲ್ಲವೇ?

**೨೨. ವಿಕ್ರಮಾರ್ಜುನ ವಿಜಯ : ೨-೬೨**

ದ್ರುಪದನ ಅಂಬೇಱಿಂಗೆ

**ದೀಪಿಕೆ :**

ದ್ರುಪದನ, ಅಂಬೇಱಿಂಗೆ – ಬಾಣಯುದ್ಧಕ್ಕೆ

**ಕ್ಷಕಿರಣ :**

ಅಂಬೇಱಿಂಗೆ – ಇದು ಬಾಣಾಘಾತಕ್ಕೆ ಎಂದರೆ ಬಾಣಗಳ ಹೊಡೆತಕ್ಕೆ ಎಂದಾಗದೇ?

**೨೩. ವಿಕ್ರಮಾರ್ಜುನ ವಿಜಯ : ೨-೭೩**

ಗೆಡೆವಚ್ಚೆರ್ವರ್ ಮನಗೊಂಡೊಡನೋರಂತು

**ದೀಪಿಕೆ :**

ಗೆಡೆವಚ್ಚೆರ್ವರ್ – ಜೋಡಿ ಮಿಗಿಲಾಗಲು ಇಬ್ಬರು

**ಕ್ಷಕಿರಣ :**

ಗೆಡೆವಚ್ಚೆರ್ವರ್ ಎಂಬುದಕ್ಕೆ ಗೆಡೆವಚ್ಚೆರ್ವರ್ ಎಂಬ ಪಾಠಾಂತರವೂ ಇದೆ. ಇದೇ ಸಮುಚಿತವೆಂದು ತೋರುತ್ತದೆ. ಗೆಡೆಯಂಪಚ್ಚಿ = ಗೆಡೆವಚ್ಚಿ – ಸ್ನೇಹವನ್ನು ಕಡಿದು. ದ್ವೇಷಾಧಿಕ್ಯದಿಂದ.

**೨೪. ವಿಕ್ರಮಾರ್ಜುನ ವಿಜಯ : ೨-೯೧**

ಮೇಣ್‌ಕುಲಮಿಲ್ಲೆಯೋ ನಮಗೆ ದಾಯಿಗರಲ್ಲರೋ ಶಸ್ತ್ರವಿದ್ಯೆಯೊಳ್ ಪೂಣ್ಕೆಗಳಲ್ಲೆಯೊ ಧರೆಗೆ ಮುನ್ನವರಯ್ಯನೆ ಮುಖ್ಯನಲ್ಲನೋ.

**ದೀಪಿಕೆ :**

ಮೇಣ್ – ಮತ್ತು; ಕುಲಮಿಲ್ಲೆಯೋ – ಕುಲವಿಲ್ಲವೋ ಪಾಂಡವರಿಗೆ ನಮಗೆ ದಾಯಿಗರಲ್ಲರೊ – ಅವರು ನಮಗೆ ದಾಯಾದಿಗಳಲ್ಲವೋ? ಶಸ್ತ್ರವಿದ್ಯೆಯೊಳ್ – ಆಯುಧ ವಿದ್ಯೆಯಲ್ಲಿ, ಧನುರ್ವಿದ್ಯೆಯಲ್ಲಿ; ಪೂಣ್ಕೆಗಳಲ್ಲೆಯೋ – ಪ್ರತಿಜ್ಞೆಗಳಲ್ಲವೋ?

ಧರೆಗೆ - ರಾಜ್ಯಕ್ಕೆ, ಅವರಯ್ಯನೆ - ಅವರ ತಂದೆಯೇ; ಮುಖ್ಯನಲ್ಲನೋ - ಮುಖ್ಯನಾದವನಲ್ಲವೋ?

**ಕ್ಷಕಿರಣ** :

ಇದು ಪಾಂಡವರನ್ನು ಕುರಿತು ಹೇಳಿದುದಲ್ಲ. ಕೌರವರಾದ ನಮಗೆ ಕುಲವಿಲ್ಲವೇ? ನಾವು ಸತ್ಕುಲಪ್ರಸೂತರಲ್ಲವೇ? (ಹೀಗೆನ್ನುವುದರಿಂದ ಪಾಂಡವರು ಕುಲಗೆಟ್ಟವರು ಎಂಬುದು ಧ್ವನಿ). ನಮಗೆ ಶಸ್ತ್ರವಿದ್ಯೆಯಲ್ಲಿ ಶಕ್ತಿ ಸಾಮರ್ಥ್ಯಗಳಿಲ್ಲವೇ? ಈ ಮೊದಲು ಪಾಂಡುವು ರಾಜ್ಯವಾಳಿಲ್ಲವೇ? ಇನ್ನೂ ದಾಯಾದ್ಯರು ಆಳಬೇಕೇ? ನಾವು ಆಳಿದರೇನಂತೆ? .. ಚಾಣಾಕ್ಷನಾದ ದುರ್ಯೋಧನನ ಯುಕ್ತಿಯುಕ್ತವಾದ ಮಾತುಗಳಿವು.

**೨೫. ವಿಕ್ರಮಾರ್ಜುನ ವಿಜಯ : ೩-೧**

... ವೀರನುಱಿದರಿಗಳನ್

**ದೀಪಿಕೆ** :

ವೀರಂ - ಶೂರನು; ಉಱಿದ - ಸೇರಿದ, ಹೊಂದಿಕೊಳ್ಳದ; ಅರಿಗಳಂ - ಹಗೆಗಳನ್ನು

**ಕ್ಷಕಿರಣ** :

ಉಱಿದರಿಗಳನ್ - ಇದನ್ನು ಉಱಿದೆ + ಅರಿಗಳನ್ ಎಂದು ವಿಂಗಡಿಸಬೇಕು. ಉಱಿದೆ - ಗಣನೆಗೆ ತಾರದೆ; ಉಱು -ಲಕ್ಷ್ಯೇ; ನಿಷೇಧಾರ್ಥದಲ್ಲಿ 'ಅದೆ' ಸೇರಿ 'ಉಱಿದೆ' ಎಂದಾಯಿತು.

**೨೬. ವಿಕ್ರಮಾರ್ಜುನ ವಿಜಯ : ೩-೭**

ದುರ್ಯೋಧನನೆಂಬೆರಲೆಯಿಂ

**ದೀಪಿಕೆ** :

ದುರ್ಯೋಧನನೆಂಬ - ದುರ್ಯೋಧನನು ಎನ್ನುವ, ಎರಲೆಯಿಂ - ಜಿಂಕೆಯಿಂ(?). ಇಲ್ಲಿ ಎರಲೆ ಶಬ್ದಕ್ಕೆ ಅರ್ಥ ಚಿಂತನೀಯ. ನಂಜಿನೆರಳು ಎಂದು ರಾಘವಾಂಕನ ಪ್ರಯೋಗವಿದೆ. (ಸಿದ್ಧರಾ:೩-೭), ಎರಳ್ಪುಳುಗಳು ಎಂದು ಪಾಲ್ಕುರಿಕೆ ಸೋಮೇಶ್ವರ ಪುರಾಣದಲ್ಲಿದೆ. (೫-೮) ಎರಳು ಎಂದರೆ ಒಂದು ಬಗೆಯಾದ ವಿಷದ ಹುಳು ಎಂದಾಗುತ್ತದೆ. ಬಹುಶಃ ಈ ಶಬ್ದವೇ ಈ ಪದ್ಯದಲ್ಲಿ ಇದ್ದಿರಬಹುದು.

**ಕ್ಷಕಿರಣ** :

ಇಲ್ಲಿ 'ಎರಲೆಯಿಂ' ಎಂಬುದೇ ಸಮುಚಿತ. ಎರಲೆಗೆ ಜಿಂಕೆ ಎಂಬುದು ವಾಚ್ಯಾರ್ಥ. ಇಲ್ಲಿ ನಾವು ಲಕ್ಷ್ಯಾರ್ಥವನ್ನು ಸ್ವೀಕರಿಸಬೇಕು. ಜಿಂಕೆಯಷ್ಟು ಅಂಜುಕುಳಿ ಪ್ರಾಣಿ ಬೇರೊಂದಿಲ್ಲ. ಆದುದರಿಂದ ದುರ್ಯೋಧನನೆಂಬ 'ಹೆಂಬೇಡಿ' ಎಂದು ಭಾವಿಸಬೇಕು.

**೨೭. ವಿಕ್ರಮಾರ್ಜುನ ವಿಜಯ : ೩-೧೨**

ನಡಿಯರ್ ಬಲ್ಲಾಯದ ಬಲ್ದಡಿಗಳ್

**ದೀಪಿಕೆ :**

ಬಲ್ಲಾಯದ – ಅಧಿಕ ವಿಸ್ತೀರ್ಣದ

**ಕ್ಷಕಿರಣ :**

ಇದು ಅಧಿಕ ಸಾಮರ್ಥ್ಯದ, ಪರಾಕ್ರಮದ ಎಂದಿರಬೇಕು. ಆಯ, ಆಯತಿ ಎಂದರೆ ಶೌರ್ಯ, ಪರಾಕ್ರಮ

**೨೮. ವಿಕ್ರಮಾರ್ಜುನ ವಿಜಯ : ೩–೧೯**

ಎಲ್ಲಿ ತಣ್ಬಿಟಿಲ್

**ದೀಪಿಕೆ :**

ಎಲ್ಲಿ ತಣ್ಬುಟಿಲ್ – ಎಲ್ಲಿ ತಂಪಾದ ತೋಪುಗಳೋ

**ಕ್ಷಕಿರಣ :**

ತಣ್ಣಿತು + ಪುಟಿಲ್ – ತಂಪಾದ ಮಳಲು ಎಂದಿರಬೇಕು. ನದಿ, ಸರೋವರಗಳ ತಂಪಾದ ಮಳಲ ರಾಶಿಗಳಲ್ಲಿ ವಿಹರಿಸುತ್ತಾ ನಂದರೆ ಸೊಗಸಲ್ಲವೇ?

**೨೯. ವಿಕ್ರಮಾರ್ಜುನ ವಿಜಯ : ೩–೪೨**

ಅವನೀಪಾಲರ್ ಕೆಯ್ಗೆಯ್ಯಲೆಂದು ಪಜೆವಜೆಯಾದರ್

**ದೀಪಿಕೆ :**

ಅವನೀಪಾಲರ್ – ರಾಜರು; ಕೆಯ್ಗೆಯ್ಯಲೆಂದು – ಕೈಮಾಡಬೇಕೆಂದು, ತಮ್ಮ ಕೈಶಕ್ತಿಯನ್ನು ತೋರಿಸಬೇಕೆಂದು; ಪಜೆವಜೆಯಾದರ್ – ಸಡಗರದಿಂದ ಕೂಡಿದರು (?).

**ಕ್ಷಕಿರಣ :**

ಇದು ಸರಿಯಲ್ಲ. ಕೆಯ್ಗೆಯ್ – ಅಲಂಕರಿಸು. 'ರಾಜರೆಲ್ಲ ತಮ್ಮನ್ನು ತಾವು ಸಿಂಗರಿಸಿಕೊಳ್ಳಬೇಕೆಂದು ಲವಲವಿಕೆಗೊಂಡರು' ಎಂದಾಗಬೇಕು. ಈ ಅಭಿಪ್ರಾಯವನ್ನು ಮುಂದಿನ ಪದ್ಯ (೩–೪೩) ಪುಷ್ಟೀಕರಿಸುತ್ತದೆ.

**೩೦. ವಿಕ್ರಮಾರ್ಜುನ ವಿಜಯ : ೩–೪೬**

ಈ ತೊಡವೇವುದೊ

**ದೀಪಿಕೆ :**

ಈ ತೊಡವೇವುದೊ – ಇದು ಯಾವ ಒಡವೆಯೊ

**ಕ್ಷಕಿರಣ :**

ಈ ಅರ್ಥ ಸರಿಯಲ್ಲ. ಈ ತೊಡವಿನಿಂದ ಏನು ಪ್ರಯೋಜನ ಎಂದರ್ಥ. ಏನಂ + ಗೈವುದು – ಏವುದು. ಈ ತೊಡವು ಎಂಬುದು ಜಾತ್ಯೇತ ವಚನ. ಈ ಆಭರಣಗಳೆಲ್ಲ ಸಹಜ ಮನೋಜ್ಞಳಾದ ದ್ರೌಪದಿಗೆ ಅನಗತ್ಯ. ಅವಳ ರೂಪ ಒಂದೇ ಸಾಲದೇ. ಈ ರೀತಿಯಲ್ಲಿ ಗೆಳತಿಯರು ವಿನೋದವಾಡುತ್ತಾರೆ.

**೩೧. ವಿಕ್ರಮಾರ್ಜುನ ವಿಜಯ : ೩–೫೮**

................ ಪಲ್ಲಾಜಿ ಮೊಡರ್ಮುಗೆಟ್ಟು

**ದೀಪಿಕೆ :**

ಪಲ್ಲಾಜೆ – ಹಲ್ಲು ಒಣಗಿ ಹೋಗಿ; ಪೊಡರ್ಪುಗೆಟ್ಟು – ಚೈತನ್ಯ ಕುಂದಿ

**ಕ್ಷಕಿರಣ :**

ಪಲಾಜೆ – ಹಲ್ಲು ಒಣಗಿ ಹೋಗಿ – ಈ ಅರ್ಥ ಸರಿಯಲ್ಲ. ಇದು ಮೂಲದಲ್ಲಿ ಬಹುಶಃ 'ಪಲ್ಪಾರಿ' ಎಂದಿದ್ದಿರಬೇಕು. ಪಲ್ಪಾರಿ ಎಂದರೆ ಹಲ್ಲು ಉದುರಿಹೋಗಿ. ಪ್ರಕೃತ ಸಂದರ್ಭಕ್ಕೆ ಈ ಅರ್ಥ ಚೆನ್ನಾಗಿ ಹೊಂದಿಕೆಯಾಗುತ್ತದೆ.

**೩೨. ವಿಕ್ರಮಾರ್ಜುನ ವಿಜಯ : ೪-೪೩**

ಸೋಲದೊಳೆಯ್ದೆ ಪೀರ್ದ ತೆಱದಿಂದೆಮೆಯಿಕ್ಕದೆ ನೋೞ್ಪ ಕಣ್ಗೆ ಕಣ್ ಪೀಲಿವೊಲಾಗೆ ಬಂದು ಪೆಱತೊಂದು ಮನಂಬುಗೆ ಪತ್ತಿ ಚಿತ್ತದೊಳ್ ... ನೆಟಲ್ದಿರೆ ಬಾಲಲೀಲೆಯಿಂ

**ದೀಪಿಕೆ :**

ಸೋಲದೊಳ್ – ಪ್ರೇಮದಲ್ಲಿ, ಎಯ್ದೆ – ಚೆನ್ನಾಗಿ; ಪೀ(ರ್ವ) – ಹೀರುವ, ತೆಱದಿಂದೆ – ರೀತಿಯಿಂದ, ಎಮೆಯಿಕ್ಕದೆ – ರೆಪ್ಪೆ ಹೊಡೆಯದೆ, ನೋೞ್ಪ – ನೋಡುವ, ಕಣ್ಗೆ – ಕಣ್ಣಿಗೆ ಪೆಱತೊಂದು – ಬೇರೊಂದು ಕಣ್ಣು ಎಂದರೆ ಆರ್ಜುನನ ಕಣ್ಣು ಪೀಲಿವೊಲಾಗೆ – ನವಿಲು ಗರಿಯ ಕಣ್ಣಿನಂತಾಗಲು

**ಕ್ಷಕಿರಣ :**

ಇಲ್ಲಿ ಅನ್ವಯಾರ್ಥ ಸರಿಯಾಗಿಲ್ಲ. ಇಲ್ಲಿ ಪೆಱತೊಂದು ಕಣ್ ಎಂದರೆ ಅರ್ಜುನನ ಕಣ್ಣಲ್ಲ. ಇದರ ಅನ್ವಯ ಹೀಗಿರಬೇಕು: ಸೋಲದೊಳ್ . ನೋೞ್ಪಕಣ್ಗೆ ಕಣ್ ಪೀಲಿವೊಲಾಗೆ – ಎಂದರೆ ಪ್ರೇಮಾಧಿಕ್ಯದಿಂದ ಎವೆಯಿಕ್ಕದೆ ಅರ್ಜುನನ ಸೌಂದರ್ಯವನ್ನು ಹೀರುತ್ತಿದ್ದಾಳೋ ಎಂಬಂತೆ ನೋಡುತ್ತಿರುವ ಸುಭದ್ರೆಯ ಕಣ್ಣೆ ನವಿಲುಗರಿಯ ಕಣ್ಣಿನಂತೆ ನಿಶ್ಚೇಷ್ಟಿತವಾಗಿರಲು; ಇಲ್ಲಿ ಕಣ್ಣೆ ಎಂಬುದು 'ಕಣ್ಗೆ' ಎಂದಾಗಿರಬೇಕು. ಇದೇ ಸಂದರ್ಭದಲ್ಲಿ 'ಪೆಱತೊಂದು ಕಾವನಂಬು ಬಂದು ಮನಂಬುಗೆ ಪತ್ತಿ ಚಿತ್ತದೊಳ್ ಕೀಲಿಸೆ ಎಂದರೆ ಬೇರೊಂದು ಹೂಬಾಣವು ಬಂದು ಮನಸ್ಸನ್ನು ಹೊಕ್ಕು ಹೃದಯವನ್ನು ಅಂಟಿ ನಾಟಿರಲು, ಕಾಮನ ಹೂಬಾಣಗಳ ಭಾರದಿಂದ ಒಯ್ಯನೆ ಜೋಲ್ದು ತಾಂಬೂಲ ಕರಂಕವಾಹಿನಿಯ ಮೇಲೆ ಬಿದ್ದಳೋ ಎಂಬಂತೆ ಸುಭದ್ರೆ ಒರಗಿಕೊಂಡಳು. ಇಲ್ಲಿನ ಕಲ್ಪನೆ ಬಹುಮನೋಜ್ಞವಾದುದು.

**೩೩. ವಿಕ್ರಮಾರ್ಜುನ ವಿಜಯ : ೪-೬೯**

ನನೆಯಂಬಂ ತೆಗೆದೆಚ್ಚನಂಗಜನ ... ನೀ ನಾಣ್ಚುವೈ

**ದೀಪಿಕೆ :**

ನನೆಯಂಬಂ ಹೂವಿನ ಬಾಣವನ್ನು, ತೆಗೆದೆಚ್ಚಂ – ಹೂಡಿ ಪ್ರಯೋಗಿಸಿದವನಾದ; ಅಂಗಜನ – ಮನ್ಮಥನ, ತಪ್ಪು ಏನಾನುಮಂ – ತಪ್ಪು ಏನಾದರೂ ಅದನ್ನು, ತೋಱೆ – ಕಾಣಿಸಲು, ಕಾಣ್ಬನಿತಂ – ಕಾಣುವಷ್ಟನ್ನು ಮಾಡದೆ, ಪದ್ಮಜಂ – ಬ್ರಹ್ಮನು, ಮದನನಂ – ಮನ್ಮಥನನ್ನೂ, ಬೈದಂತು ಟೇ – ಬೈದ ಹಾಗೆಯೇ ಸರಿ. ಈ ಬಿನದಂ – ಈ ವಿನೋದವು, ಬೇಡ, ಕಲ್ಪಿತಂ – ಕಲ್ಪಿತವಾದುದು; ತಪ್ಪಲೆ – ತಪ್ಪಲ್ಲವೆ; ನನ್ನೀಮನಂ – ನನ್ನ ಈ ಮನಸ್ಸು, ಆತಂಗೆಂದು – ಅವನಗೋಸ್ಕರವಾಗಿ,

ಪರಿಯದು – ಚಲಿಸದು, ಓಡದು; ನನಗೆ, ಆತಂ ದೊರೆ – ಅವನು ತಕ್ಕವನು, ಸಮಾನ; ಆದಿ ಪುರುಷಂಗೆ – ಉದಾತ್ತ ನಾರಾಯಣನಾದ ಅರಿಕೇಸರಿಗೆ, ಅರ್ಜುನನಿಗೆ; ನೆಟ್ಟನೆ – ನೇರವಾಗಿ, ನೀಂ – ನೀನು, ನಾಣ್ಚುವೈ – ನಾಚಿಕೆ ಪಡುತ್ತೀಯ; ಏಕೆ ಅಕ್ಕ – ಅಕ್ಕನೇ ಏತಕ್ಕೆ?

ಈ ಪದ್ಯಕ್ಕೆ ವಿಶದವಾಗಿ ಅನ್ವಯವಾಗುವುದಿಲ್ಲ. ಪಾಠಕ್ಲೇಶಗಳು ಇರಬಹುದು, ಪರಿಯದಾತಂಗೆ ಎನ್ನುವುದಕ್ಕೆ ಪ್ರತಿಯಾಗಿ 'ಪರಿದುದಾತಂಗೆ' ಇರಬಹುದು.

**ಕ್ಷಕಿರಣ :**

ಇಲ್ಲಿ ಯಾವ ಪಾಠಕ್ಲೇಶವೂ ಇಲ್ಲ. ಅನ್ವಯ ಹೀಗಾಗಬೇಕು: ನನೆಯಂಬಂ ತೆಗೆದೆಚ್ಚನ್. ಅಂಗಜನ ತಪ್ಪೆ? ಏನಾನುಮಂ ತೋಜೆ ಕಾಣ್ಬನತಂ ಮಾಡದೆ ಪದ್ಮಜ ಮದನನಂ ಬೈದಂತುಟೆ. ಈ ಬಿನದಂ ಬೇಡ. ಕಲ್ಪಿತಂ ತಪ್ಪಲೆ? ನಿನ್ನ ಈ ಮನಂ ಆತಂಗೆಂದು ಪರಿಯದೆ? ನಿನಗೆ ಆತಂ ದೊರೆ ನೆಟ್ಟನೆ ಆದಿಪುರುಷಂಗೆ. ಅಕ್ಕ ಏಕೆ ನೀಂ ನಾಣ್ಚುವೈ.

ಮನ್ಮಥನು ಹೂಬಾಣವನ್ನೆಸೆದನು. ಅದು ಅವನ ತಪ್ಪೆ? ಹಾಗೆ ಮನ್ಮಥನು ಯಾವುದನ್ನಾದರೂ ಸ್ಪಷ್ಟವಾಗಿ ಕಾಣುವಂತೆ ಮಾಡದೆ ಹೋದರೆ ಬ್ರಹ್ಮನು ಅವನನ್ನು ನಿಂದಿಸದಿರುವನೇ? ಅಕ್ಕ, ನನ್ನ ಈ ವಿನೋದ ಸಾಕು. ನನ್ನ ಊಹೆಯು ತಪ್ಪಲ್ಲವಷ್ಟೆ. ನಿಜ ಹೇಳು ನನ್ನ ಮನಸ್ಸು ಆತನಿಗಾಗಿಯೇ ಹರಿದಾಡುತ್ತಿಲ್ಲವೇ? (ಹಂಬಲಿಸುತ್ತಿಲ್ಲವೇ?) ನಿನಗೆ ಆತನೇ ಸರಿಯಾದ ಸಾಟಿ. ಆ ಪುರುಷಶ್ರೇಷ್ಠನಿಗೆ ನೀನೇಕೆ ಲಜ್ಜೆ ಪಡುತ್ತೀಯ? ನಾಚಿಕೆ ಬೇಡವೆಂದು ತಾತ್ಪರ್ಯ

'ಪರಿಯದಾತಂಗೆ' ಎಂಬ ಪಾಠ ಸಮರ್ಪಕವಾಗಿದೆ.

**೩೪. ವಿಕ್ರಮಾರ್ಜುನ ವಿಜಯ : ೪–೭೩**

ಕನಕ ಕಾಂಚೀ ನಿನದ ಪ್ರಗಣಿತಂ ಅಗಲ್ದ ನಲ್ಲಳ ಜಗನಂ

**ದೀಪಿಕೆ :**

ಕನಕ ಪ್ರಗಣಿತಂ – ಚಿನ್ನದ ಒಡ್ಯಾಣದ ಸದ್ದಿನ ಕೂಟವು; ಅಗಲ್ದ – ಬಿಟ್ಟುಹೋದ, ಎಂದರೆ ಒಡ್ಯಾಣದ ಸದ್ದಿಲ್ಲದ; ನಲ್ಲಳ – ಪ್ರಿಯೆಯ; ಜಗನಂ – ಜಘನವು.

**ಕ್ಷಕಿರಣ :**

ಇಲ್ಲಿನ (ದೀಪಿಕೆಯ) ಅನ್ವಯ ಸರಿಯಲ್ಲ. ಅದು 'ಅಗಲ್ದ ನಲ್ಲಳ ಕನಕ ಪ್ರಗಣಿತ ಜಗನಂ' ಎಂದಾಗಬೇಕು. ಅಗಲ್ದ ನಲ್ಲಳ ಎಂದರೆ 'ನನ್ನಿಂದ ದೂರದಲ್ಲಿರುವ ಪ್ರಿಯೆಯ' ಎಂದರ್ಥ.

**೩೫. ವಿಕ್ರಮಾರ್ಜುನ ವಿಜಯ : ೪–೭೪**

ಮಧ್ಯಸ್ತಂಗಳಾಗಿರ್ದುವಕ್ಕಲೆಯಲ್ ತಕ್ಕುದೆ ಕೆನ್ನಮಾತ್ರಿವಳಿಗಳ್ಗೆನ್ನಂ ಸರೋಜಾಕ್ಷಿಯಾ.

**ದೀಪಿಕೆ :**

ಅರ್ಜುನನು ಸುಭದ್ರೆಯ ರೂಪವನ್ನು ಧ್ಯಾನಿಸುತ್ತಾ ತನ್ಮಯನಾಗಿ ಆ ಸೌಂದರ್ಯವನ್ನು ಸವಿಯುತ್ತ ಮೈಮರೆತಿದ್ದಾನೆ .. ಸರೋಜಾಕ್ಷಿಯಾ - ಸುಭದ್ರೆಯ, ಮಧ್ಯಸ್ಥಂಗಳಾಗಿರ್ದುವ (ರ್ಕೆ) - ಮಧ್ಯ ಪ್ರದೇಶದಲ್ಲಿರುವುವಾದ, ತ್ರಿವಳಿಗಳ್ಗೆ - ಬಸಿರ ಮೇಲಣ ಮೂರು ಮಡಿಕೆಗಳಿಗೆ, ಗೆರೆಗಳಿಗೆ; ಕೆನ್ನಂ - ವಿಶೇಷವಾಗಿ, ಎನ್ನಂ - ನನ್ನನ್ನು; ಅಲೆಯಲ್ - ಪೀಡಿಸಲು, ತಕ್ಕುದೆ - ಯೋಗ್ಯವಾದದ್ದೇ.

**ಕ್ಷಕಿರಣ** :

ಇಲ್ಲಿ (ದೀಪಿಕೆಯಲ್ಲಿ) ಕೊಟ್ಟಂತೆ ಮಧ್ಯಸ್ಥಂಗಳಾಗಿರ್ದುವ (ರ್ಕೆ) ಎಂಬುದಕ್ಕೆ ವಾಚ್ಯಾರ್ಥ ಮುಖ್ಯವಲ್ಲ. ಲಕ್ಷ್ಯಾರ್ಥವನ್ನು ಲಕ್ಷಿಸಬೇಕು. ಯಾವ ಪಕ್ಷವನ್ನೂ ವಹಿಸದೆ ತಟಸ್ಥಂಗಳಾಗಿರುವ ತ್ರಿವಳಿಗಳೂ ವೃಥಾ ನನ್ನನ್ನು ಪೀಡಿಸುವುದು ಯೊಗ್ಯವೇ? ಅಲ್ಲವೆಂಬ ಭಾವ. ಕೆನ್ನಂ ಅಲೆಯಲ್ ತಕ್ಕುದೆ - ವಿಶೇಷವಾಗಿ ಪೀಡಿಸಲು ಯೋಗ್ಯವಾದದ್ದೇ. ಇದು ನಿರ್ಧಾರಣಾತ್ಮಕವಲ್ಲ; ಪ್ರಶ್ನಾರ್ಥಕವಾಗಿರಬೇಕು. ಕೆನ್ನಂ ಅಲೆಯಲ್ ತಕ್ಕುದೆ? ಎಂದರೆ ವಿನಾ ಕಾರಣ ನನ್ನನ್ನು ಪೀಡಿಸುವುದು ಉಚಿತವೇ? ಎಂದರ್ಥ. ಇಲ್ಲಿನ ಕಲ್ಪನೆ ಬಹಳ ಸೊಗಸಾಗಿದೆ.

**೩೬. ವಿಕ್ರಮಾರ್ಜುನ ವಿಜಯ : ೪-೯೨**

ಬಸನದೊಡಂಬಡಿಂಗಲಸಿ ಮತ್ತಮೀವುದೇ

**ದೀಪಿಕೆ** :

ಈ ಪದ್ಯದ ಅನ್ವಯ, ಅರ್ಥ ಸರಿಯಾಗಿ ಆಗುತ್ತಿಲ್ಲ. ಬಸನದ ಒಡಂಬಡಿಂಗೆ ಅಲಸಿ ಮಾಣ್ದೊಡಂ ಇಂತು ಇದನೀವೆನೆಂದನಂ ಪುಸಿದೊಡಂ ಆಸೆದೋಜಿ ಬಗೆದೋಟಿದೊಡಂ ನೆರೆದಿರ್ದೊಡಂ ಸಗಾಟಿಸದೊಡಂ ಆಯುಮುಂ ಚಲಮುಮುಳ್ಳೊಡೆ ಅವಳ್ಗೆ ಪೇಸದೆ ಮತ್ತಂ ಅಂಜುವುದೆ ಮತ್ತಂ ಅಟಿಲ್ವುದೆ ಮತ್ತಂ ಈವುದೆ (ಇದು ದೀಪಿಕೆಯಲ್ಲಿ ಕೊಟ್ಟಿರುವ ಅನ್ವಯ)

**ಕ್ಷಕಿರಣ** :

ಇದರ ಅನ್ವಯ ಹೀಗಾಗಬೇಕು:

(ನನ್ನೊಳೆ) ಆಯಮುಂ ಚಲಮುಂ ಉಳ್ಳೊಡೆಬಸನದ ಒಡಂಬಡಿಂಗೆ ಅಲಸಿ ಮಾಣ್ದೊಡಂ ಅವಳ್ಗೆ ಪೇಸದೆ ಮತ್ತಂ ಆಟಿಸುವುದೆ? (ಇಲ್ಲಿ ಆಯಮುಂ ಚಲಮುಂ ಉಳ್ಳೊಡೆ ಎಂಬುದನ್ನು ಮುಂದಿನ ಮೂರು ಪ್ರಶ್ನೆಗಳಿಗೂ ಅನ್ವಯಿಸಿಕೊಳ್ಳಬೇಕು. ಆಗ ಅರ್ಥ ಸ್ಪಷ್ಟವಾಗುವುದು) ಇಂತಿದಂ ಈವೆಂ ಎಂದನಂ ಪುಸಿದೊಡಂ ಅವಳ್ಗೆ ಪೇಸದೆ ಮತ್ತಂ ಈವುದೆ? ಆಸೆದೋಜಿ ಬಗೆದೋಟಿದೊಡಂ ಅವಳ್ಗೆ ಪೇಸದೆ ಮತ್ತಂ ಅಂಜುವುದೆ? ನೆರೆದಿರ್ದೊಡಂ ಸಗಾಟಿಸದೊಡಂ ಅವಳ್ಗೆ ಪೇಸದೆ ಮತ್ತಂ ಅಟಿಲ್ವುದೆ?

ಈ ಅನ್ವಯದಿಂದ ಸರಿಯಾಗಿ ಅರ್ಥವಾಗುವುದು.

**೩೭. ವಿಕ್ರಮಾರ್ಜುನ ವಿಜಯ : ೪-೯೩**

ಇನಿಯಂ ನೋ(ಯ್ದು) . ಮಾನಾಮಿಯಂ ಮಾಡೆನೇ

**ದೀಪಿಕೆ** :

ಅನ್ವಯ : ಇನಯ(ಳ್) ನೊಯ್ಯು (ಮೆ) ಡಂಬಡಂ ನುಡಿದೊಡೆ ನೊಯ್ಯುಂ ಎಂದು ಎಂದಪ್ಪೊಡಂ ನಿನ್ನೊಳ್ ಎಳ್ಳನಿತುಂ. ದೋಷಮಂ ಉಂಟು ಮಾಡದಿರೆಯುಂ ಕಣ್ ಪಿಂತೆ ಸಂದಪ್ಪುದು. ಓಪಳೆ ಒಂದನೆ ಕೇ(ಳ್), ಕೂರ್ಮೆಗೆಟ್ಟೆನಗೆ ನೀನ್ ಏನಾನುಂ ಒಂದು ಏವಮಂ ಮನದೊಳ್ ಮಾಡಿದೊಡೆ ಅಂದೆ ದೀವಳಿಗೆಯಂ ಮಾನಾಮಿಯಂ ಮಾಡುವೆಂ. ಈ ಪದ್ಯಕ್ಕೆ ಸಮಂಜಸವಾಗಿ ಅರ್ಥ ಆಗುತ್ತಿಲ್ಲ. ಕೆಲವು ಪಾಠದೋಷಗಳಿರಬಹುದು. 'ಒಡಂಬಡು'ಗೆ 'ಎಡಂಬಡು' ಇರಬಹುದು. 'ಮನಕ್ಕೆಡಂಬಡಂ ಮಾಡುಗುಮಟ್ಟೆಯುಂ ಮಾಡುಗುಮೇ' – ಎಂದು ರನ್ನನ ಪ್ರಯೋಗ.

**ಕ್ಷಕಿರಣ :**

ಈ ಪದ್ಯದಲ್ಲಿ ಯಾವ ಪಾಠದೋಷವೂ ಇದ್ದಂತೆ ತೋರುವುದಿಲ್ಲ. ಸಮಂಜಸವಾಗಿಯೇ ಅರ್ಥವಾಗುತ್ತಿದೆ. ಅನ್ವಯಾರ್ಥ ಹೀಗಿರಬೇಕು.

ಒಡಂಬಡಂ ನುಡಿದೊಡೆ ಇನಯಳ್ ನೋಯ್ಯುಂ ಎಂದೆ, ನಿನ್ನೊಳ್ ಎಂದಪ್ಪೊಡಂ ಎಳ್ಳನಿತುಂ ದೋಷಮಂ ಉಂಟುಮಾಡದಿರೆಯುಂ ಕಣ್ಪಿಂತೆ ಸಂದಪ್ಪುದು ಒಂದನೆ ಕೇಳ್ದು, ಓಪಳೆ! ಕೂರ್ಮೆಗೆಟ್ಟು ಎನಗೆ ನೀನ್ ಏನಾನುಂ ಒಂದು ಏವಮಂ ಮನದೊಳ್ ಮಾಡಿದೊಡೆ ಅಂದೆ ದೀವಳಿಗೆಯಂ ಮಾನಾಮಿಯಂ ಮಾಡೆನೇ?

ಪ್ರಣಯ ಸಂಬಂಧವಾಗಿ ಒಪ್ಪಂದದ (ಕಟ್ಟು ಪಾಡಿನ) ಪ್ರಸ್ತಾಪವನ್ನು ಮಾಡಿದರೆ ಎಲ್ಲಿ ನಲ್ಲೆಯು ನೊಂದು ಕೊಂಡಾಳು ಎಂದು ಬಗೆದು, ನಿನ್ನಲ್ಲಿ ನಾನು ಎಳ್ಳಷ್ಟೂ ತಪ್ಪನ್ನು ಎಂದೆಂದೂ ಮಾಡದಿದ್ದರೂ ನನ್ನ ಕಣ್ಣ ಹಿಂದೆ ನಡೆದಿರಬಹುದಾದ್ದನ್ನು ಯಾರಿಂದಲೋ ಕೇಳಿ ಎಂದರೆ ನನ್ನ ಕುರಿತು ಅನ್ಯರು ಆಡುವ ಚಾಡಿ ಮಾತುಗಳನ್ನು ಕೇಳಿ, ನನ್ನ ಮೇಲಣ ಪ್ರೀತಿಯನ್ನು ಕೆಡಿಸಿಕೊಂಡು ನನಗೇನಾದರೂ ದ್ರೋಹವನ್ನು ಬಗೆದೆಯೆಂದಾದರೆ, ಪ್ರಿಯಳೇ! ಅದೇ ದಿವಸ ನಾನು ಮಹಾನವಮಿ ಮತ್ತು ದೀಪಾವಳಿಯ ಹಬ್ಬವನ್ನು ಮಾಡಿಯೇ ಮಾಡುತ್ತೇನೆ. 'ದೀವಳಿಗೆಯಂ ಮಾನಾಮಿಯಂ ಮಾಡೆನೆ' ಇದೊಂದು ನುಡಿಗಟ್ಟು. ಈ ಎರಡು ಹಬ್ಬಗಳು ಜತೆಜತೆಯಾಗಿ ಬರಲು ಸಾಧ್ಯವಿಲ್ಲ. ಇವುಗಳನ್ನು ಒಂದೇ ದಿನ ಮಾಡುತ್ತೇನೆ ಎಂದರೆ ಅಘಟಿತ ಘಟನೆಗಳನ್ನು ಉಂಟು ಮಾಡುತ್ತೇನೆ. ನನಗೆ ದ್ರೋಹವನ್ನು ಬಗೆದ ನಿನ್ನನ್ನು ತೀರಿಸಿ ಬಿಟ್ಟೇನು ಎಂದು ಬೆದರಿಕೆಯನ್ನೊಡ್ಡುತ್ತಾನೆ.

**೩೮. ವಿಕ್ರಮಾರ್ಜುನ ವಿಜಯ : ೫–೨**

ಎಂದು ಬಗೆಯೊಳ್ ಸುಭದ್ರೆ ಪಲುಂಬಿ ಮನಂ ಬಸದೆ

**ದೀಪಿಕೆ :**

ಎಂಬ ಬಗೆಯೊಳ್– ಎಂಬ ಮನಸ್ಸಿನಲ್ಲಿ; ಸುಭದ್ರೆ, ಪಲುಂಬಿ – ಹಲುಬಿ, ಹಂಬಲಿಸಿ; ಮನಂ ಬಸದೆ – ಮನಸ್ಸನ್ನು ಇಬ್ಬಗೆಯಾಗಿ ಮಾಡದೆ

**ಕ್ಷಕಿರಣ :**

ಇಲ್ಲಿ ಎಂಬ ಬಗೆಯೊಳ್ ಎಂದರೆ ಎಂಬ ಭಾವನೆಯಲ್ಲಿ ಎಂದರ್ಥ. ಮನಂಬಸದೆ ಎಂದರೆ 'ಮನೋವಶದೆ' – ಮನಸ್ಸನ್ನು ಹತೋಟಿಗೆ ತಂದು, ವಶಪಡಿಸಿಕೊಂಡು ಎಂದಾಗಬೇಕು.

**೩೯. ವಿಕ್ರಮಾರ್ಜುನ ವಿಜಯ : ೫-೩೫**

... ಆಣತಿಗೆಯ್ವ ಮದಾಳಿ ಪೋಪು[ಗ]ಲ್ ಪು[ಗ]ಲೆನುತಿರ್ಪ

**ದೀಪಿಕೆ :**

ಆಣತಿಗೆಯ್ವ – ಆಲಾಪನೆಯನ್ನು ಮಾಡುವ, ಪುಗಿಲ್ ಪುಗಿಲ್ –ಹೋಗಿರಿ ಪ್ರವೇಶಿಸಿರಿ ಎನುತಿರ್ಪ – ಎನ್ನುತ್ತಿರುವ

**ಕ್ಷಕಿರಣ :**

ಆಣತಿಗೆಯ್ವ – ಆಲಾಪನೆಯನ್ನು ಮಾಡುವ ಎಂಬ ಅರ್ಥ ಸರಿಯಲ್ಲ. ಆಜ್ಞಪ್ತಿಯ ತದ್ಭವ ಆಣತಿ. ಆಣತಿಗೈವ ಎಂದಂ ಅಪ್ಪಣೆ ಮಾಡುವ ಎಂದಲ್ಲವೇ?

ಪುಗಿಲ್ ಪುಗಿಲ್ – ಹೋಗಿರಿ, ಪ್ರವೇಶಿಸಿರಿ ಎಂಬುದೂ ಸರಿಯಲ್ಲ. ಪುಗಲ್ ಪುಗಲ್ – ಪ್ರವೇಶಿಸಬೇಡಿರಿ, ಬರಬೇಡಿರಿ ಎಂದಾಗಬೇಕು. ಇಲ್ಲಿ ನಷೇಧಾರ್ಥದಲ್ಲಿ 'ಅಲ್' ಪ್ರತ್ಯಯದ ಪ್ರಯೋಗವಾಗಿದೆ. ಮುದ್ರಿತ ಪುಸ್ತಕದಲ್ಲಿ ಪುಗಲ್ ಎಂಬ ಪಾಠವೇ ಇದೆ.

**೪೦. ವಿಕ್ರಮಾರ್ಜುನ ವಿಜಯ : ೫-೬೧**

ನೀಲದ ಬೆಳ್ಳಿಯ ಗಾಡಿಯು/ಮೀಲಲಿತಾಂಗಿಯರ ಕಣ್ಗೆ ಪೋಲ್ತುಂ[ನಾಂ]

... ಈ ಲಲಿತಾಂಗಿಯರ – ಈ ಕೋಮಲೆಯರ; ಕಣ್ಗೆ – ಕಣ್ಣುಗಳಿಗೆ, ಪೋಲ್ತುಂ – ಹೋಲಿಯೂ; ನಾಂ – ನಾವು. ಇಲ್ಲಿ ಎರಡನೆಯ ಪಂಕ್ತಿಯಲ್ಲಿ ಏನೋ ಪಾಠಕ್ಲೇಶವಿದೆ.

**ಕ್ಷಕಿರಣ :**

ಇಲ್ಲಿ ಎರಡನೇ ಪಂಕ್ತಿ 'ಮೀಲಲಿತಾಂಗಿಯರ ಕಣ್ಗೆ ಪೋಲ್ತಾಮಿಂಕ' ಎಂದಿರಬೇಕು. 'ಪೋಲ್ತಾಮಿಂ' ಎಂಬ ಭಿನ್ನ ಪಾಠವಿದೆ[ಗ]. ಇದೇ ಸರಿಯಾದುದು. [ನಾಂ] ಈ ರೂಪ ಹಳಗನ್ನಡದಲ್ಲಿಲ್ಲ. 'ಪೋಲ್ತು+ಆಂ+ಇಂ' ಎಂದು ಸಂಧಿ ಬಿಡಿಸಿಕೊಳ್ಳಬೇಕು.

**೪೧. ವಿಕ್ರಮಾರ್ಜುನ ವಿಜಯ : ೫-೭೩**

. ಎರೆಯೆ ಕೇಳ್ದನಳಾಧರನೀನದರ್ಕೆ ಮಾತೆರಡಣಮಾಡಲಾಗದು

**ದೀಪಿಕೆ :**

ಎರೆಯೆ ಕೇಳ್ದಂ – ಯಾಚಿಸಿ ಕೇಳಿದನವನು; ಇಳಾಧರ – ಭೂಮಿಯನ್ನು ಧರಿಸಿದ ಶ್ರೀಕೃಷ್ಣನೇ, ನೀನದಕ್ಕೆ – ನೀನು ಅದಕ್ಕೆ ಮಾತೆರಡಣಮಾಡಲಾಗದು – ಎರಡು ಮಾತನ್ನು ಸ್ವಲ್ಪವೂ ಆಡಲಾಗದು;

**ಕ್ಷಕಿರಣ :**

ಈ ಅರ್ಥ ಸಮಂಜಸವಲ್ಲ. ಎರೆಯೆ ಕೇಳ್ದಂ – ಅಗ್ನಿಯು ನನ್ನಲ್ಲಿ ದಾನವನ್ನು ಬೇಡಿದಾಗ ಆ ಮಾತನ್ನು ಕೇಳಿದವನು, ಇಳಾಧರಂ – ಕೃಷ್ಣನು. ಇನ್ ಅದರ್ಕೆ ಮಾತು ಎರಡು ಅಣಂ ಆಡಲಾಗದು – ಇನ್ನು ಅದಕ್ಕೆ ಎರಡು ಮಾತನ್ನು ಸ್ವಲ್ಪವೂ ಆಡಬಾರದು ಎಂದರೆ ಕೊಟ್ಟ ಮಾತನ್ನು ಅಲ್ಲಗಳೆಯಬಾರದು ಎಂದರ್ಥ 'ಕೇಳ್ದನಿಳಾಧರನೀನದರ್ಕೆ' ಎಂಬುದು ತಪ್ಪಾಗಿರಬೇಕು 'ಕೇಳ್ದನಿಳಾಧರನಿನ್ನದರ್ಕೆ'

ಎಂದಿದ್ದಿರಬೇಕು. ಇಲ್ಲಿ ಕೃಷ್ಣನು ಎರಡಾಡಬಾರದು ಎಂದಿರುವುದು ಸರಿಯಲ್ಲ. ತಾನು ಎರಡಾಡುವುದು ಎಂದರೆ ಆಡಿ ತಪ್ಪುವುದು ಸರಿಯಲ್ಲವೆಂದು ಅರ್ಜುನನ ನಿರ್ಧಾರ.

**೪೨. ವಿಕ್ರಮಾರ್ಜುನ ವಿಜಯ : ೫-೭೪**

ದನುಜಾರೀ ದಿವಿಜೇಂದ್ರ .. ತಳ್ವಿಲ್ಲದಿಂದೂಡುವೆಂ

**ದೀಪಿಕೆ :**

ದನುಜಾರೀ – ರಾಕ್ಷಸ ವೈರಿಯಾದ ಶ್ರೀಕೃಷ್ಣನೇ, ದಿವಿಜೇಂದ್ರ ಶಾಶ್ವತ ಗುಣಾ – ದೇವನಾಯಕನಾದ ಇಂದ್ರನಂತೆ ಶಾಶ್ವತವಾದ ಗುಣವುಳ್ಳವನೇ, ನಿನ್ನಳ್ಕದೇಂ – ನಿನ್ನ ಅಂಜಿಕೆ ಏನು? ಬೇಡಿದಾನ್ – ಯಾಚಿಸಿದವನು. ಅನಲಂ – ಅಗ್ನಿ; ತೀರ್ಥ ಸಮೀಪಂ – ಪುಣ್ಯತೀರ್ಥಕ್ಕೆ ಹತ್ತಿರ ಅಂಬುನವಹವ್ಯಾಳೋಳ ಕಾಳಿಂದಿಯಾ ಬನಮುಂ – ನೀರ ರಾಶಿಯಿಂದ ಸಂಚರಿಸುತ್ತಿರುವ ಯಮುನಾ ನದಿಯ ಕಾಡುಗಳು ಕೂಡ, ಕೇಳ್ದುವು – ನನ್ನ ಮಾತನ್ನು ಕೇಳಿವೆ. ಭೂತಮಯ್ದುಂ – ಪಂಚಭೂತಗಳೂ, ಕೊಟ್ಟಿರ್ದುದಾನ್ – ನಾನು ಮಾತು ಕೊಟ್ಟಿರುವುದನ್ನು, ಅಜೆಗುಂ – ತಿಳಿದಿವೆ. ಅಂತಜೆಂ – ಆದ್ದರಿಂದ, ಎನಗೆ – ನನಗೆ, ಇಂ ಮಾಣ್ಬುದು – ಇನ್ನು ಇಲ್ಲವೆನ್ನುವುದು, ಸೂಟಿ – ಸರದಿಯೆ, ಕ್ರಮವೆ? ಅಲ್ಲ. ಇಂದು – ಈಗ, ಆಂ – ನಾನು, ತಳ್ವಿಲ್ಲದೆ – ತಡವಿಲ್ಲದೆ, ಖಾಂಡವಮಂ – ಖಾಂಡವ ವನವನ್ನು, ಊಡುವೆಂ – ಉಣಿಸುತ್ತೇನೆ, ಅಗ್ನಿಗೆ.

**ಕ್ಷಕಿರಣ :**

ಈ ಪದ್ಯದ ಅರ್ಥೈಸುವಿಕೆ ಸಮರ್ಪಕವಾಗಿಲ್ಲ. ಇದರ ಅನ್ವಯ ಹೀಗಿರಬೇಕು. ದನುಜಾರೀ, ದಿವಿಜೇಂದ್ರ ಶಾಶ್ವತ ಗುಣಂಗೆ ಇನ್ ಅಕ್ಕೆ. ಅದೇಂ! ತೀರ್ಥ ಸಮೀಪಮಂಬುನವಹವ್ಯಾಳೋಳ ಕಾಳಿಂದಿಯಾ ವನಮಂ ಅನಲಂ ಬೇಡಿದಂದು ಆಂ ಕೊಟ್ಟಿರ್ದುದಾನ್ ಕೇಳ್ದುವು ಭೂತಮಯ್ದುಂ ಅಜೆಗುಂ. ಅಂತಜೆಂದೆ ಎನಗೆ ಇಂ ಮಾಣ್ಬುದು ಸೂಜೆ? ಖಾಂಡವಮಂ ಆಂ ತಳ್ವಿಲ್ಲದೆ ಊಡುವೆಂ

ಶ್ರೀಕೃಷ್ಣನೇ! ಶಾಶ್ವತ ಗುಣಗಳಿಂದ ಕೂಡಿದ ದೇವೇಂದ್ರನಿಗೆ ಸೇರಿದ್ದೇ ಆಗಿರಲಿ (ಆವನ). ಆದರೇನಾಯಿತು? ತುಂಬಿ ಹರಿಯುತ್ತಿರುವ ಪುಣ್ಯಜಲದಿಂದ ಕೂಡಿದ ಕಾಳಿಂದೀ ನದಿಯ ಒತ್ತಿನ ವನವನ್ನು ತನಗೆ ಆಹಾರವಾಗಿ ಕೊಡಬೇಕೆಂದು ಅಗ್ನಿಯು ಬೇಡಿದಾಗ 'ತಥಾಸ್ತು' ಎಂದು ನಾನು ಭಾಷೆ ಇತ್ತುದನ್ನು ಕೇಳಿದ ಪಂಚಭೂತಗಳೂ ತಿಳಿದಿವೆ. ಆದುದರಿಂದ ಇನ್ನು ಕೊಟ್ಟ ಮಾತಿಗೆ ತಪ್ಪುವುದು ನನ್ನಂಥವನಿಗೆ ಯೋಗ್ಯವೇ? ಸರ್ವಥಾ ಅಲ್ಲ. ಖಾಂಡವವನವನ್ನು ಈ ಕ್ಷಣವೇ ಅಗ್ನಿಗೆ ಉಣ್ಣಿಸುತ್ತೇನೆ. 'ಕಾಳಿಂದಿಯಾ ವನಮುಂ' ಎಂಬುದು 'ಕಾಳಿಂದಿಯಾವನಮಂ' ಎಂದಾಗಬೇಕು.

**೪೩. ವಿಕ್ರಮಾರ್ಜುನ ವಿಜಯ : ೬-೨೬**

ಪನ್ನತರ ನಡುವನುಡಿಯಲ್ಕೆನ್ನ ಭುಜಾರ್ಗಳಮೆ ಸಾಲ್ಗುಮೊಸೆ ಮೇಣ್ ಮುನಿ ಮೇಣೆನ್ನ ನುಡಿ ಟಾಠಡಾಢಣಮೆನ್ನಂ ಬೆಸಸುವುದು ರಾಜಸೂಯಂ ಬೇಳಲ್

**ದೀಪಿಕೆ :**

ಭೀಮಸೇನನ ಮಾತು : ಪನ್ನತರ .. ಸಮರ್ಥವಾಗುತ್ತವೆ. ಒಸೆಮೇಣ್ ಮುನಮೇಣ್ – ಪ್ರೀತಿಸು ಇಲ್ಲವೆ ಕೋಪಿಸಿಕೊಳ್ಳು ಎನ್ನ ನುಡಿ – ನನ್ನ ಮಾತು, ಟಾಠಡಾಢಣಂ – ಟವರ್ಗಾಕ್ಷರಗಳಂತೆ ನಯತ, ಶಾಶ್ವತ ..

**ಕ್ಷಕಿರಣ :**

ಒಸೆಮೇಣ್ ಮುನಮೇಣ್ – ಪ್ರೀತಿಸು ಇಲ್ಲವೇ ಕೋಪಿಸಿಕೊಳ್ಳು. ಇಲ್ಲಿ 'ಒಸೆಮೇಣ್ ಮುನ' ಎಂದಿದ್ದರೆ ಸಾಲದೇ? ಮತ್ತಿನ ಮೇಣ್ ಎಂಬುದನ್ನು ಮುಂದಕ್ಕೆ ಅನ್ವಯಿಸಬಹುದಾಗಿದೆ.

ಎನ್ನ ನುಡಿ ಟಾಠಡಾಢಣಂ – ನನ್ನ ಮಾತು ಟವರ್ಗಾಕ್ಷರಗಳಂತೆ ನಯತ ಶಾಶ್ವತ. ಈ ವಿವರಣೆಯೂ ಸರಿಯೆಂದು ತೋರುವುದಿಲ್ಲ. ಟವರ್ಗಾಕ್ಷರಗಳು ಮಾತ್ರ ಶಾಶ್ವತವೇ? ಹಾಗಿದ್ದಲ್ಲಿ ಉಳಿದ ಅಕ್ಷರಗಳು ಅನಿಯತವೇ? ಇಲ್ಲಿ ಭೀಮನ ಆಶಯವೇನು? ಟವರ್ಗಾಕ್ಷರಗಳು 'ಮೂರ್ಧ' ಸ್ಥಾನದಲ್ಲಿ ಹುಟ್ಟುವವುಗಳು. ಹಾಗೆ ಮೂರ್ಧನ್ಯಗಳು. ನನ್ನ ನುಡಿ ಶ್ರೇಷ್ಠವಾದುದು ಎಂಬುದು ಇಲ್ಲಿನ ತಾತ್ಪರ್ಯ. [ಮೂರ್ಧ – ಶಿರಸ್ಸು, ಶ್ರೇಷ್ಠ ಎಂದರ್ಥ (ಸಂ)]

**೪೪. ವಿಕ್ರಮಾರ್ಜುನ ವಿಜಯ : ೬–೪೨**

ಮುಳಿದು ಶಿಶುಪಾಲನಾ ಸಭೆ
ಯೊಳಗೆ ಮಹಾ ಪ್ರಳಯ ಜಳಧಿನಾದದಿನರದು
ಚ್ಚಳಿಸಿ ನುಡಿದಂತೆ ಕಳೆಕಳೆ
ಹರಿಗೆತ್ತಿದನರ್ಘ್ಯದರ್ಘ್ಯಮಂ ಧರ್ಮಸುತಾ

**ದೀಪಿಕೆ :**

ಶಿಶುಪಾಲ ವಧೆಯ ಪ್ರಸಂಗ: ಉಚ್ಚಳಿಸಿ – ಮೇಲಕ್ಕೆ ನೆಗೆದು, ಧರ್ಮಸುತ – ಧರ್ಮರಾಜನೇ, ಹರಿಗೆತ್ತಿದ – ಕೃಷ್ಣನಗೆ ಎತ್ತಿದ, ಅನರ್ಘ್ಯದರ್ಘ್ಯಮಂ – ಅಮೂಲ್ಯವಾದ ಅಗ್ರೋದಕವನ್ನು ತೆ–ಚೆ: ಕಳೆಕಳೆ – ತೆಗೆತೆಗೆ ಎಂದು, ಕರ್ಕಶವಾಗಿ ಮಾತಾಡಿದನು. ಇಲ್ಲಿ 'ತೆ' ಎಂಬ ನಿಪಾತ, ಜುಗುಪ್ಸಾ ಸೂಚಕ, ನಿವಾರಣಾರ್ಥ. "ತುಂಬಿ ಪೀರ್ವವೊಲೇಂ ಪೀರ್ದಪುದೇ ಕಂಡಂದುಱು ತೆ ನಿವ್ಯಾಮೋದಮಂ ಪೂಗಳೊಳ್" ಎಂದು ರುದ್ರಭಟ್ಟನ ಪ್ರಯೋಗ.

**ಕ್ಷಕಿರಣ :**

ಈ ಪದ್ಯದ ಉತ್ತರಾರ್ಧದ ಅರ್ಥ ಸರಿಯಲ್ಲ. ಅನ್ವಯವೂ ಸರಿಯಲ್ಲ. ಅನ್ವಯವು ಹೀಗಾಗಬೇಕು. ಶಿಶುಪಾಲಂ . ಉಚ್ಚಳಿಸಿ, ಧರ್ಮಸುತಾ! ಹರಿಗೆತ್ತಿದನರ್ಘ್ಯದರ್ಘ್ಯಮಂ ಅಂತೆ ಕಳೆಕಳೆ (ಎಂದು) ನುಡಿದು. ಇಲ್ಲಿ ಅಪೂರ್ಣ ಕ್ರಿಯೆ. ಅವನ ಮಾತು ಮುಂದಿನ ಪದ್ಯದಲ್ಲಿ ಮುಂದುವರಿಯುತ್ತದೆ.

ಇಲ್ಲಿ 'ತೆ' ಜಿಗುಪ್ಸಾ ಸೂಚಕ ನಿಪಾತವಲ್ಲ. 'ಅಂತೆ' ಹಾಗೆಯೇ ಎಂದರೆ ಎತ್ತಿದ ಅರ್ಘ್ಯವನ್ನು ಅಲ್ಲಿಂದಲೇ ಕಳೆಕಳೆ (ಚೆಲ್ಲು) ಎಂದರ್ಥ. ರುದ್ರಭಟ್ಟನ ಪ್ರಯೋಗದಲ್ಲಿಯೂ 'ತೆ' ನಿಪಾತವಲ್ಲ. ಇಲ್ಲಿ 'ಕಡುಂದುಱು', 'ಕಡುಂದುಱುತೆ' ಎಂದರೆ

ಕಣಜದ ಹುಳ, ಕುಟ್ಟುಳು ಎಂದರ್ಥ.

**೪೫. ವಿಕ್ರಮಾರ್ಜುನ ವಿಜಯ :೬-೪೬**

ಅಳವಱಿಯದೆಗ್ಗು ಪೞಿಯಂ ಕಟ್ಟಿದೆಯೊ ಭೂಪರನಬರಕೊರಲೊಳ್

**ದೀಪಿಕೆ :**

ಈ ಪದ್ಯದಲ್ಲಿ ಕುಳ ಟಕಾರ ಪ್ರಾಸಬಂದು ಪ್ರಾಸದ ನಯಮ ಸಡಿಲವಾಗಿದೆ; ಇದು ಕ್ವಚಿತ್ತಾದ ಪ್ರಯೋಗವೆಂದು ಭಾವಿಸಬೇಕು. ಈ ತೆರನ ಪ್ರಾಸಭಂಗಕ್ಕೆ ಆದಿಪುರಾಣ. ೧-೮೪ನ್ನು ನೋಡಿ.

**ಕ್ಷಕಿರಣ :**

ಮುದ್ರಿತ ಪುಸ್ತಕದಲ್ಲಿ 'ಪೞಿಯಂ' ಎಂದೇ ಇದೆ. ಆದುದರಿಂದ ಪ್ರಾಸದ ನಯಮ ಸಡಿಲವಾಗಿಲ್ಲ. 'ಪೞಿ' ಎಂಬುದು 'ಪಟೀ' ಎಂಬುದರ ತದ್ಭವವಾಗಿರಬೇಕು. 'ಪೞಿಗಜ್ಜ' ಎಂದರೆ ಬಟ್ಟೆ ನೇಯುವ ಕೆಲಸ; ಹಾಗೆಯೇ ಹೀನ ಕೃತ್ಯ. ಇಷ್ಟು ಮಂದಿ ರಾಜರ ಕೊರಳಿಗೆ ಕೊರಳಪಟ್ಟಿಯನ್ನು ಕಟ್ಟಿದೆಯಾ? ಎಂದರೆ ಅವಮಾನ ಪಡಿಸಿದೆಯಾ? ಎಂದರ್ಥ.

**೪೬. ವಿಕ್ರಮಾರ್ಜುನ ವಿಜಯ : ೬-೪೮**

ಅಮರ್ದಿರದೆ ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯ್ಪೂಸಿದವೋಲ್

**ದೀಪಿಕೆ :**

ಅಮರ್ದಂ – ಅಮೃತವನ್ನು, ತಣಿಯುಂಡು – ತೃಪ್ತಿಯಾಗಿ ಊಟಮಾಡಿ. ಗೋಮೂತ್ರದಿಂದೆ – ಗಂಜಳದಿಂದ, ಬಾಯ್ಪೂಸಿದವೋಲ್ – ಬಾಯಿಗೆ ಬಳಿದ ಹಾಗೆ, ಅಮರ್ದಿರದೆ – ಹೊಂದಿಕೊಂಡು ಇರುವುದಿಲ್ಲವಲ್ಲ?

**ಕ್ಷಕಿರಣ :**

ಇದು ಸರಿಯೆ? ಅಮೃತವನ್ನು ತೃಪ್ತಿಯಾಗುವಂತೆ ಉಂಡಬಳಿಕ ಗೋಮೂತ್ರದಿಂದ ಬಾಯಿ ತೊಳೆದ ಹಾಗೆ ಎಂದಲ್ಲವೇ? ಅಮರ್ದಿರದೆ – ಹೊಂದಿಕೊಂಡಿಲ್ಲವೇ? ಇದೆ ಎಂಬ ಭಾವ.

**೪೭. ವಿಕ್ರಮಾರ್ಜುನ ವಿಜಯ : ೬-೬೨**

ಮುನಯಲೆನಗಾಗ ಗಾಂಗೇಯನರ್ದನ್ .. ಕೇಳೆ ಪೇ[ಱ್ವರಾ] ಬಲ್ಲವರುಂ

**ದೀಪಿಕೆ :**

ಮುನಯಲ್ ಎನಗೆ – ಸಿಟ್ಟು ಮಾಡಿಕೊಳ್ಳಬೇಡ. ನನ್ನ ಮೇಲೆ: ಆಗ – ಆ ಸಮಯದಲ್ಲಿ ಇಲ್ಲಿ ಅಲ್ ಪ್ರತ್ಯಯ ಪ್ರತಿಷೇಧಾರ್ಥದಲ್ಲಿ ಬಂದಿದೆ ... ಗಾಂಗೇಯನರ್ದನ್ – ಗಾಂಗೇಯನದ್ದನು. . ಪೇಱ್ವರ್ –ಹೇಳುತ್ತಾರೆ.

**ಕ್ಷಕಿರಣ :**

ಈ ಪದ್ಯವನ್ನು ಅರ್ಥೈಸಿದ್ದು ಸರಿಯಲ್ಲ. ಇಲ್ಲಿ ನಷೇಧಾರ್ಥದಲ್ಲಿ 'ಅಲ್' ಬಂದಿಲ್ಲ. ಅನ್ವಯ ಹೀಗಾಗಬೇಕು: ಮುನಯಲ್ ಎನಗೆ ಆಗ – ನಾನು ಕೋಪಿಸಲಾಗದು. ಇಲ್ಲಿ ಆಗದು ಎಂಬುದರ ಅಂತ್ಯಾಕ್ಷರ ಲೋಪವಾಗಿ 'ಆಗ' ಎಂದಾಗಿದೆ. 'ಅಲ್ಲದು'

'ಅಲ್ಲ' ಆದಂತೆ. ಈ ಪದ್ಯದಲ್ಲಿ ಬಂದಿರುವ 'ಇರ್ದಂ' ಎಂಬುದು ವರ್ತಮಾನ ಕಾಲಕ್ಕೆ ಭೂತಕಾಲ ಪ್ರಯೋಗವೆಂದು ಭಾವಿಸಬೇಕು. [ಇರ್ಪಂ – ಇದ್ದಾನೆ] ಭೀಷ್ಮನದ್ದಾನೆ, ದ್ರೋಣನದ್ದಾನೆ .. ಇತ್ಯಾದಿ. ಇವರೆಲ್ಲರ ಸಮಕ್ಷಮದಲ್ಲಿ ನಾನು ಕೋಪಿಸಿಕೊಳ್ಳಬಾರದು ಎಂಬುದು ಆಶಯ. ಕೇಳೆಪೇಟ್ವಿರಾಬಲ್ಲವರುಂ – ಆ ತಿಳಿದವರೂ ಕೇಳಲು ಹೇಳುತ್ತಾರೆ – ಹೀಗೆಂದರೇನು? ಈ ಅರ್ಥ ಇಲ್ಲಿ ಅನ್ವಯಿಸುವುದಿಲ್ಲವಲ್ಲ! ಇದಕ್ಕೆ ಕೇಳೆ 'ಪೇಟಿಶ್ವಿದಾ' ಬಲ್ಲವರುಂ ಎಂಬ ಪಾಠವೇ ಸಮುಚಿತವೆಂದು ತೋರುತ್ತದೆ.

**೪೮. ವಿಕ್ರಮಾರ್ಜುನ ವಿಜಯ : ೬-೬೮**

ಗೆಲ್ದು ಕೊಳ್ವಂ ಈ ವಸಮತಿಯಂ ಮನಂಬಸದೆ

**ದೀಪಿಕೆ :**

ಗೆಲ್ದುಕೊಳ್ವಂ – ಗೆದ್ದು ತೆಗೆದುಕೊಳ್ಳೋಣ; ಮನಂಬಸದೆ – ಮನಸ್ಸನ್ನು ವಿಭಾಗಿಸದೆ ಎಂದರೆ ಬೇರೆ ಏನನ್ನೂ ಯೋಚಿಸದೆ.

**ಕ್ಷಕಿರಣ :**

ಮನಂಬಸದೆ ಎಂಬುದಕ್ಕೆ ಕೊಟ್ಟಿರುವ ಅರ್ಥ ಸರಿಯೇ?

ಮನಂಬಸದೆ – ಮನೋವಶದೆ – ಮನಸ್ಥೈರ್ಯದಿಂದ, ಧೈರ್ಯದಿಂದ ಎಂದಾಗಬೇಕು.

**೪೯. ವಿಕ್ರಮಾರ್ಜುನ ವಿಜಯ : ೬-೭೨**

ಪಲಗೆಗೆ ಪತ್ತು ಸಾಯಿರಮೆ .. ಕಡು ನನ್ನ ಮಾಟ್ವಿವೋಲ್

**ದೀಪಿಕೆ :**

ಈ ಪದ್ಯದ ಅನ್ವಯದಲ್ಲಿ ತುಂಬ ಕ್ಲೇಶವಿದೆ. ಸುಯೋಧನನೇವದೆ ಧರ್ಮಪುತ್ರನಂ ಎಂಬ ಪಾಠ ಕೆಟ್ಟಿರಬಹುದು ಸುಯೋಧನ[ನೋ] ವದೆ ಧರ್ಮಪುತ್ರನಂ, ಸುಯೋಧನನೇವದೆ ಧರ್ಮಪುತ್ರ[ನುಂ] ಎಂದೋ ಏನೋ ಪಾಠವಿರಬಹುದು. ಈ ಪದ್ಯದ ಕೊನೆಯಲ್ಲಿ ಸೋತವನಾರು ಎಂಬುದನ್ನು ತಿಳಿಯುವುದೇ ಕಷ್ಟ.

**ಕ್ಷಕಿರಣ :**

ಇಲ್ಲಿ ವಿಶೇಷವಾದ ಕ್ಲಿಷ್ಟತೆ ಏನೂ ಕಾಣುವುದಿಲ್ಲ. 'ಧರ್ಮಪುತ್ರನಂ' ಎಂಬುದು 'ಧರ್ಮಪುತ್ರನುಂ' ಎಂದಿದ್ದರಬಹುದು. ಹಾಗಿದ್ದರೆ ಅರ್ಥ ಸ್ಪಷ್ಟವಾಗುತ್ತದೆ. ಸೋತವನು ಧರ್ಮಪುತ್ರನೇ ಎಂಬುದರಲ್ಲಿ ಅನುಮಾನವಿಲ್ಲ. ಅನ್ವಯ ಹೀಗೆ:

ತಾಂ ಪಲಗೆಗೆ ಪತ್ತು ಸಾಯಿರಮೆ ಗದ್ಯಣಂ ಎಂದು ಇರದೊಡ್ಡಿ ಎರಟ್ಟ್ ಲಗೆಯನಾಡಿ ಸುಯೋಧನಂ ಸೋಲ್ತೊಡೆ, ಧರ್ಮಪುತ್ರನುಂ ಏವದೆ ಕುಲಧನ ಸಂಕುಲಂಗಳನೆ ತಂದಿಡೆ, ಇಟ್ಟವನ್ ಆಕುಲಮತಿ ಮುಂದೆ ಭಾರತದೊಳ್ ಬಟ್ಟುವುದನ ಕಡು ನನ್ನ ಮಾಟ್ವಿವೋಲ್ ಸೋಲ್ತಂ.

ಇದರ ಅರ್ಥ ಸುಸ್ಪಷ್ಟ.

೫೦. ವಿಕ್ರಮಾರ್ಜುನ ವಿಜಯ : ೬–೭೩
ಭಯಮಱಿಯದ ಕಲಿಯುಂ ಚಾ
ಗಿಯುಮೆನಿಸದೆ ನಾಡೆಲೋಭಿಯುಂ ಪಂದೆಯುಮಾ
ಗಿಯೆ ಬಾಳ್ವಂಗಲ್ಲದೆ ಸೂ
ಳೆಯ ಕಣ್ ಪಾಸಗೆಯ ಕಣ್ಣು ಮೇನುಱುಗುಗುಮೇ
ದೀಪಿಕೆ :
.. ಸೂಳೆಯ ಕಣ್ – ವೇಶ್ಯೆಯ ಕಣ್ಣೂ, ಪಾಸಗೆಯ ಕಣ್ಣುಂ – ದಾಳಗಳ ಕಣ್ಣುಗಳೂ (ಗುರುತು), ಏನುಱುಗುಗುಮೇ – ಬಾಗುತ್ತವೆಯೇ? ಇಲ್ಲ.
ಕ್ಷಕಿರಣ :
ಇಲ್ಲಿ 'ಏನುಟುಗುಗುಮೇ' ಎಂದಾಗಿರಬೇಕು. (ಉಟ್ಟು, ಉಟುಗು – ಅನುರಾಗಿಸು). ಸೂಳೆಯ ಕಣ್ಣೂ ದಾಳದ ಕಣ್ಣೂ ಒಲಿಯುತ್ತವೆಯೇ? ಇಲ್ಲ ಎಂಬ ಭಾವ.

೫೧. ವಿಕ್ರಮಾರ್ಜುನ ವಿಜಯ : ೬–೭೪
ಯಮನಂದನ್ ಅಜ್ಜ ನಾಡೆಯುಂ ಸೋಲದಳಾದಂ ಏವಯಿಸಿದೆಂ
ದೀಪಿಕೆ :
ಯಮನಂದನಂ – ಧರ್ಮರಾಜನು, ಅಜ್ಜ – ತಾತನೇ, ಸೋಲದೊಳ್ – ಜೂಜಿನಲ್ಲಿ ಸೋತಿದ್ದರಲ್ಲಿ ಆದಂ – ವಿಶೇಷವಾಗಿ, ಏವಯಿಸಿದೆಂ – ನೊಂದಿದ್ದೇನೆ ..
ಕ್ಷಕಿರಣ :
ಈ ಅನ್ವಯದಲ್ಲಿ 'ನಾಡೆಯುಂ' ಎಂಬ ಪದವನ್ನು ಕೈಬಿಡಲಾಗಿದೆ. 'ನಾಡೆಯುಂ','ಆದಂ' ಎಂಬ ಎರಡು ವಿಶೇಷಣಗಳಿರುವುದರಿಂದ ಪ್ರಯೋಜನವೇನು? ಬಹುಶಃ 'ನಾಡೆಯುಂ ಸೋಲದೊಳಾದೆಂ' (ಆದುದರಿಂದಲೇ) ಆದಂ ಏವಯಿಸಿದೆಂ – ಬಹಳಷ್ಟು ಸೋತು ಹೋಗೆದ್ದೇನೆ, ನೊಂದಿದ್ದೇನೆ ಎಂದಾಗಬೇಕು.
೫೨. ವಿಕ್ರಮಾರ್ಜುನ ವಿಜಯ : ೭–೧೬೮ರ ಅನಂತರದ ವಚನ
.. ಉಪ್ಪಿಕ್ಕಿದೊಡೆ ತುಪ್ಪದ ಮೆಲ್ಪಡಿತೆಂಬಂತೆ
ದೀಪಿಕೆ :
ಉಪ್ಪಿಕ್ಕಿದೊಡೆ ತುಪ್ಪದ ಮೆ[ಟ್ಪ್]ಡಿತೆಂಬಂತೆ – ಉಪ್ಪು ಬಡಿಸಿದರೆ ತುಪ್ಪಕ್ಕೆ ಮೋಸವೆನ್ನುವ ಹಾಗೆ ಮೆಟ್ಪ್ಡಿತು ಶಬ್ದ ಚಿಂತನಾರ್ಹ. ಮೆಟ್ಪ್ಡು+ಇತು = ಮೆಟ್ಪ್ಡಿತು; ಇದು ಭಾವ ನಾಮ .. ಮೆಟ್ಟಿಟ್ಟುದು ಮೆಟ್ಪ್ಡಿತು ಆಗಿದೆಯೆಂದೂ ಹೇಳಬಹುದು.
ಕ್ಷಕಿರಣ :
ಇದು ಉಪ್ಪಿಕ್ಕಿದೊಡೆ ತುಪ್ಪದ ಮೆಟ್ಟಿತುಗಿತೆಂಬಂತೆ ಎಂದಿದ್ದಿರಬಹುದೇ? ಉಪ್ಪು

ಬಡಿಸಿದ್ದರಿಂದ ತುಪ್ಪದ ಸೌಸವ (ಪರಿಮಳ) ಇಲ್ಲದಾಯಿತು ಎಂಬ ಭಾವ. ಮುದ್ರಿತ ಪ್ರತಿಯಲ್ಲಿ ಮೆಳ್ಪಡಿತು ಎಂದು 'ಕುಳ'ವನ್ನು ಸ್ವೀಕರಿಸಲಾಗಿದೆ.

**೫೩. ವಿಕ್ರಮಾರ್ಜುನ ವಿಜಯ : ೭-೧೯**

ಜೂದಿನಗೆಲ್ಲದೊಳಾದೀ
ಮೇದಿನಯಂ ಕಂಡು ಕಜ್ಜಮಂ ಕಾಣದೆ ದು
ಜ್ಜೋದನನದೇನದೇಂ ಮರು
ಳಾದನೊ ಬಡಿಗಂಡನಲ್ಲ ಪಾಲನೆ ಕಂಡಂ

**ದೀಪಿಕೆ :**

ದುಜ್ಜೋದನಂ - ದುರ್ಯೋಧನನು, ಅದೇನದೇಂ - ಅದೇನು ಅದೇನು ಎಂದರೆ ಅತಿಶಯವಾಗಿ, ಮರುಳಾದನೊ - ಭ್ರಾಂತನಾದನೋ? ಬಡಿಗಂಡನಲ್ಲ - ಎತ್ತಿದ ಬಡಿಗೆಯನ್ನು ಅವನು ಕಾಣಲಿಲ್ಲ, ಪಾಲನೆ ಕಂಡಂ - ಹಾಲನ್ನು ಮಾತ್ರ ಕಂಡನು.

**ಕ್ಷಕಿರಣ :**

ದುಜ್ಜೋದನಂ ಅದೇನದೇಂ ಮರುಳಾದನೊ - ದುರ್ಯೋಧನನು ಅತಿಶಯವಾಗಿ ಭ್ರಾಂತನಾದನೋ? ಇದು ಪ್ರಶ್ನಾರ್ಥಕವಲ್ಲ. ದುರ್ಯೋಧನನು ಅದೆಷ್ಟು ಭ್ರಮೆಗೊಂಡನೋ! ಎಂಬ ಉದ್ಗಾರ. ಬಡಿಗಂದನಲ್ಲ ಪಾಲನೆ ಕಂಡಂ - ಎತ್ತಿದ ಬಡಿಗೆಯನ್ನು ಕಾಣಲಿಲ್ಲ; ಹಾಲನ್ನು ಮಾತ್ರ ಕಂಡನು.

ಇದೊಂದು ನುಡಿ ಮುತ್ತು. ಈ ಗಾದೆಯ ಲಕ್ಷ್ಯಾರ್ಥವನ್ನು ವಿವರಿಸಬೇಕಿತ್ತು. ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿಯುವಾಗ ಮನೆಯೊಡತಿ ಕಂಡು ಬಡಿಗೆಯಿಂದ ಹೊಡೆಯುವುದು ಸಹಜವಷ್ಟೆ. ಕಣ್ಣು ಮುಚ್ಚಿ ಹಾಲು ಕುಡಿಯುವ ಬೆಕ್ಕಿಗೆ ತನ್ನನ್ನು ಯಾರೂ ನೋಡುವುದಿಲ್ಲ ಎಂಬ ಹುಚ್ಚು, ತಿಳಿಗೇಡಿತನ! ಅದರಂತೆ ದುರ್ಯೋಧನನಗೆ ಮುಂದಾಗಲಿರುವ ವಿಪತ್ತನ್ನು ಪಂಪ ಇಲ್ಲಿ ಮಾರ್ಮಿಕವಾಗಿ ಸೂಚಿಸಿದ್ದಾನೆ ಎನ್ನಬಹುದು.

**೫೪. ವಿಕ್ರಮಾರ್ಜುನ ವಿಜಯ : ೭-೩೪**

ನೋಂತರ ಪಗೆವರನೆಟ್ಟಿಜಿದಂತಾಯ್ತು ಎಂದಿರದೆ . ಭಿಕ್ಷಮನಕ್ಕಿಂ

**ದೀಪಿಕೆ :**

ನೋಂತಿರ - (ಕೊಲ್ಲಬೇಕೆಂದು) ವ್ರತಮಾಡಿದವರ, ಪಗೆವರಂ - ಹಗೆಗಳನ್ನು, ಎಟ್ಟಿಜಿಮದಂತಾಯ್ತು - ಎತ್ತು ಇರಿದ ಹಾಗಾಯಿತು, ಎಂದಿರದೆ - ಎಂದು ಸುಮ್ಮನೆ ಇರದೆ, ...

**ಕ್ಷಕಿರಣ :**

ನೋಂತರ ಎಂಬುದಕ್ಕೆ ಕೊಲ್ಲಬೇಕೆಂದು ವ್ರತಮಾಡಿದವರ ಎಂದು ಅರ್ಥ ಮಾಡಿದ್ದು ಸರಿಯಲ್ಲ. ನೋಂತರ ಎಂದರೆ ಪುಣ್ಯಾತ್ಮರ ಎಂದರ್ಥ ಅವರಿಗೆ

ದ್ರೋಹವನ್ನು ಮಾಡುವ ಶತ್ರುಗಳನ್ನು ಎತ್ತು ತಿವಿದಂತಾಯಿತು; ಎಂದಿರದೆ - ಎಂದು ತಟಸ್ಥವಾಗಿರದೆ.

**೫೫. ವಿಕ್ರಮಾರ್ಜುನ ವಿಜಯ : ೭-೩೫**

ಪಿರಿದುಂ ಕಾಯ್ಪಿನೊಳೆಯ್ದೆ ಕಾಯ್ವ ಸಮಕಟ್ಟಿಂ ದೋಷಮಲ್ತಕ್ಕ ಮಚ್ಚರಮುಂ ಪರ ಚಿಂತಾಕಾರ ಏಹಿ

**ದೀಪಿಕೆ :**

ಪಿರಿದುಂ ಕಾಯ್ಪಿನೊಳ್ - ಹಿರಿದಾದ ಕೋಪದಲ್ಲಿ, ಎಯ್ದೆ - ಚೆನ್ನಾಗಿ, ಕಾಯ್ವ - ಕೋಪಿಸುವ; ಸಮಕಟ್ಟು - ಏರ್ಪಾಡು, ಇಂ-ಇನ್ನು; ದೋಷಮಲ್ತೆ - ದೋಷವಲ್ಲವೇ, ಅಕ್ಕ - ಅಕ್ಕನೇ, ಮಚ್ಚರಮುಂ - ಮತ್ಸರವೂ ಪರಚಿಂತಾಕರ - ಅನ್ಯರಿಗೆ ಚಿಂತೆಯನ್ನುಂಟು ಮಾಡುವವನೇ, ಏಹಿ - ಹೋಗು

ಈ ಪದ್ಯದ ಅನ್ವಯ ತಾತ್ಪರ್ಯಗಳು ಕೊಂಚ ಕ್ಲೇಶಕರವಾಗಿವೆ.

**ಕ್ಷಕಿರಣ :**

ಇಲ್ಲಿ ಪದವಿಂಗಡಿಸಿದ್ದು ತಪ್ಪೆಂದು ತೋರುತ್ತದೆ. ಅಕ್ಕನೆಂದು ಸಂಬೋಧಿಸಿದ್ದು ಯಾರನ್ನು? ಇಲ್ಲಿ ಧರ್ಮರಾಯನು ತನ್ನಲ್ಲೇ ಹೇಳಿಕೊಳ್ಳುವ ಮಾತು ಬಂದಿದೆ. ಆದುದರಿಂದ 'ದೋಷಮಲ್ತಕ್ಕಮಚ್ಚರಮುಂ' ಎಂಬುದನ್ನು 'ದೋಷಮಲ್ತೆ+ಅಕ್ಕಮಚ್ಚರಮುಂ' ಎಂದು ವಿಂಗಡಿಸಬೇಕು. ಅಕ್ಕಮಚ್ಚರ (ಸವತಿಮತ್ಸರ) ಎಂದರೆ ಇಲ್ಲಿ ದಾಯಾದ್ಯಮತ್ಸರ ಎಂದು ಭಾವಿಸಬೇಕು.

'ಪರಚಿಂತಾಕರ ಏಹಿ'ಗೆ ಕೊಟ್ಟಿರುವ ಅರ್ಥವೂ ಸರಿಯಲ್ಲ. ಏ ಪರಪೀಡಕನೇ ಬಾ (ನನ್ನನ್ನು ತೀರಿಸಿಬಿಡುತ್ತೇನೆ) ಎಂದಾಗಬೇಕು. ಇದರೊಂದಿಗೆ 'ನೋಂತರ ಪಗೆವರಂ ಎಟ್ಟು ಇಱಿದಂತಾಯ್ತು' ಎಂಬುದನ್ನು ಹೋಲಿಸಿಕೊಳ್ಳಬಹುದು.

**ಪ್ರೊ. ಪಿ.ಸುಭ್ರಾಯ ಭಟ್ಟರ ಕಿರು ಪರಿಚಯ**

ದಿ.೧೬-೩-೧೯೨೨ ರಂದು ಕಾಸರಗೋಡು ತಾಲೂಕಿನ ಪುಳಿಯಡಿ ಮನೆಯಲ್ಲಿ ಜನಿಸಿದರು. ತಂದೆ ಕೇಶವಭಟ್ಟ, ತಾಯಿ ತಿರುಮಲೇಶ್ವರಿ. ಸುಭ್ರಾಯ ಭಟ್ಟರ ಶ್ರೀಮತಿ.ಲಲಿತಾ ಕಡಮಕಲ್ಲು. ಐದು ಗಂಡು ಮತ್ತು ಮೂವರು ಹೆಣ್ಣು ಮಕ್ಕಳು. ತಾ॥ ೨೯-೮-೧೯೭೬ ರಂದು ಸ್ಕೂಟರ್ ಅಪಘಾತದಿಂದಾಗಿ ಪ್ರೊ.ಭಟ್ಟರು ಮರಣ ಹೊಂದಿದರು. ಪಳ್ಳತ್ತಡ್ಕ, ಪೆರ್ಲದ ಶಾಲೆಗಳಲ್ಲಿ, ನೀರ್ಚಾಲಿನ ಮಹಾಜನ ಸಂಸ್ಕೃತ ಕಾಲೇಜುಗಳಲ್ಲಿ ಪ್ರಾಥಮಿಕ - ಮಾಧ್ಯಮಿಕ ಪದವಿ ಶಿಕ್ಷಣವನ್ನು ಪಡೆದುಕೊಂಡರು. ೧೯೪೩ ರಲ್ಲಿ ವಿದ್ವಾನ್ ಪದವಿಯನ್ನು ಪಡೆದರು.

ತಿರುಪತಿಯಲ್ಲಿ ಆರು ತಿಂಗಳ ಕಾಲ ಪ್ರಾಚೀನ ತಾಳೆಯೋಲೆ ಗ್ರಂಥಗಳನ್ನು ಪ್ರತಿ ಮಾಡುವ ಕೆಲಸವನ್ನು ಮಾಡಿದರು. ತದನಂತರ ಮದರಾಸಿನ ಸರಕಾರಿ ಪ್ರಾಚ್ಯ ಪುಸ್ತಕ ಭಂಡಾರದಲ್ಲಿ ೧೯೫೨ರವರೆಗೆ ಗಣನೀಯ ಸಂಖ್ಯೆಯಲ್ಲಿ ಪ್ರಾಚೀನ ಗ್ರಂಥಗಳ ಹಸ್ತಪ್ರತಿಗಳನ್ನು ಸಿದ್ಧಪಡಿಸಿದರು. ಅಲ್ಲಿ ಶ್ರೇಷ್ಠ ವಿದ್ವಾಂಸರಾದ ಪ್ರೊ॥ ಎಂ.ಮರಿಯಪ್ಪ ಭಟ್ಟರ ಆತ್ಮೀಯ ಒಡನಾಟವೂ ಲಭ್ಯವಾಯಿತು. ಖಾಸಗಿಯಾಗಿ ಬಿ.ಎ.ಪದವಿಯನ್ನು

ಮದರಾಸು ವಿ.ವಿ.ಯಿಂದ ಪೆಡದುಕೊಂಡರು. ೧೯೫೨ರಲ್ಲಿ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಕನ್ನಡ ಸಹಾಯಕ ಪ್ರಾಧ್ಯಾಪಕರಾಗಿ ನೇಮಕಗೊಂಡರು ಅನಂತರ ೧೯೫೭ ರಿಂದ ಕಾಸರಗೋಡಿನ ಸರಕಾರಿ ಕಾಲೇಜಲ್ಲಿ ಕನ್ನಡ ಉಪನ್ಯಾಸಕರಾಗಿ ಪಾದಾರ್ಪಣೆ ಮಾಡಿದರು. ಅಪಘಾತಕ್ಕೆ ಒಳಗಾಗುವವರೆಗೂ (೧೯೭೬) ಪ್ರಾಧ್ಯಾಪಕ ಹುದ್ದೆಯಲ್ಲಿದ್ದರು.

ಇವರು ರಚಿಸಿದ ಕೃತಿಗಳು :- (೧) ರವೀಂದ್ರನಾಥ ಟಾಗೂರ್ (ಆಂಗ್ಲಾನುವಾದ ೧೯೪೮) (೨) ಲೀಲಾತಿಲಕಂ (೧೯೭೪) ಡಾ.ಬಿ.ಕೆ.ತಿಮ್ಮಪ್ಪನವರೊಂದಿಗೆ ಜಂಟಿಯಾಗಿ ಮಲೆಯಾಳದ ಪ್ರಾಚೀನ ಲಕ್ಷಣ ಗ್ರಂಥಲೀಲಾತಿಲಕದ ವ್ಯಾಕರಣಕ್ಕೆ ಸಂಬಂಧಿಸಿದ ೩ ಅಧ್ಯಾಯಗಳನ್ನು ಮಾತ್ರ ಕನ್ನಡಿಸಿದ್ದಾರೆ. (೩) ಗದಾಯುದ್ಧದರ್ಪಣಂ ಪ್ರಕಟಿತವಾಗಿದೆ. [೧೯೭೬] ಸುಬ್ರಾಯ ಭಟ್ಟರಿಗೆ ಡಾ॥ಆರ್.ಸಿ.ಹಿರೇಮಠ, ಪ್ರೊ॥ಯಂ.ಮರಿಯಪ್ಪ ಭಟ್ಟ, ಖಂಡಿಗೆ ಪ್ರಿನ್ಸಿಪಾಲ್ ಶಾಮಭಟ್ಟ, ಬೇಂದ್ರೆ, ಮಾಸ್ತಿ, ಕಾರಂತ, ಕಡೆಂಗೋಡ್ಲು, ಸೇಡಿಯಾಪು.ದೇ.ಜವರೇಗೌಡ, ಎಸ್‌ವಿಪಿ, ತೆಕ್ಕುಂಜ, ಕಯ್ಯಾರ ಮೊದಲಾದ ಪಂಡಿತವರೇಣ್ಯರ ನಿಕಟ ಸಂಪರ್ಕ, ಒಡನಾಟವಿತ್ತು.

# ಕನ್ನಡ ಹಸ್ತಪ್ರತಿಗಳು: ಆಕರ ಸಂಪತ್ತು

ಡಾ.ಸಿ.ನಾಗಭೂಷಣ

ಹಸ್ತಪ್ರತಿಗಳು ನಾಡಿನ ಸಂಸ್ಕೃತಿಯ ಭಂಡಾರಗಳು.ಸಾಹಿತ್ಯ ಸಂಸ್ಕೃತಿಯ ಸೃಷ್ಟಿಶೀಲ ಉತ್ಪನ್ನಗಳು. ಹಸ್ತಪ್ರತಿಗಳು ಯಾವುದೋ ಕಾಲದಲ್ಲಿ ಬರೆದಿಟ್ಟ ಏಕಘನಾಕೃತಿಯ ಸ್ಥಿರ ಪಠ್ಯಗಳಲ್ಲ. ಕಾಲ ಕಾಲದಲ್ಲಿ ಕನ್ನಡ ಸಂಸ್ಕೃತಿಯು ಪುನಾರಚಿಸಿಕೊಳ್ಳುತ್ತಾ ಬಂದ ಚರಪಠ್ಯಗಳು. ಹಸ್ತಪ್ರತಿಗಳ ಪರಂಪರೆಯು ಒಂದು ಕಾಲಾವಧಿಯಲ್ಲಿ ರಚಿತವಾಗಿರುವ ಕೃತಿಗಳ ಸಂಕಲನವಲ್ಲ. ಕೃತಿ–ಸಂಸ್ಕೃತಿ ನಡುವಿನ ಅರ್ಥಪುರ್ಣ ಸಂಬಂಧಗಳ ಬೆಸುಗೆಯಾಗಿದೆ. ಕನ್ನಡಿಗರ ವಿದ್ಯಾಸಂಪತ್ತನ್ನು ಸಾಂಸ್ಕೃತಿಕ ಮಹತ್ವವನ್ನು ಗರ್ಭೀಕರಿಸಿಕೊಂಡಿವೆ. ಪ್ರಾಚೀನ ಕನ್ನಡಿಗರ ಬದುಕಿನ ಒಲವುಗಳನ್ನು, ವಿದ್ಯಾಭಿಮಾನ ಮತ್ತು ಧರ್ಮಾಭಿಮಾನಗಳನ್ನು ಅರಿತು ಕೊಳ್ಳಬಹುದು. ಕನ್ನಡ ಹಸ್ತಪ್ರತಿಗಳನ್ನು ಯಾವುದೇ ಕಾಲದ ಪಳೆಯುಳಿಕೆಗಳೆನ್ನದೆ ಹಾಗೂ ನಮ್ಮ ಕಾಲಕ್ಕೆ ಅಗತ್ಯವಲ್ಲದ ಪರಿಕರಗಳೂ ಎಂದು ಭಾವಿಸದೇ ಅವುಗಳನ್ನು ಕನ್ನಡ ನಾಡಿನ ಸಮಾಜ ಹಾಗೂ ಸಂಸ್ಕೃತಿಗಳ ಕ್ರಿಯಾಶೀಲ ನಡೆವಳಿಕೆಗಳು ಎಂದು ಅರಿವಿನ ವಿಸ್ತಾರಗಳ ಪರಿಧಿಯಲ್ಲಿ ಗುರುತಿಸ ಬೇಕು. ಹಸ್ತಪ್ರತಿಗಳಲ್ಲಿ ಭಾಷೆ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ವೈವಿಧ್ಯಪುರ್ಣ ವಿವರಗಳು ಕಂಡು ಬರುತ್ತವೆ. ಜ್ಞಾನದ ಅಧೀನತೆಯನ್ನು ಮೀರಿನಿಂತ ಹಸ್ತಪ್ರತಿಗಳು ಓದುವ–ಕೇಳುವ ಸ್ವಭಾವವನ್ನು ಹೊಂದಿದ್ದು ಸಂವಹನ ಹಾಗೂ ಅನುಭವ ಕಥನವನ್ನು ಆಧರಿಸಿವೆ. ಮಧ್ಯಕಾಲೀನ ಕನ್ನಡ ನಾಡಿನ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಸಂದರ್ಭದ ಕನ್ನಡದ ದೈಹಿಕ ಮಾನಸಿಕ ಬೌದ್ಧಿಕ ಹಾಗೂ ಭಾವನಾತ್ಮಕ ಅಂತಃಸತ್ವಗಳೊಂದಿಗೆ ರೂಪುಗೊಂಡಿವೆ. ಅಧುನಿಕ ಪೂರ್ವದಲ್ಲಿ ಹಸ್ತಪ್ರತಿಗಳು ರೂಪುಗೊಳ್ಳುವಿಕೆಯಲ್ಲಿ, ಆಯುರಾರೋಗ್ಯಭಾಗ್ಯ, ಪುತ್ರಸಂತಾನ, ಸಕಲೈಶ್ವರ್ಯ ಸಿದ್ಧಿ, ಜೀವನಸುಖ, ಮನೋಭಿಷ್ಟ–ಕಾರ್ಯಸಿದ್ಧಿ, ಸ್ವ–ಸುಖದ ಹಾರೈಕೆ, ಸಂಪ್ರೀತಿ, ಸಮಯನಿಷ್ಠೆ, ಮೋಕ್ಷ ಸಂಪಾದನೆ, ರೋಗರುಜಿನಗಳ ನಿವಾರಣೆ, ಜ್ಞಾನಾರ್ಜನೆ, ಜ್ಞಾನರಕ್ಷಣೆ, ಅನಿಷ್ಟ ನಿವಾರಣೆ, ಮಳೆ ಬರುವಿಕೆ ಇತ್ಯಾದಿ ಹಲವು ರೀತಿಯ ಜೀವನೋಪಯೋಗಿ ಕಾರ್ಯಗಳು ಕಾರಣವಾಗಿರುವುದನ್ನು ಗುರುತಿಸ ಬಹುದಾಗಿದೆ. ಹಸ್ತಪ್ರತಿಗಳಲ್ಲಿರುವ ಅಧ್ಯಯನದ ವಿಷಯಗಳು ಹಲವಾರು. ಸಾಹಿತ್ಯ, ಸಮಾಜ, ಭಾಷೆ, ಇತಿಹಾಸ, ಧರ್ಮ ನಂಬಿಕೆ, ಆಚರಣೆ, ಆಚಾರ–ವಿಚಾರ, ಶಿಕ್ಷಣ, ವಿಜ್ಞಾನ, ತಂತ್ರಜ್ಞಾನ, ವೈದ್ಯ ಇತ್ಯಾದಿ

ಲೌಕಿಕ ಶಾಸ್ತ್ರಗಳು ಇತ್ಯಾದಿ ನಮ್ಮ ಪರಂಪರೆಯ ಜ್ಞಾನಶಾಖೆಗಳೆಲ್ಲವೂ ಹಸ್ತಪ್ರತಿ ಅಧ್ಯಯನದ ವಸ್ತುಗಳೇ ಆಗಿವೆ. ಇವೆಲ್ಲವೂ ಆಯಾ ಕಾಲದ ಜನರ ಅಗತ್ಯಗಳಿಗಾಗಿಯೇ ರೂಪುಗೊಂಡಂತಹವುಗಳು. ಇವುಗಳ ಸೃಷ್ಟಿಯಲ್ಲಿ ಪ್ರಾದೇಶಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ಹಾಗೂ ಲಿಂಗ, ಜಾತಿ ಇತ್ಯಾದಿ ಆಯಾಮಗಳಿವೆ.

ವಿವಿಧ ಜ್ಞಾನಶಾಖೆಗಳೆಲ್ಲವನ್ನು ಒಳಗೊಂಡಿರುವ ಹಸ್ತಪ್ರತಿಗಳು ಶಾಸನ ಇತ್ಯಾದಿ ಆಕರಗಳ ಹಾಗೆ ಬಹಿರಂಗ ದಾಖಲೆಗಳೂ ಅಲ್ಲ. ಶಾಶ್ವತ ದಾಖಲೆಗಳೂ ಅಲ್ಲ. ಕಾಲ ಗರ್ಭದಲ್ಲಿ ಮರೆಯಾಗುವ ಬಹಳ ಬೇಗ ನಾಶವಾಗುವಂತಹ ಅಲ್ಪಾಯಿಷಿಗಳು. ಇವುಗಳ ಮಹತ್ವದ ಬಗೆಗೆ, ಪ್ರಾಮುಖ್ಯತೆಯ ಬಗೆಗೆ ಅರಿವು ಬೆಳೆದು ಸ್ವಪ್ರೇರಣೆ ಹಾಗೂ ಆಸಕ್ತರ ಪ್ರಯತ್ನದಿಂದಾಗಿ ನಾಡಿನಲ್ಲಿ ಕೆಲವು ಹಸ್ತಪ್ರತಿಗಳು ಮಾತ್ರ ಸಂಗ್ರಹಿಸಲ್ಪಟ್ಟಿದೆ. ಹಸ್ತಪ್ರತಿಗಳಲ್ಲಿ ಬಹುಪಾಲು ಪ್ರಕಟಗೊಂಡಿರುವುದು ಸಾಹಿತ್ಯ ಕ್ಷೇತ್ರದಲ್ಲಿ ಮಾತ್ರ. ಉಳಿದ ಜ್ಞಾನ ಶಾಖೆಗಳ ಹಸ್ತಪ್ರತಿಗಳಲ್ಲಿ ಕೆಲವು ಮಾತ್ರ ಪ್ರಕಟಗೊಂಡಿವೆ. ಉಳಿದ ಹಸ್ತಪ್ರತಿಗಳು ಉಪೇಕ್ಷಿತ ಹಸ್ತ ಪ್ರತಿಗಳಾಗಿಯೇ ಉಳಿದಿವೆ. ಕೃತಿಗಳ ಹೆಸರು ಗೊತ್ತಿದ್ದು ಅವುಗಳ ಹಸ್ತಪ್ರತಿಗಳು ದೊರೆತಿರುವುದಿಲ್ಲ. ಗೊತ್ತಿರದ ಎಷ್ಟೋ ಗ್ರಂಥಗಳು ಹಸ್ತಪ್ರತಿಗಳಲ್ಲಿ ಅಜ್ಞಾತವಾಗಿಯೇ ಉಳಿದಿವೆ. ಅವುಗಳ ಬಗೆಗೆ ಆಸಕ್ತರ ಹಾಗೂ ಸಂಗ್ರಹಕಾರರ ಮನವೊಲಿಸಿ ಹೊರತೆಗೆಯಬೇಕಾಗಿದೆ. ಹಸ್ತಪ್ರತಿಗಳನ್ನು ಸಾಂಸ್ಕೃತಿಕ ಅಧ್ಯಯನದ ಬಹುಮುಖ ನೆಲೆಗಟ್ಟುಗಳಲ್ಲಿ ರೂಪಿಸಿ ಕೊಳ್ಳುವುದಕ್ಕೂ ಮೊದಲು ಸಮಗ್ರ ಹಸ್ತಪ್ರತಿಗಳ ಸಂಗ್ರಹ ಮತ್ತು ಸಂರಕ್ಷಣೆಯಾಗ ಬೇಕು. ಜೊತೆಗೆ ಲಭ್ಯವಿರುವ ಸಾಹಿತ್ಯೇತರ ಹಸ್ತಪ್ರತಿಗಳನ್ನು ಪ್ರಕಟಿಸುವ ವ್ಯವಸ್ಥೆ ಆಗಬೇಕಾಗಿದೆ. ಇಂದು ಕನ್ನಡ ಹಸ್ತಪ್ರತಿಗಳ ಅಧ್ಯಯನ ಹೆಚ್ಚು ಚರ್ಚೆಗಳಿಲ್ಲದೆ ಕೇವಲ ಶಿಷ್ಟ ದಾಖಲೀಕರಣದ ಉತ್ಪನ್ನ ಎನ್ನುವ ಸಾಮಾನ್ಯ ತಿಳಿವಳಿಕೆಯನ್ನು ಮರುಪರಿಶೀಲಿಸ ಬೇಕಾಗಿದೆ. ಹಸ್ತಪ್ರತಿಗಳನ್ನು ಮಾತೃಕೆಯ ಮೂಲಕ ರೂಪುತಾಳುವ ಪೀಳಿಗೆಗಳ ಅಧ್ಯಯನದ ಜೊತೆಗೆ ಸಾಂಸ್ಕೃತಿಕ ನಿರ್ಮಾಣದ ಬಹುಪಠ್ಯೀಯ ನೆಲೆಗಳ ಹಿನ್ನೆಲೆಯಲ್ಲಿಯೂ ಅಧ್ಯಯನ ಮಾಡಬೇಕಾಗಿದೆ.

ಹಸ್ತಪ್ರತಿ ಲಿಪಿಕಾರರು:

ಇಂದು ನಮಗೆ ಮೂಲ ಪ್ರತಿಗಳು ಸಿಗುವುದಿಲ್ಲ. ಮೂಲ ಪ್ರತಿಗಳು ದೊರೆತಿದ್ದರೆ ಹಸ್ತಪ್ರತಿಗಳ ಮಹತ್ವದ ಬಗೆಗೆಇಷ್ಟೊಂದೆಲ್ಲ ಮಾತಾಡುವ ಅವಶ್ಯಕತೆ ನಮಗೆ ದೊರೆಯುತ್ತಿರಲಿಲ್ಲ. ಇವತ್ತು ಪ್ರಾಚೀನ ಕವಿಯ ಸನಿಹದ ಕಾಲಾವಧಿಯಲ್ಲಿ ಹುಟ್ಟಿದಂತಹ ಹಸ್ತಪ್ರತಿಗಳು ಸಿಗುವುದು ಸಹ ವಿರಳವಾಗಿದೆ. ಇಲ್ಲಿಯವರೆಗೂ ಕವಿ ಕೃತಿಯಿಂದಿಡಿದು ಪ್ರತಿ, ಮರು ಪ್ರತಿ ಇತ್ಯಾದಿ ರೂಪದಿಂದಲೂ ಹಸ್ತಪ್ರತಿಗಳು ಕಾಲಾಂತರದಲ್ಲಿ ಸಾಗಿ ಬಂದಿರುವುದನ್ನು ಕಾಣುತ್ತೇವೆ. ಕವಿಯ ಮೂಲಪ್ರತಿಗೂ ನಕಲು, ಮರುನಕಲುಗೊಂಡ ಪ್ರತಿಗಳಿಗೂ ಬಹುಮಟ್ಟಿಗೆ ೨೦೦-೩೦೦ ವರ್ಷಗಳ ಅಂತರ ಇದೆ. ಪ್ರತಿಕಾರರು ನಾಡಿನ ಸಂಸ್ಕೃತಿಯನ್ನು ಸಂರಕ್ಷಿಸುವಲ್ಲಿ ಅತ್ಯಂತ ಶ್ರದ್ಧೆಯಿಂದ ದುಡಿದವರಾಗಿದ್ದಾರೆ. ಕನ್ನಡ ಕಾವ್ಯಗಳು ಸಾಹಿತ್ಯ ಸಂಸ್ಕೃತಿ ಪ್ರಸಾರದ ಮೂಲಕ

ಸಹೃದಯರ ಕೈ ಸೇರುವಲ್ಲಿ ಲಿಪಿಕಾರರ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ಹಸ್ತಪ್ರತಿಗಳ ಸ್ವರೂಪ ಮತ್ತು ಸ್ವಭಾವವೇ ಭೌತಿಕ ಹಾಗೂ ಹೇಳುವ ಕೇಳುವ ಪರಂಪರೆಗೆ ಸೇರಿದುದಾಗಿದೆ. ತನ್ನ ಲಿಖಿತ ಗುಣದಲ್ಲಿ ಶ್ರವಣ ಪರಂಪರೆಯ ಬಹುಮುಖಿ ಲಕ್ಷಣಗಳನ್ನು ಉಳಿಸಿಕೊಂಡು ಬಂದಿದೆ. ಲಿಪಿಕಾರರು ಪ್ರತಿಮಾಡುವ ಪಠ್ಯಗಳು ಬಹುಮುಖಿ ಸಂವೇದನೆಗಳನ್ನು, ಕಾಲದ ಒತ್ತಡಗಳನ್ನು ಲಿಪಿಕಾರನ ಸಾಂಸ್ಕೃತಿಕ ಸಂದರ್ಭವನ್ನು ಒಳಗೊಂಡು ರೂಪುಗೊಂಡಿರುತ್ತವೆ. ಲಿಪಿಕಾರರು ಪ್ರತಿಮಾಡಿಕೊಳ್ಳುವಲ್ಲಿ, ಪಾಠಶುದ್ಧತೆಯನ್ನು ಕಾಯ್ದುಕೊಳ್ಳುವಲ್ಲಿ ಅನುಸರಿಸಿದ ಮಾರ್ಗದ ಬಗ್ಗೆ ಯಾವ ಮಾಹಿತಿಯ ಲಭ್ಯ ಇಲ್ಲ. ಆದಾಗ್ಯೂಲಿಪಿಕಾರರ ಉತ್ಸಾಹ, ಪರಿಶ್ರಮ,ಪ್ರಯತ್ನ ಮತ್ತು ಅವರ ಅರ್ಪಣ ಮನೋಭಾವದಿಂದ ತಾವು ಮಾಡಿದ ನಕಲು ಕಾರ್ಯದ ಪರಿಣಾಮವಾಗಿ ಪ್ರಾಚೀನ ಸಾಹಿತ್ಯ ಮುಂದಿನ ಜನಾಂಗಕ್ಕೆ ತಲುಪುವಂತಾಗಿದೆ. ಮಧ್ಯಕಾಲೀನ ಕರ್ನಾಟಕದ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಸಂದರ್ಭದ ಕನ್ನಡದ ದೈಹಿಕ, ಮಾನಸಿಕ,ಬೌದ್ಧಿಕ ಹಾಗೂ ಭಾವನಾತ್ಮಕ ಅಂತಃಸತ್ವಗಳೊಂದಿಗೆ ರೂಪುಗೊಂಡ ಹಸ್ತಪ್ರತಿಗಳನ್ನು ಅವುಗಳ ರೂವಾರಿಗಳಾದ ಲಿಪಿಕಾರರಿಂದ ಹೊರಗಿಟ್ಟು ನೋಡಲು ಸಾಧ್ಯವಿಲ್ಲ.

ಹಸ್ತಪ್ರತಿಗಳ ಅಧ್ಯಯನವೆಂದರೆ ಒಂದು ರೀತಿಯಲ್ಲಿ ಲಿಪಿಕಾರರ ಜೀವನ ಮತ್ತು ಸಾಧನೆಯ ಮತ್ತು ಮನೋಧರ್ಮದ ಅಧ್ಯಯನವಾಗುತ್ತದೆ. ವೈದ್ಯ, ಜ್ಯೋತಿಷ್ಯ, ವಾಸ್ತುಶಿಲ್ಪ, ಅಶ್ವ, ಗಜಶಾಸ್ತ್ರ, ಪಶುವೈದ್ಯ, ಮಾಟ-ಮಂತ್ರ ಮೋಡಿ ಮುಂತಾದ ವಿಷಯಗಳ ಹಸ್ತಪ್ರತಿಗಳಲ್ಲಿ ಕನ್ನಡ ಲಿಪಿ, ಲಿಪಿಕಾರರ ಕಾಲಾನುಕ್ರಮ ಬೆಳವಣಿಗೆಯ ಚಿಂತನೆಗಳನ್ನು, ಭಿನ್ನ ಮತಧರ್ಮಗಳ ಆಚಾರ ವಿಚಾರ ಮತ್ತು ಕನ್ನಡಿಗರ ಸೃಜನಾತ್ಮಕ ಪ್ರವೃತ್ತಿಯನ್ನು ತಿಳಿಯ ಬಹುದಾಗಿದೆ. ಹಸ್ತಪ್ರತಿಗಳ ಅಧ್ಯಯನವೆಂದರೆ ಅಲ್ಲಿರುವ ವಿಷಯದ ಅಧ್ಯಯನವಷ್ಟೇ ಅಲ್ಲ. ಲಿಪಿಕಾರನ ಮನೋಧರ್ಮ, ಸಾಮಾಜಿಕ ಚಹರೆ, ಲಿಪಿಯ ವಿನ್ಯಾಸ, ಲಿಪಿಯ ಸ್ವರೂಪ ಮತ್ತು ಶೈಲಿಗಳ ಅಧ್ಯಯನವೂ ಆಗಿದೆ.

ಲಿಪಿಕಾರರ ಪ್ರಭೇದಗಳಲ್ಲಿ ಒಂದಾದ ವೃತ್ತಿನಿರತ ಲಿಪಿಕಾರರು ತಾವು ಕೈಗೊಳ್ಳುವ ನಕಲು ಕಾರ್ಯಕ್ಕೆ ಪಡೆಯುವ ಸಂಭಾವನೆಯಲ್ಲಿ ಇದ್ದಂತಹ ಸ್ಪರ್ಧಾತ್ಮಕ ಪ್ರಯತ್ನಗಳು ಅಥವಾ ವೃತ್ತಿಲಿಪಿಕಾರ ತನ್ನ ಜೀವಿತಕ್ಕಾಗಿ ನಡೆಸಿದ ಹೋರಾಟದ ಸ್ಥಿತಿಗತಿಗಳಂತಹ ವಾತಾವರಣದ ಅಂಶಗಳನ್ನು ಗುರುತಿಸಬೇಕಾಗಿದೆ. ಹಸ್ತಪ್ರತಿ ಪುಷ್ಪಿಕೆಯಲ್ಲಿ ದೊರೆತಿರುವ ಈ ಉಲ್ಲೇಖವನ್ನು ಇಲ್ಲಿ ಪ್ರಸ್ತಾಪ ಮಾಡಬೇಕಾಗುತ್ತದೆ. 'ಉತ್ತೊಳಲಲ್ಲಿ ನಿರುದ್ಯೋಗದಲ್ಲಿದ್ದಾಗ ಭಾರತ ಪುಸ್ತಕ ಬರದ್ದು.ಬರದೋನು ಶೇಷಯ್ಯನ ಬರೆಹ, ಈ ಹೇಳಿಕೆಯನ್ನು ನಾವು ಎರಡು ರೀತಿಯಿಂದ ನೋಡಬೇಕಾಗುತ್ತದೆ. ಒಬ್ಬ ವ್ಯಕ್ತಿ ನಿರುದ್ಯೋಗದಲ್ಲಿ ಇದ್ದಾಗ ಅಂತಹ ಸಮಯವನ್ನು ಪ್ರತಿಮಾಡುವಂತಹ ಕಾರ್ಯಕ್ಕೆ ಸದುಪಯೋಗ ಪಡಿಸಿಕೊಳ್ಳುತ್ತಿದ್ದನೇ ಅಥವಾ ಈಗಿನ ಆಧುನಿಕ ಕಾಲದಲ್ಲಿ ಇರುವ ಹಾಗೆ ಆ ಕಾಲದಲ್ಲಿಯೂ ನಿರುದ್ಯೋಗದಂತಹ ಸ್ಥಿತಿ ನಿರ್ಮಾಣವಾಗಿದ್ದಿತೆ? ಎಂಬ ಅಂಶ ಗಮನಾರ್ಹವಾದುದು. ಹಸ್ತಪ್ರತಿ ಲಿಪಿಕಾರರು ಕವಿಕೃತಿಯನ್ನು ಪ್ರತಿ ಮಾಡುವುದರ ಮೂಲಕ ಕವಿಗಳನ್ನು, ಆ ಮೂಲಕ ಸಂಸ್ಕೃತಿಯನ್ನು ಬದುಕಿಸಿಕೊಟ್ಟಿದ್ದಾರೆ. ಕರ್ನಾಟಕ

ಕವಿಚರಿತೆಯ ಮಾದರಿಯಲ್ಲಿ ಇಂದು ನಾವು ಹಸ್ತಪ್ರತಿ ಲಿಪಿಕಾರರ ಚರಿತ್ರೆಯನ್ನು ಸಿದ್ಧಪಡಿಸಬೇಕಾಗಿದೆ.

ಹಸ್ತಪ್ರತಿ ಲಿಪೀಕರಣ ಕಾರ್ಯವು ಸ್ತ್ರೀಯರ ಶಿಕ್ಷಣದ ಹಿನ್ನಲೆಯಲ್ಲಿಯೂ ನಡೆದಿರುವ ಈ ವಿವರಗಳು ಹಸ್ತಪ್ರತಿಗಳ ಪುಷ್ಪಿಕೆಯಲ್ಲಿ ದೊರೆಯುತ್ತಿದ್ದು ಸಾಂಸ್ಕೃತಿಕ ದೃಷ್ಟಿಯಿಂದ ಮಹತ್ವವೆನಿಸಿದೆ. ಲಿಪೀಕರಣ ಕ್ರಿಯೆಯಲ್ಲಿ ಗಮನಿಸತಕ್ಕ ಸಂಗತಿ ಎಂದರೆ ಕೆಲವು ಸ್ತ್ರೀಯರುಗಳೇ ಲಿಪೀಕರಣ ಕಾರ್ಯದಲ್ಲಿ ಪಾಲ್ಗೊಂಡಿರುವುದು. ಸ್ತ್ರೀಯರು ಪ್ರತಿಮಾಡಿದ ಹಸ್ತಪ್ರತಿಗಳು ಆದಿ ಅಂತ್ಯದಲ್ಲಿನ ಅವರ ಪ್ರಶಸ್ತಿ ವಾಕ್ಯಗಳಿಂದ ಆ ಕಾಲದ ಸ್ತ್ರೀಯರ ಶಿಕ್ಷಣದ ಬಗೆಗೆ ಮಾಹಿತಿ ವ್ಯಕ್ತವಾಗುತ್ತದೆ. ಈ ವಿಷಯಕ್ಕೆ ಸಂಬಂಧಪಟ್ಟ ಹಾಗೆ ನನ್ನ ಗಮನಕ್ಕೆ ಬಂದ ಹಾಗೆ ಆಧುನಿಕ ಪೂರ್ವದಲ್ಲಿ ಶಾಂತಿಮತಿ ಕಂತಿ, ಪಾರ್ಶ್ವ ಮತಿ ಬಾಯೀಜಿ, ವರ್ಧಮಾನಕ್ಕ, ಸಾಂತಿಮತಿ ಅವ್ವ, ಶ್ರೀಮತಿ ಅಕ್ಕ, ಕಾಳವ್ವೆ(ಯಲ್ಲಣ್ಣನ ಪುತ್ರಿ) ಅನಂತಮತಿ ಕಂತಿಕೆ,ಚಂದ್ರಮತಿ ಅಕ್ಕಳಜಿ,ಪಾರಿಶ್ವ ಅಜ್ಜಿ, ಭೈರಾಜಿ, ಪುಟ್ಟನಂಜಮ್ಮ, ಸಿಂಗಮ್ಮ ಇತ್ಯಾದಿ ಸುಮಾರು ೧೫ ಜನ ಸ್ತ್ರೀ ಲಿಪಿಗಾರ್ತಿಯರು ಹಸ್ತಪ್ರತಿ ನಕಲು ಕಾರ್ಯದಲ್ಲಿ ಪಾಲ್ಗೊಂಡಿದ್ದಾರೆ. ಈ ವಿವರ ಸಹ ನಮ್ಮ ಕನ್ನಡ ಸಾಂಸ್ಕೃತಿಕ ಸಂದರ್ಭದ ಹಿನ್ನಲೆಯಲ್ಲಿ ಬಹಳ ಮಹತ್ತರವಾದುದು. ಇನ್ನೊಂದು ಗಮನಿಸ ಬೇಕಾದ ಅಂಶ ಎಂದರೆ ಇನ್ನೊಂದು ಬಗೆಯಲ್ಲಿ ಅಂದರೆ ಸ್ತ್ರೀಯರ ಶಿಕ್ಷಣದ ಹಿನ್ನೆಲೆಯಲ್ಲಿಯೂ ಪ್ರತಿಲಿಪಿಕರಣ ಕಾರ್ಯ ನಡೆದಿರುವುದು. 'ಅಮರೇಂದ್ರ ವಂದಿತ ಶ್ರೀ ಸುಕುಮಾರನ ಚಾರುಚರಿತದ ಪ್ರತಿಯನು ಜಿನಚಂದ್ರನು ತನ್ನ ಪುತ್ರೀತ್ರಯರನೋದಿಸಲೆಂದು ಬರೆದನು' ಎನ್ನುವ ಉಲ್ಲೇಖದಲ್ಲಿ ತಂದೆಯು ತನ್ನ ಹೆಣ್ಣು ಮಕ್ಕಳಿಗೆ ವಿದ್ಯೆಯನ್ನು ಕಲಿಸುವ ಸಲುವಾಗಿ ಪ್ರತಿಗಳು ನಕಲುಗೊಳ್ಳುತ್ತಿದ್ದುದು ಪ್ರಮುಖ ಅಂಶವಾಗಿದೆ. ಇದಕ್ಕಿಂತ ಮಹತ್ತರವಾದ ಉಲ್ಲೇಖವೆಂದರೆ, 'ಸಿಗ್ಗಾವಿಯ ಚನ್ನಗೌಡರ ಸೊಸೆ ಬೈರಾಜಿ ತಂಮ ಶ್ರೀ ಗುರುವಿನ ಕೃಪೆಯಿಂದ ಲಿಂಗಲೀಲಾವಿಲಾಸದ ಪುಸ್ತಕವನು ಪ್ರತಿಮಾಡಿ ಮಹಾ ಗಣಂಗಳಿಗೆ ಹಂಚಿದುದು.' ಆಗಿನ ಕಾಲಕ್ಕೆ ಬೇರೆಯವರು ಪ್ರತಿಮಾಡಿದ್ದನ್ನು ಅಭ್ಯಸಿಸುವುದೇ ಒಂದು ದೊಡ್ಡ ಸಾಹಸವಾಗಿರುವಾಗ ತಾನು ಲಿಪಿಕಾರ್ತಿಯಾಗಿ ಕೃತಿಯನ್ನು ಪ್ರತಿಮಾಡಿ ಮಹಾ ಗಣಂಗಳಿಗೆ ಹಂಚಿರುವುದು ಆಗಿನ ಕಾಲದ ಸಾಮಾಜಿಕ ಸಂದರ್ಭದಲ್ಲಿ ಗುರುತರವಾದುದು. ಆಯಾ ಕಾಲಾವಧಿಯ ಹಿನ್ನಲೆಯಲ್ಲಿ ಓದಿಸುವ ಗುರುಬಸವಣ್ಣ ದೇವರು ಹಾಗೂ ಯಲ್ಲಣ್ಣ ಇವರು ಅಂದು ಹೆಣ್ಣು ಸಂತತಿಗೆ ಲೇಖನ ವಿದ್ಯಾ ಪರಂಪರೆಯಲ್ಲಿ ಸ್ಥಾನ ಕಲ್ಪಿಸಿಕೊಟ್ಟಿದ್ದು ಪ್ರಗತಿಪರವಾದ ಸಂಗತಿ. ಆಚ್ಚರಿಯ ಸಂಗತಿ ಎಂದರೆ 'ಕೆಸ್ತೂರು ಉಪಾಧ್ಯಾಯರ ಮಗ ರಂಗಪ್ಪ ಬರೆದು ಕೊಟ್ಟಿದು ತಳಕಾಡು ನಾಯಿಕಸ್ಯಾನಿ ಕೆಂಪಿ ಮಗಳು ನಂಜಿಗೆ' ಎಂಬ ಹಸ್ತಪ್ರತಿಯ ಪುಷ್ಪಿಕೆಯಲ್ಲಿಯ ಉಲ್ಲೇಖವು 'ಗಣಿಕೆ ಕುಲದಲ್ಲಿ ಹುಟ್ಟಿದ ನಾಯಿಕಸ್ಯಾನಿ ಸ್ತ್ರೀಯೊಬ್ಬಳು ತನ್ನ ಮಗಳು ನಂಜಿಗೆ ಭಾಮಿನಿ ಷಟ್ಪದಿ ರೂಪದ ಐರಾವತ ಕೃತಿಯನ್ನು ಪ್ರತಿಮಾಡಿಸಿ ಕೊಟ್ಟಿರುವುದು. ಆ ಕಾಲದ ಒಂದು ಸಾಂಸ್ಕೃತಿಕ ದಾಖಲೆಯೇ ಸರಿ. ನಂಜಿಯಂತಹ ದೇವದಾಸಿ ಕುಲದ ಸ್ತ್ರೀಯು ಓದು ಬರೆಹದ ಅವಕಾಶ ಪಡೆದಿದ್ದು

ಮಹತ್ತರವಾದ ಸಂಗತಿಯಾಗಿದೆ. ಆಯಾ ಧರ್ಮದ ಚೌಕಟ್ಟಿನ ದೃಷ್ಟಿಯಿಂದ ಮಹಿಳೆಯರು ಜ್ಞಾನವನ್ನು ಅಭ್ಯಸಿಸಿದ್ದು ಅನ್ನುವ ಸಂಗತಿ ಮತ್ತು ಆ ಹಿನ್ನೆಲೆಯಲ್ಲಿ ಹಸ್ತಪ್ರತಿಗಳು ಲಿಪೀಕರಣಗೊಂಡು ಪ್ರಸರಣಗೊಂಡಿದ್ದು ಗುರುತರವಾದದ್ದು. ಆಯಾ ಕಾಲಘಟ್ಟದ ಹಿನ್ನಲೆಯಲ್ಲಿ ಹಸ್ತಪ್ರತಿಗಳಲ್ಲಿ ಸಿಗುವಂತಹ ಇಂಥ ಮಾಹಿತಿಯನ್ನು ನಾವು ಹೆಕ್ಕಿ ತೆಗೆದು ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡಬೇಕಾಗಿದೆ. ಆಧುನಿಕ ಪೂರ್ವಕಾದಲ್ಲಿ ಹಸ್ತಪ್ರತಿಗಳನ್ನು ಕ್ರಯಕ್ಕೆ ವಿಲೇವಾರಿ ಮಾಡುತ್ತಿದ್ದ ವಿವರಗಳು ಪುಷ್ಟಿಕೆಗಳಲ್ಲಿ ತಿಳಿದು ಬರುತ್ತವೆ.

ಶ್ರೀನೇಮಿಚರಿತ ಪುಸ್ತಕವಂನು ಸಮಾಪ್ತವಾಗಿ ಬರೆದಾತ ಚುಟರ ಶಿಮೆಯಂನ ಮುಂಡುಕೂರ ಸ್ತಳದ ಲಕ್ಷ್ಮುಮೈಯನವರ ಮಗ ರುದ್ರಪ್ಪನು ಬರದ ನೆಮಿಚರಿತೆ ಪುಸ್ತಕವಂನು ಮೊರಬಡಿಶಿಮೆ ಹಂಜಕ್ಕಿಯಲ್ಲುಯಿರುವ ಸುಳನಾಡ ಶಿಮೆಕಳುರು ಬಿರ್ಯೈಯಗೌಡರ ಮಗ ಜಟ್ಟೈಯಗೌಡರಿಗೆ ಆಯುರಾರೋಗ್ಯ ಐಶ್ವರ್ಯ ಪುತ್ರ ಕಳತ್ರ ಅಭಿವೃದ್ಧಿಯಾಗಲೆಂದು ಪರಿಸಿ ಕೊಟ್ಟ ನೇಮಿಚರಿತ ಪುಸ್ತಕಕ್ಕೆ ಶುಭಮಸ್ತು. ಅಣಲಯ್ಯಗೌಡರಿಗೆ ಕ್ರಯಕೊಟ್ಟು ಇದ್ದೇನೆ ಎಂಬ ವಿವರವು ಗಮನಾರ್ಹವಾಗಿದೆ. (ಹಸ್ತಪ್ರತಿ ಸೂಚಿ ಪು.೬೦).ಹಸ್ತಪ್ರತಿಗಳನ್ನು ಕ್ರಯಕ್ಕೆ ವಿಲೇವಾರಿ ಮಾಡುತ್ತಿದ್ದರು ಎಂಬುದನ್ನು ಸೂಚಿಸುತ್ತದೆ. ಪದ್ಮನಾಭ ಕವಿಯ ಜಿನದತ್ತರಾಯ ಚರಿತೆಯ ಹಸ್ತಪ್ರತಿಯಲ್ಲಿಯ,' ಜಿನದತ್ತರಾಯನ ಪುಸ್ತಕವ ಬರೆಸಿದವರು ಸುಳುನಾಡ ಮೆಲುಮಂಗಿನ ಭಹವರು ಮಾಯ್ಯನ ಮಗ ತಿಂಮಯ್ಯ (ಹಸ್ತಪ್ರತಿ ಸಂಖ್ಯೆ:೨೯೨, ಪು.೩೪).

ಸಿರ್ರಿವಂತೆ ವಳಗಣ ಕೆಳದಿ ಸೀಮೆ ಕುಗ್ಗುವೆ।ಪರಮ್ಮೈಯ್ಯನ। ತಿಂಮಪ್ಪೈಯ್ಯನವರಿಗೆ ಗಟ್ಟಿಕೆಳಗಿನ ಕುಂದಾಪುರ ತಾಲೂಕು ಪಡುಕೋಣೆ ಸೀಮೆ ಪರಮೆಶ್ವರೈಯನ ಮಗ ತಿಂಮ್ಮಯನು ಬರಕೊಟ ಭಾರತ ಪುಸ್ತಕಕ್ಕೆ ಆಚಂದ್ರಾರ್ಕಮಸ್ತು. ವಿಕ್ರುತಿ ಸಂವತ್ಸರದ ಆಶಾಡಾ ಬಹಿಲ್ಲು ಶ್ರಿಮತು ದೆವಪ್ಪಯನವರ್ರಿಗೆ ಕುಗುವೆ ಮರೆಯನುಕೂಲ ಪುಸ್ತಕವಂನೂ ಕೊಟ್ಟು ಅದಕೆ ಪಾದಗಾಣಿಕೆ ತಹ ಮಾಡಿದ್ದು ವಂದು ವರಾಹ೧-೦।ಅಕ್ಷರದಲು ವರಹಾವಂನು ತೆಗದು ಕ್ರಯಮೂಲಕ ಕೊಠೆನಾಗಿ ಬರಕೊಟ ಬರ ಆದಂತ್ತ ಪುಟ್ಟೈಯಕಂ ತಂಮ ರಾಮೈಯನ ಸ್ವಹಸ್ತ ಬರಹಾ। ಶಾಂತಪರ್ವ೧ಕ್ಕೆ ಸಂದಿ ೨೮॥ಪ ೧೮೯೦ ಕಲ್ಲದೇವಪ್ಪನ ಭಾರತದ ಶಾಂತಿಪರ್ವ ( ಶಾಂತಿಪರ್ವ, ಹಸ್ತಪ್ರತಿ ಸೂಚಿ, ಸಂಖ್ಯೆ.೨೧೨, ಪು.೧೪೯).

ಸಂಸ್ಕೃತಿಯ ಗ್ರಹಿಕೆಗಳ ಆಕರಗಳಾಗಿ ಹಸ್ತಪ್ರತಿಗಳ ಪುಷ್ಟಿಕೆಗಳು

ಹಸ್ತಪ್ರತಿಗಳನ್ನು ಕೇವಲ ಸಾಹಿತ್ಯ ಅಧ್ಯಯನದ ಪ್ರಾಚೀನ ಸಾಮಗ್ರಿಗಳಾಗಿ ನೋಡಿದರಷ್ಟೇ ಸಾಲದಾಗಿದೆ. ಗ್ರಂಥಸಂಪಾದನೆಗಷ್ಟೇ ಸೀಮಿತವಾಗದೆ ಸಾಂಸ್ಕೃತಿಕ ಅಧ್ಯಯನದ ಆಕರಗಳಾಗಿ ಹಸ್ತಪ್ರತಿಗಳ ಅಧ್ಯಯನವನ್ನು ವಿಸ್ತೃತಗೊಳಿಸಬೇಕಾಗಿದೆ. ಇವು ಸಂಸ್ಕೃತಿಯನ್ನು ದಾಖಲಿಸುವ ಪ್ರಮುಖ ಕೋಶಗಳಲ್ಲಿ ಒಂದಾಗಿವೆ. ಶಾಸನಗಳು, ಕಡತಗಳು, ಬಖೈರುಗಳ ಮಾದರಿಯಲ್ಲಿ ಹಸ್ತಪ್ರತಿ ಪುಷ್ಟಿಕೆಗಳು ಸಹ ಸಂಸ್ಕೃತಿಯನ್ನು ಪುನರ್ರಚಿಸುವ ಆಕರಗಳಾಗಿವೆ. ಹಸ್ತಪ್ರತಿಗಳಲ್ಲಿರುವ ಆದಿ, ಅಂತ್ಯದ ಹೇಳಿಕೆಗಳು

ಕೃತಿಯನ್ನು ಬರೆದವರ, ಬರೆಯಿಸಿದವರ ಚರಿತ್ರೆ ಮತ್ತು ಇತರೆ ವಿಷಯಗಳ ಬಗ್ಗೆ ಅಮೂಲ್ಯವಾದ ಮಾಹಿತಿಗಳನ್ನು ಒದಗಿಸುತ್ತವೆ. ಸ್ಥಳೀಯ ಸಂಸ್ಕೃತಿಯನ್ನು ತಿಳಿಯುವಲ್ಲಿ ಪುಷ್ಪಿಕೆಗಳು ಪ್ರಧಾನವಾಗಿರುವುದರಿಂದ ಮೂಲ ಆಕರ ಸಾಮಗ್ರಿಗಳಾಗಿ ಪರಿಗಣಿಸಬಹುದಾಗಿದೆ. ಹಸ್ತಪ್ರತಿಯಲ್ಲಿ ಉಕ್ತವಾದ ಸಾಮಾಜಿಕ ಅಂಶಗಳು ಆಗಿನ ಕಾಲದ ಸಮಾಜದ ಸ್ಥಿತಿಗೆ ಹಿಡಿದ ಕನ್ನಡಿಯೆನ್ನಬಹುದು. ಹಸ್ತಪ್ರತಿಗಳ ಸೃಷ್ಟಿ ಮತ್ತು ಪ್ರತಿಮಾಡುವ ಕಾರ್ಯವು ಬಸದಿ ಹಾಗೂ ಮಠಗಳಲ್ಲಿ ನಿರಂತರವಾಗಿ ಮತ್ತು ಅತ್ಯಂತ ವ್ಯವಸ್ಥಿತವಾಗಿ ನಡೆದು ಬಂದಿರುವ ಬಗ್ಗೆ ಹಸ್ತಪ್ರತಿ ಪುಷ್ಪಿಕೆಗಳಿಂದ ತಿಳಿದು ಬರುತ್ತದೆ. ಆಗಿನ ಜನಸಮುದಾಯ ಶ್ರದ್ಧೆಯಿಂದ ಅವುಗಳನ್ನು ಪೋಷಿಸಿ ಪುರಸ್ಕರಿಸುತ್ತಿದ್ದ ನಿದರ್ಶನಗಳು ಪುಷ್ಪಿಕೆಗಳಲ್ಲಿ ದೊರೆಯುತ್ತವೆ. ರಾಜರು, ರಾಜವಂಶಸ್ಥರು, ಅಧಿಕಾರಿಗಳು, ಧರ್ಮಾಧಿಕಾರಿಗಳು, ಗ್ರಾಮ ಮುಖಂಡರುಗಳು ಹಸ್ತಪ್ರತಿಗಳ ಪಾಲನೆ, ಪೋಷಣೆ ಮಾಡಿ ಹಸ್ತಪ್ರತಿಗಳ ನಿರ್ಮಾಣಕ್ಕೆ ಕಾರಣ ಕರ್ತರಾಗಿದ್ದಾರೆ. ಹಸ್ತಪ್ರತಿಗಳ ಸೃಷ್ಟಿಯ ಹಿಂದೆ ಪೋಷಕ ಸಮುದಾಯ ಮಿಡಿದಿರುವುದನ್ನು ಗುರುತಿಸ ಬಹುದಾಗಿದೆ. ಪೋಷಕರು ಹಸ್ತಪ್ರತಿಗಳನ್ನು, ದೈವಭಕ್ತಿ,ಸಮಯನಿಷ್ಠೆ, ಜ್ಞಾನಾರ್ಜನೆ, ಅನಿಷ್ಟ ನಿವಾರಣೆ,ಆಯುರಾರೋಗ್ಯ ಭಾಗ್ಯ, ಗಂಡು ಸಂತಾನ, ಗುರುಭಕ್ತಿ ಮತ್ತು ಪುಣ್ಯಸಂಪಾದನೆಗಾಗಿಯೂ ಬರೆಸಿದ್ದಾರೆ. ಹಸ್ತಪ್ರತಿಗಳು ಒಂದು ರೀತಿಯಲ್ಲಿ ಆಧುನಿಕ ಪೂರ್ವ ಕರ್ನಾಟಕದ ಜನಜೀವನ, ಬದುಕಿನ ರೀತಿ ನೀತಿಯನ್ನು ಅರಿಯಲು ಕಾರಣೀಭೂತವಾಗಿವೆ. ನೂರಾರು ಹಸ್ತಪ್ರತಿಗಳ ಪುಷ್ಪಿಕೆಗಳಲ್ಲಿ ಲಿಪಿಕಾರರ ಅನುಭವ ಹಾಗೂ ಭಾಷಾ ಸಾಮರ್ಥ್ಯವನ್ನು ಕಾಣಬಹುದು. ಲಿಪಿಕಾರರು ಬದುಕಿ ಬಾಳುತ್ತಿದ್ದ ಸಂಸ್ಕೃತಿಯ ಸ್ವರೂಪವನ್ನು ಗುರುತಿಸಬಹುದು. ಪ್ರತಿ ಕಾರ್ಯದಲ್ಲಿ ತೊಡಗಿದ್ದ ಲಿಪಿಕಾರರನ್ನು ಆಗಿ ಕಾಲದ ಜನಸಮುದಾಯ ಪ್ರೀತಿ ವಿಶ್ವಾಸ ಹಾಗೂ ಗೌರವದಿಂದ ಕಾಣುತ್ತಿತ್ತು. ಹಸ್ತಪ್ರತಿ ಲಿಪಿಕಾರರು ಪುಷ್ಪಿಕೆಗಳಲ್ಲಿ ತಮ್ಮ ಚರಿತ್ರೆ ಹೇಳುವ ನೆಪದಲ್ಲಿ ನಾಡಿನ ಸಾಂಸ್ಕೃತಿಕ ಚರಿತ್ರೆಗೆ ಉಪಯುಕ್ತವಾದ ಸಂಗತಿಗಳನ್ನು ನಿರೂಪಿಸಿದ್ದಾರೆ. ಸಂಸ್ಕೃತಿಯ ಸಂವಹನಕಾರರಾದ ಹಸ್ತಪ್ರತಿ ಲಿಪಿಕಾರರ ಚರಿತ್ರೆಗೆ ಸಂಬಂಧಿಸಿದಂತೆ ಲಿಪಿಕಾರರ ಹೆಸರು, ವಾಸಿಸುತ್ತಿದ್ದ ಗ್ರಾಮ, ತಂದೆ, ಗುರು, ಇಷ್ಟ ದೈವ, ವಂಶ, ಗೋತ್ರ ಇತ್ಯಾದಿ ವಿವರಗಳು ದೊರೆಯುತ್ತವೆ. ಲಿಪಿಕಾರರು ವಾಸಿಸುತ್ತಿದ್ದ ಗ್ರಾಮ ಅಥವಾ ಪ್ರತಿಮಾಡಿದ ಸ್ಥಳಗಳು ಹಸ್ತಪ್ರತಿಗಳ ಪ್ರಾದೇಶಿಕತೆಯನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತವೆ. ಪ್ರಾದೇಶಿಕತೆ ಪಾಠ ಪರಂಪರೆಯ ದೃಷ್ಟಿಯಿಂದ ಪ್ರಮುಖ. ನಿದರ್ಶನಕ್ಕೆ:

೧.ಆದಿತ್ಯ ವಾರದಲು ಶ್ರೀಮತ್ ಸಜ್ಜನ ಶುದ್ಧ ಶಿವಾಚಾರ ಸಂಪಂನರಾದ ದೇವ ಪೃಥ್ವಿ ಮಹಾಮಹತ್ತನೊಳಗಾದ ಮಳೆಯಬಗೆಯ ಮಳಲಿಯ ಮಟದ ಧರ್ಮಸಿಂಹಾಸನರೂಢರಪ್ಪ ಸೋಮೇಶ್ವರ ದೇವರು ತತ್ ಶಿಷ್ಯೋತ್ತಮರಾದ ವಲ್ಲಕಿಯ ವೀರಂಟೊಡೆಯರ ದೇವರ ಕರಸಂಜಾತ ವೀರಪ್ಪನ ಮಗ ಪುರಾಣದ ಗೂಳಪ್ಪನು ಬಂಕಾಪುರದ ಜವಳಿಯ ಪೇಟೆಯೊಳಗೆ ಬರದು ಮುಗಿಸಿದ ಆರಾಧ್ಯ ಚಾರಿತ್ರಕ್ಕೆ ಶುಭಮಸ್ತು.

೨. ನಾರುವೆ ಶಾನಭಾಗ ಬಸವಂಣನವರ ಪಾದದ ಕೃಪೆಯಿಂದ ಲಿಂಗಪ್ಪನು ಆದಿತ್ಯವಾರ ಪೇಟೆಯಲ್ಲಿದ್ದ ಪರುವತಭದ್ರ ಸೆಟ್ಟಿಯ ಕೈಯ್ಯ ಬರಸಿದ ಪುಸ್ತಕ

೩.ಜಂಬುಕಂಡಿಯ ಬದಿಯ ತೇರದಳವೆಂಬ ಗಾಳಿಪೇಟೆಯಲ್ಲಿ ವಿರಕ್ತಮಠದಲ್ಲಿ ಬರೆದ ಪುಸ್ತಕವು

೪ಚಿನ್ನಮಪುರದ ಬಸವಪ್ಪಯ್ಯನವರಿಗೆ ಪ್ರಸಾದಿಮಹದೇವಯ್ಯನ ಶೂನ್ಯಸಂಪಾದನೆಯನ್ನು ಬರೆದುಕೊಟ್ಟ ಗುಮ್ಮಳಾಪುರದ ಬರೆಹದ ಬಸವಣ್ಣೊಡೆಯ

೫. ಅಮಿಗಿದೇವಯ್ಯನವರ ಚರಿತ್ರೆ ಪುಸ್ತಕವನ್ನು ದೇವರಾಜಶ್ರೀ ಹಾಗಲವಾಡಿ ಸೀಮೆ ಕೋಟೇ ಸ್ಥಳದ ಕುರುವಿನ ಮುದ್ಧಪುರದ ಲಿಂಗಣ್ಣನ ಮಗ ಭೈರಣ್ಣನಿಗೆ ವೋದಿಕೊಳ್ಳುವುದಕ್ಕೆ ಬರದು ಕೊಟ್ಟ ಪುಸ್ತಕಕ್ಕೆ ಶುಭಮಸ್ತು. ಸಿದ್ಧರಾಮ್ಮೈನವರ ಸಾಂಗತ್ಯ, ಅಮಿಗಿ ದೇವೈಯ್ಯನವರ ಕಾವ್ಯ ಸಮಾಪ್ತ. ಹಸ್ತಪ್ರತಿ ಪುಷ್ಪಿಕೆಗಳಲ್ಲಿಯ ಸ್ಥಳಗಳ ಕುರಿತ ಉಲ್ಲೇಖಗಳು ಗ್ರಾಮನಾಮಗಳ ಅಧ್ಯಯನಕ್ಕೂ ಸಹಕಾರಿಯಾಗುತ್ತವೆ. ಕನ್ನಡ ನಾಡಿನ ಅಸಂಖ್ಯಾತ ವೀರಶೈವ, ಜೈನ, ಬ್ರಾಹ್ಮಣ ಮಠಗಳ ಹೆಸರು. ಸಂಖ್ಯೆ, ಮಠಾಧೀಶರ ಹೆಸರು ಕಾಲಾವಧಿ, ಶಿಷ್ಯ ಪರಂಪರೆ ಇತ್ಯಾದಿ ಉಪಯುಕ್ತ ಮಾಹಿತಿಗಳು ಪುಷ್ಪಿಕೆಗಳಲ್ಲಿ ದೊರೆಯುತ್ತಿದ್ದು ನಾಡಿನ ಮಠಗಳ ಚರಿತ್ರೆ ಮತ್ತು ಮಠಾಧೀಶರ ಕಾಲನಿರ್ಣಯದಲ್ಲಿ ಪ್ರಾಮುಖ್ಯತೆ ಪಡೆದಿವೆ. ವೀರಶೈವಸಾಹಿತ್ಯವನ್ನು ಉಳಿಸಿಕೊಂಡು ಬರುವಲ್ಲಿ ಮಠಗಳು ವಹಿಸಿದ ಪಾತ್ರವನ್ನು ಪುಷ್ಪಿಕೆಗಳ ಮೂಲಕ ಗುರುತಿಸ ಬಹುದಾಗಿದೆ. ಎಸ್. ಶಿವಣ್ಣನವರು ಸಂಪಾದಿಸಿರುವ ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು ಕೃತಿಯಲ್ಲಿಯೇ ಸುಮಾರು ೧೮೦ ಮಠಗಳ ಪ್ರಸ್ತಾಪವಿದೆ. ಹಸ್ತಪ್ರತಿಗಳು ಉಲ್ಲೇಖಿಸಿರುವ ಕೆಲವು ಮಠಗಳು ಇಂದು ಅಸ್ತಿತ್ವದಲ್ಲಿ ಇರದಿದ್ದರೂ ಅಂತಹ ಅಳಿದು ಹೋದ ಮಠಗಳನ್ನು ಹಸ್ತಪ್ರತಿಗಳಲ್ಲಿಯ ಉಲ್ಲೇಖದ ಮೂಲಕ ಗುರುತಿಸ ಬಹುದಾಗಿದೆ.

ಭೂಮಿಯಲ್ಲಿ ತೋಟವನ್ನು ಬೆಳಸಿ ಅನುಭವಿಸುವ ಬಗೆಗಿನ ಷರತ್ತುಗಳನ್ನು ಉಲ್ಲೇಖಿಸುವ ಸಾತ್ರೆಯ ಪಟ್ಟಿಯ ವಿವರ ಎಂಬ ಹಸ್ತಪ್ರತಿಯಲ್ಲಿ, ( ಕ.ಹ.ವ.ಸೂ. ಸಂ.೯ ಕ್ರಸಂ.೧೦೩) ಬರುವ ಶ್ರೀ ವೀರಪ್ರದಾಪ ವೀರವೆಂಕಟಪತ್ತಿರಾಯರವರು ಪೃತ್ವಿರಾಜ್ಯಗೈವಲ್ಲಿ ಆಮತು ನರಸರಾಜ ಅಯ್ಯನವರ ನಿರೂಪದಿಂದಿಂದಲ್ಲು ದಳವಾಯಿ ನಂಜರಾಜಯ್ಯನವರು ಶಂಕರ ಭಟ್ಟರಿಗೆ ಕೊಟ್ಟ ಸಾತ್ರೆಯ ಪಟ್ಟಿಲು ಕ್ರಮವೆಂತೆಂದಡೆ ಎಂಬ ಆದಿಯ ಪದ್ಯ ಹಾಗೂ ಅಂತ್ಯದಲ್ಲಿಯ ಆ ತೋಟದ ಫಲಕ್ಕೆ ಬಂದಾಗ ಮೊದಲೊರುಷ ಮಾನ್ಯ ಯರಡನೆ ವರುಷ ಮುಕ್ಕುಪ್ಪೆ ಮೂಱನೆ ವರುಷ ವಾರ ನಾಲ್ಕನೆ ವರುಷಕ್ಕೆ ಯೆಣಿಸಿಕೊಂಬಲ್ಲಿ ದಶವಿಧ ಮರನ ಕಳಿವವಿವರ ಕೋಡಿ ಕಲ್ಲುಳಿ ಕತೆವಾಲ ಬಾಪಿತಡಿ ಬಿಸಿಲ ಹೊಡೆ ಬಿಸಮರ ತಾಟಿ ಪೋಟಿ ತೊಂನ ತುರುಗ ಕಡಲ ಗರಿಕೆ ಯಿಂತೀ ದಶವಿಧದ ಮರನ ಕಳಿದು ದ್ರಷ್ಟಮರ ಸಾವಿರಕ್ಕೆ ಅಡಕೈಕ್ಷವನ್ನು ಸುಲಿವಾಗ ದಶವಿಧದ ಅಡಕೆಯ ಕಳಿವ ವಿವರ ಕಾಟ ಪೋಟಿ ಗೋಟು ಗಂಟಿಕೆ ಚಿಲ್ಲು ಹೊಡೆ ಹುಣುಬು ತೊಂನ್ನ ಕಡಲ ಗರಿಕೆ ಯಿಂತೀ ದಶವಿಧದ ಅಡಕೆಯಂ ಎಂಬ ಪಿವರದಲ್ಲಿ ದಶವಿಧ ಅಡಕೆಯ ವಿವರ ಅಡಿಕೆ ತೋಟವನ್ನು ಬೆಳಸಿ

ಅನುಭವಿಸುವ ಷರತ್ತುಗಳ ವಿವರವನ್ನು ಆರ್ಥಿಕ ಹಾಗೂ ವ್ಯವಹಾರಿಕ ಒಪ್ಪಂದದ ಸ್ಥಿತಿಗತಿಯ ಹಿನ್ನೆಲೆಯಲ್ಲಿ ಗ್ರಹಿಸ ಬಹುದಾಗಿದೆ

ಇಂದು ಉಪೇಕ್ಷಿತ ಹಸ್ತಪ್ರತಿಗಳು ಎಂದು ಹಣೆಪಟ್ಟಿ ಅಂಟಿಸಿಕೊಂಡಿರುವ ಹಸ್ತಪ್ರತಿಗಳಲ್ಲಿರುವ ಮಾಹಿತಿಯನ್ನು ನಾವು ಪ್ರಾಯೋಗಿಕವಾಗಿ ಆಚರಣೆಗೆ ತರಬೇಕಾಗಿದೆ. ಇಂದು ಭೂಗರ್ಭ ಶಾಸ್ತ್ರಜ್ಞರು (ಜಿಯೊಲಾಜಿಸ್ಟ್) ನೀರನ್ನು ನೋಡುವ ಪದ್ಧತಿಯಂತಹ ವಿವರವು ಹತ್ತನೇ ಶತಮಾನದ ಲೋಕೋಪಕಾರ ಕೃತಿಯಲ್ಲಿದೆ. ಆ ಕೃತಿಯಲ್ಲಿರುವ ಮಾಹಿತಿಯನ್ನು ಪರೀಕ್ಷಿಸಿ ಫಲಿತಾಂಶ ತಿಳಿದುಕೊಳ್ಳಬೇಕಾಗಿದೆ. ವೈದ್ಯಶಾಸ್ತ್ರ ಕೃತಿಗಳಲ್ಲಿ ಚಿಕಿತ್ಸೆಗೆ ಸಂಬಂಧಿಸಿದಂತೆ ಮಾಹಿತಿಗಳು ಲಭ್ಯ ಇವೆ. ಅದೇ ರೀತಿ ಗಜಶಾಸ್ತ್ರ, ಪಾಕಶಾಸ್ತ್ರ, ಹಯಶಾಸ್ತ್ರ ಇತ್ಯಾದಿ ವಿವರಗಳು ಉಪೇಕ್ಷಿತ ಹಸ್ತಪ್ರತಿಗಳಲ್ಲಿ ಲಭ್ಯ ಇದೆ. ಪಂಚಮಹಾಭೂತಗಳ ರಹಸ್ಯವನ್ನು ಬೇಧಿಸಿ, ನಕ್ಷತ್ರ,ಗ್ರಹ,ಸೂರ್ಯ, ಭೂಮಿ, ಚಂದ್ರಾದಿಗಳ ಚಲನವಲನಗಳನ್ನು ಗುರುತಿಸಿ ಮಳೆಬೆಳೆಗಳ ಶುಭಾಶುಭಗಳನ್ನು ತಿಳಿಸುವಂತಹ ರಟ್ಟಮತದಂತಹ ಶಾಸ್ತ್ರ ಕೃತಿಯಲ್ಲಿಯ ವಿವರಗಳನ್ನು ಪರೀಕ್ಷಿಸಿ ಜನತೆಯ ಕಲ್ಯಾಣಕ್ಕೆ ಅನ್ವಯಿಸಿಕೊಳ್ಳ ಬೇಕಾಗಿದೆ. ಉಪೇಕ್ಷೆಗೆ ಒಳಗಾಗಿರುವ ಇಂತಹ ಶಾಸ್ತ್ರಕೃತಿಗಳು ಕನ್ನಡನಾಡಿನ ನೆಲ-ಜಲ,ಜನಮನಗಳ ಪ್ರತಿನಿಧಿಯಾಗಿ ನಿಲ್ಲುವಂಥಹವುಗಳು. ಮಳೆ ಬೆಳೆ, ಸೂರ್ಯ-ಚಂದ್ರ, ಫಲ-ಶಕುನ, ಜ್ಯೋತಿಷ್ಯ, ಫಲ-ಪುಷ್ಪ, ಗ್ರಹಣ ಇತ್ಯಾದಿ ಪ್ರಾಕೃತಿಕ ಸಸ್ಯಗಳು, ಮನುಷ್ಯ ಪ್ರಾಣಿ-ಪಕ್ಷಿಗಳ ಬದುಕಿನ ಕ್ರಮವನ್ನು ಆಗುಹೋಗುಗಳನ್ನು ವ್ಯಾಖ್ಯಾನಿಸುವ ಮತ್ತು ಬದುಕಿನ ಕ್ರಮವನ್ನು ಆ ಸಂಕಷ್ಟಗಳಿಗೆ ಹೊಂದಿಕೊಳ್ಳುವ ನೆಲೆಗಳನ್ನು ತಿಳಿಸಿ ಕೊಡುವ ಉಪೇಕ್ಷೆಗೆ ಒಳಗಾಗಿರುವ ರಟ್ಟಕವಿಯ ರಟ್ಟಮತ ಕೃತಿಯು ೧೨ ಅಧ್ಯಾಯಗಳನ್ನು ಒಳಗೊಂಡಿದ್ದು ಮದ್ರಾಸ್ ವಿ.ವಿ.ಯಿಂದ ಎಚ್.ಶೇಷಯ್ಯಂಗಾರ್ ಅವರು ಸಂಪಾದಿಸಿದ್ದಾರೆ. ಈ ಕೃತಿಯ ಎಂಟನೆಯ ಅಧ್ಯಾಯದಲ್ಲಿಯ ಮಳೆಯ ನೀರು ಹೇಗೆ ಬೀಳಬೇಕು ಎಂಬ ಕ್ರಮವನ್ನು ತಿಳಿಸುತ್ತ, ಭೂಮಿಯಲ್ಲಿ ಭಾವಿಯನ್ನು ತೋಡಿದರೆ ನೀರು ಬರುವುದು, ಬರದಿರುವುದು, ಒಂದು ವೇಳೆ ನೀರು ಬರುವಂತೆ ಇದ್ದರೆ ಅದರ ಪ್ರಮಾಣವನ್ನು ಹೇಳುವುದರೊಂದಿಗೆ, ಹತ್ತುಮರಗಳ ವಿಸ್ಮಯ, ಹುಲ್ಲು ಹಸಲೆ ಇವುಗಳ ವಿಶೇಷದಿಂದ ಬಾವಿಯ ನೀರು ಅರ್ಧಾಳುದ್ದ, ಮೊದಲ ಅಯ್ದಾಳುದ್ದ ಪ್ರಮಾಣದಲ್ಲಿ ನೀರ ಧಾರೆ ಹುಟ್ಟುವ ಕ್ರಮವನ್ನು ಹೇಳಿ, ಬಾವಿ ತೋಡುವಾಗ ಸಿಕ್ಕುವ ಕಲ್ಲುಬಂಡೆಗಳನ್ನು ಮಿದುಮಾಡಿ ಒಡೆದು ತೆಗೆಯುವ ಕ್ರಮ, ಕಲ್ಲು ಒಡೆಯುವ ಉಳಿಹಾಕಿ ಇವುಗಳ ಬಾಯನ್ನು ವಜ್ರದಂತೆ ಗಟ್ಟಿಮಾಡಲು ನೀರುಣಿಸುವ ಕ್ರಮಗಳನ್ನು ಹೇಳಿ, ತೋಡಿದ ಬಾವಿಯನ್ನು ಉತ್ತಮ ರೀತಿಯಲ್ಲಿ ಅಂದರೆ ನೀರು ಕೆಡದಂತೆ ಇರಲು ಮಾಡ ಬೇಕಾದ ಕ್ರಮ, ಬಾವಿಯನ್ನು ತೋಡುವ ದಿಕ್ಕಿನ ಫಲ, ಬಾವಿಯನ್ನು ತೋಡುವಾಗ ಮತ್ತು ಮೊದಲು ನೀರಿನ ಧಾರೆ ತೋರಿದಾಗ ಮಾಡಬೇಕಾದ ಪೂಜಾ ಕ್ರಮಗಳನ್ನು ವಿವರಿಸಿದೆ. ಇಂತಹ ವಿಷಯಗಳನ್ನು ಪ್ರಾಯೋಗಿಕವಾಗಿ ಪರಿಶೀಲಿಸಬೇಕಾಗಿದೆ. ಉಪೇಕ್ಷಿತ ಹಸ್ತಪ್ರತಿಗಳಲ್ಲಿಯ ವಿವರಗಳನ್ನು ಒಪ್ಪಿಕೊಳ್ಳುವುದು ಬಿಡುವುದು ಬೇರೆ ಪ್ರಶ್ನೆ. ಅವರು ಏನ್ಹೇಳಿದ್ದಾರೆ ಅದನ್ನು ಮೊದಲು ಆಚರಣೆಗೆ ತರಲು ಪ್ರಯತ್ನಿಸಬೇಕು. ಅದು ದೇಸಿ ಪದ್ಧತಿಯೇ ಇರಬಹುದು. ಅದನ್ನು ಪರೀಕ್ಷಾರ್ಥವಾಗಿಯಾದರೂ

ಅನುಸರಿಸಬೇಕಾಗಿದೆ. ಆ ಹಿನ್ನಲೆಯಲ್ಲಿ ನಾವು ಉಪೇಕ್ಷಿತ ಹಸ್ತಪ್ರತಿಗಳಲ್ಲಿರುವ ಮಾಹಿತಿ ಸಂಪತ್ತನ್ನು ಒಂದು ರೀತಿ ಜನತೆಯ ಕಲ್ಯಾಣದ ಹಿನ್ನಲೆಯಲ್ಲಿ ಬಳಸಿಕೊಳ್ಳುವತ್ತ ಗಮನಹರಿಸಬೇಕಾಗಿದೆ.

ಇಮ್ಮಡಿ ಬಸಪ್ಪನಾಯಕ ವಿರಚಿತ ಸಾಂಸ್ಕೃತಿಕ ವಿಶ್ವಕೋಶ ಎಂದೇ ಪರಿಗಣಿತವಾಗಿರುವ ಶಿವತತ್ವರತ್ನಾಕರದಲ್ಲಿ , ಮಲೆನಾಡಿನಲ್ಲಿ ನೀರಿನ ಕೊರತೆ ಇಲ್ಲದಿದ್ದ ಕಾಲದಲ್ಲಿಯೂ ತನ್ನ ಪರಿಸರ,ಪರಂಪರೆ, ಅನುಭವಗಳ ಗಣಿಯಿಂದ ಮೋಡದ ಉತ್ಪತ್ತಿ, ಮಳೆತರುವ– ಮಳೆತರದ ಮೋಡಗಳನ್ನು ಗುರುತಿಸುವ ಬಗೆಗೆ, ಮೋಡಗಳ ಲಕ್ಷಣಗಳು, ಗಾಳಿ ಬೀಸುವಿಕೆಯಿಂದ ಉಂಟಾಗುವ ಪರಿಣಾಮಗಳು, ಮಳೆ ಮುನ್ಸೂಚನೆ ಇತ್ಯಾದಿಗಳ ಬಗೆಗೆ, ಅವುಗಳು ಮಳೆ ಸುರಿಸುವ ಕಾಲವನ್ನು ಮೇಘಗರ್ಭ ವರ್ಣನೆಯಿಂದ ಪ್ರಾರಂಭಿಸಿ, ಭರತದ ನದಿನದಾದಿಗಳು, ವಿವಿಧ ತೀರ್ಥಗಳು, ಜಲದುರ್ಗ, ಕೊಳ , ತಟಾಕ ನಿರ್ಮಾಣ ಸ್ನಾನಭೋಗ ವರ್ಣನೆ, ಊಟದಲ್ಲಿ ಕುಡಿವ ನೀರಿನ ಮಹತ್ವ, ತಯಾರಿಸುವ ವಿಧಾನ, ಸಂಗ್ರಹಿಸುವ ಮುಂತಾದ ಜಲಶಾಸ್ತ್ರೀಯ ಮಾಹಿತಿಗಳ ರೀತಿಗಳನ್ನು ಸಮಕಾಲೀನ ಪ್ರಜ್ಞೆಯೊಂದಿಗೆ ಹೋಲಿಸಿ ಸಂಗ್ರಹಿಸಿ ಕೊಡಲಾಗಿದೆ. ಈ ಅಂಶಗಳನ್ನು ಆಧುನಿಕ ಕಾಲಕ್ಕೆ ಅನ್ವಯವಾಗುವಂತೆ ವೈಜ್ಞಾನಿಕ ದೃಷ್ಟಿಕೋನಗಳನ್ನು ಅಳವಡಿಸಿ ಅವುಗಳ ಉಪಯುಕ್ತತೆಯನ್ನು ಬಳಸಿಕೊಳ್ಳುವತ್ತ ಗಮನಹರಿಸ ಬೇಕಾಗಿದೆ. ಭೂಮಿಯ ಜೀವಶಕ್ತಿಯಾಗಿರುವ ಜಲಸಂತತಿಯ ವೈಜ್ಞಾನಿಕ ನೋಟದ ಪ್ರತೀಕವಾಗಿರುವ ಶಿವತತ್ವರತ್ನಾಕರದ ಈ ಜಲಸಂಗತಿಗಳ ಎಲ್ಲಾ ಮಾಹಿತಿಗಳನ್ನು ಸರಿ ಎಂದು ಸ್ವೀಕರಿಸಲಾಗದಿದ್ದರೂ ಜನತೆಯ ಕಲ್ಯಾಣಕ್ಕೆ ಅನ್ವಯವಾಗುವ ಈ ಸಂಗತಿಗಳನ್ನು ವೈಜ್ಞಾನಿಕ ನೆಲೆಗಟ್ಟಿನಲ್ಲಿ ಪ್ರಾಯೋಗಿಕವಾಗಿ ಪರಿಶೀಲಿಸಿ ಸ್ವೀಕರಿಸ ಬಹುದಾಗಿದೆ.

ಅದೇರೀತಿ ಯಕ್ಷಗಾನ ಪ್ರಕಾರದಲ್ಲಿ ರಚಿತವಾಗಿರುವ ನುಂಕಮಲೆ ಸಿದ್ಧೇಶ್ವರ ಪುರಾಣ ಅಪ್ರಕಟಿತ ಹಸ್ತಪ್ರತಿಯು ಮೇಲ್ನೋಟಕ್ಕೆ ಪುರಾಣಕಾವ್ಯವೆನಿಸಿದ್ದರೂ ಒಂದು ರೀತಿಯಲ್ಲಿ ಸ್ಥಳನಾಮಚರಿತ್ರೆಯೂ ಆಗಿದೆ. ಸ್ಥಳೀಯ ಸಾಂಸ್ಕೃತಿಕ ಚಹರೆಗಳನ್ನು, ನಾಡಿನ ಭೌಗೋಳಿಕ ಸ್ವರೂಪಗಳನ್ನು ತಿಳಿದುಕೊಳ್ಳಲು ಸಹಾಯಕವಾಗಿವೆ. ಗುಡ್ಡ,ಬೆಟ್ಟ,ಹಳ್ಳ,ಕೊಳ್ಳ, ಜೋಗಿಬಾವಿ ಮುಂತಾದ ಒಂದೊಂದು ಪ್ರದೇಶದ ಪೂರ್ಣವಿವರಗಳು ಹಾಗೂ ನುಂಕೆಮಲೆ,ನೆಲಮಲೆ,ಯರಮಲೆ ಮುಂತಾದ ಮುಂತಾದ ಬೆಟ್ಟಗಳ ವಿವರಗಳು ದೊರೆಯುತ್ತವೆ. ಇಂದು ಚಿತ್ರದುರ್ಗ ಜಿಲ್ಲೆಯ ಪರಿಸರದಲ್ಲಿ ಇಂದಿಗೂ ಆಚರಣೆಯಲ್ಲಿರುವ ಸಿದ್ಧಪ್ಪನ ಅರ್ಚನೆ, ತುಪ್ಪದಮ್ಮನ ಸಿಡಿ, ತುಪ್ಪದೋಕುಳಿ, ಭೈರವನಿಗೆ ಹಣ್ಣು ಕಾಯಿ ಪಲ್ಲಕ್ಕಿ ಉತ್ಸವ ಮುಂತಾದ ವಿವರಗಳು ಈ ಅಪ್ರಕಟಿತ ಹಸ್ತಪ್ರತಿಯಲ್ಲಿ ದೊರೆಯುತ್ತಿದ್ದು ಪ್ರಾಚೀನ ಕಾಲದ ಅನೇಕ ಧಾರ್ಮಿಕ ಆಚರಣೆ, ನಂಬಿಕೆಗಳ ಅಧ್ಯಯನವನ್ನು ಮಾಡಲು ನೆರವನ್ನು ನೀಡುತ್ತವೆ. ಕುಮಾರವ್ಯಾಸನ ವಿರಾಟಪರ್ವವನ್ನು ಮಳೆಗಾಗಿ ಪಠಿಸುವ ಸಾಂಸ್ಕೃತಿಕ ಜಗತ್ತು ಪಠ್ಯದ ಶುದ್ಧ-ಅಶುದ್ಧ ಎನ್ನುವ ಲಿಖಿತ ಸಂಸ್ಕಾರದಗೊಡವೆಗೆ ಹೋಗದೆ ಮಳೆಯ ಆಶಯದ

ದೃಷ್ಟಿಯಿಂದ ಅದನ್ನು ಓದುವ- ಕೇಳುವ ಅಂದರೆ ಕಥಾಂತರಿಸುತ್ತ ಹೋಗುತ್ತದೆ. ಈ ಪ್ರಕ್ರಿಯೆಗೆ ಆ ಕ್ಷಣದ ಫಲಾಪೇಕ್ಷೆ ಮುಖ್ಯವಾಗುತ್ತದೆ. ಇಂಥ ನೂರಾರು ಪಠ್ಯದ ಹಸ್ತಪ್ರತಿಗಳನ್ನು ಆಧುನಿಕ ಪೂರ್ವದಲ್ಲಿ ಪಠಿಸುತ್ತಿದ್ದರು. ಇಂದು ನಾಡಿನ ಸಂಸ್ಕೃತಿಯ ಅಧ್ಯಯನ ತನ್ನ ಪರಿಪುರ್ಣತೆಯನ್ನು ಪಡೆಯ ಬೇಕಾದರೆ ಶಿಷ್ಟ ಆಕರಗಳ ಜೊತೆಗೆ ಆಯಾ ಸ್ಥಳಗಳ ಜನಾಂಗ, ಸಮುದಾಯ, ಸಂಸ್ಕೃತಿಗಳೊಂದಿಗೆ ಬೆರತು ಅವರ ಆಚರಣೆ,ನಂಬಿಕೆ, ಸಂಪ್ರದಾಯಗಳನ್ನು ಯಾವುದೇ ಜಾತಿ ಪಂಗಡ ಹಾಗೂ ಸಾಮಾಜಿಕ ಸ್ತರಗಳ ಪೂರ್ವಾಗ್ರಹ ಪೀಡಿತರಾಗದಂತೆ ಕಟ್ಟಿಕೊಡುವ ಸ್ಥಳೀಯ ಚರಿತ್ರೆಗಳ ಅಗತ್ಯತೆ ತುರ್ತಾಗಿ ಬೇಕಾಗಿದೆ. ಒಂದು ಪ್ರದೇಶದ ಧಾರ್ಮಿಕ ಚಾರಿತ್ರಿಕ ಹಾಗೂ ಭೌಗೋಳಿಕ ತಿಳಿವಳಿಕೆ ವಿಸ್ತರಿಸಿಕೊಳ್ಳಲು ಈ ರೀತಿಯ ಕೃತಿಗಳು ನೆರವನ್ನು ನೀಡುತ್ತವೆ. ಆದರೆ ಈ ತೆರನಾದ ಕೃತಿಗಳು ಉಪೇಕ್ಷೆಗೆ, ವಿದ್ವಾಂಸರ ಅನಾದಾರಣೆಗೆ ಈಡಾಗಿವೆ.

ಚಾರಿತ್ರಿಕ ಆಕರಗಳು: ಹಸ್ತಪ್ರತಿ ಪುಷ್ಪಿಕೆಗಳಲ್ಲಿ ದೊರೆಯುವ ಮತ್ತೊಂದು ಮುಖ್ಯ ಸಂಗತಿ ಎಂದರೆ 'ಸ್ಥಳೀಯ ಅರಸರ ಚರಿತ್ರೆ, ಇವತ್ತು ಇತಿಹಾಸದಲ್ಲಿ ದಾಖಲಾಗದೆ ಇರುವ ಎಷ್ಟೋ ಸ್ಥಳೀಯ ಅರಸರುಗಳ ವಿವರಗಳು ಹಸ್ತಪ್ರತಿಗಳ ಪುಷ್ಪಿಕೆಗಳಲ್ಲಿ ದೊರೆಯುತ್ತವೆ. ಜೊತೆಗೆ ಅಧಿಕಾರ ಇತ್ಯಾದಿ ವಿವರಗಳು ದೊರೆಯುತ್ತಿದ್ದು ಸ್ಥಳೀಯ ಅರಸರಿಗೆ ಸಂಬಂಧಿಸಿದಂತೆ ಅಧ್ಯಯನ ಮಾಡುವಲ್ಲಿ ಪುಷ್ಪಿಕೆಗಳಲ್ಲಿಯ ಈ ಸಂಗತಿಗಳನ್ನು ಮೂಲ ಆಕರಗಳಾಗಿ ಪರಿಗಣಿಸ ಬೇಕಾಗಿದೆ. ನಿದರ್ಶನಕ್ಕೆ ಈಗಾಗಲೇ ಬಿಜ್ಜಾವರದ ಮಹಾನಾಡ ಪ್ರಭುಗಳು ಹಾಗೂ ಹಾಗಲವಾಡಿ ಪಾಳೆಯಗಾರರ ಚರಿತ್ರೆಯನ್ನು ಅರಿಯುವಲ್ಲಿ ಹಸ್ತಪ್ರತಿಗಳ ಪುಷ್ಪಿಕೆಗಳು ಒದಗಿಸಿರುವ ಮಾಹಿತಿಗಳನ್ನು ಅಧ್ಯಯನಕ್ಕೆ ಬಳಸಿಕೊಂಡಿರುವುದನ್ನು ಕಾಣಬಹುದು. ಅದೇರೀತಿ ಕಳಲೆ ಮನೆತನ, ಕೆಳದಿ ಮನೆತನ, ಮೈಸೂರು ಒಡೆಯರು, ಚಿತ್ರದುರ್ಗದ ಪಾಳೆಯಗಾರರದ ಬಗೆಗೆ ಹಸ್ತಪ್ರತಿಗಳಲ್ಲಿ ಉಲ್ಲೇಖವಿದೆ.

ನಿದರ್ಶನಕ್ಕೆ.

ಕಳಲೆ ನಂಜರಾಜನ ಹೆಸರಿನಲ್ಲಿ ದೊರೆಯುವ ಹಾಲಾಸ್ಯ ಮಾಹಾತ್ಮ್ಯ ಇತ್ಯಾದಿ ಕೃತಿಗಳ ಹಸ್ತಪ್ರತಿಗಳಲ್ಲಿ ಚಂದ್ರವಂಶೋದ್ಭವರಾದ ಭಾರದ್ವಾಜ ಗೋತ್ರದಾಶ್ವಲಾಯನ ಸೂತ್ರದ ರುಗ್ವೇದಿಗಳಾದ ಮಹಿಶೂರ ದಳವಾಯಿ ದೊಡ್ಡಯ್ಯನವರ ಪುತ್ರರಾದ ಕಳಲೆ ವೀರರಾಜಯ್ಯನವರ ಪುತ್ರರಾದ ನಂಜರಾಜೈಯ್ಯನವರು ಎಂಬ( ಕ.ಹ.ವ.ಸೂ. ಸಂ.೯ ಕ್ರ.ಸಂ.೩೫೮) ವಿವರಗಳಿದ್ದು ಕಳಲೆ ಮನೆತನದ ಅರಸರ ಬಗೆಗೆ ವಿವರಗಳು ತಿಳಿದು ಬರುತ್ತವೆ.

ಹಸ್ತಪ್ರತಿ ಪುಷ್ಪಿಕೆಯಲ್ಲಿಯ ಈ ವಿವರಗಳು ಕಳಲೆ ನಂಜರಾಜನಂತಹ ಸ್ಥಳೀಯ ಅರಸರ ಬಗೆಗೆ ಶಾಸನಗಳಲ್ಲಿ ದೊರೆಯದೇ ಇರುವ ಮಾಹಿತಿಗಳನ್ನು ಒದಗಿಸಿವೆ. ಹದಿನೆಂಟನೆಯ ಶತಮಾನದಲ್ಲಿ ಮೈಸೂರು ಭಾಗದಲ್ಲಿ ಆಳ್ವಿಕೆ ನಡೆಸಿದ್ದ ಕಳಲೆ ನಂಜರಾಜನ ಬಗೆಗೆ ಆತನೇ ರಚಿಸಿದ ಭಕ್ತವಿಲಾಸ ದರ್ಪಣ ಕೃತಿಯ ಹಸ್ತಪ್ರತಿಯ

ಪುಷ್ಪಿಕೆಯಿಂದ ಮಹತ್ತರವಾದ ಸಂಗತಿಗಳು ತಿಳಿದು ಬರುತ್ತವೆ.

ಇಂತು ಕರ್ಣಾಟಕ ಭಾಷಾವಿರಚಿತಮಾಗಿ ಶ್ರೀಮಹಿಶೂರ ಸೇನಾಧಿಪ ದೊಡ್ಡರಾಜಪೌತ್ರ ವೀರರಾಜತನೂಜ ದಳಪತಿ ದೇವರಾಜಾನುರಾಜ ಕಳಲೆ ನಂಜರಾಜ ವಿರಚಿತವಾದ ಭಕ್ತವಿಲಾಸದರ್ಪಣವೆಂಬ ಟೀಕಿನಲ್ಲಿ ವ್ಯಾಸಕೃತವಾದ ಸ್ಕಂದೋಪಪುರಾಣದಲ್ಲಿ ಶಿವಭಕ್ತ ಮಹಾತ್ಮ್ಯದಲ್ಲಿ ಏಣಾದಿನಾಥರ ಚರಿತ್ರೆಯೆಂಬ ಇಪ್ಪತ್ತನೆಯ ಅಧ್ಯಾಯದ ಅರ್ಥ ನಿರೂಪಣಕ್ಕೆ ಮಂಗಳಂ

" ಇತಿ ಶ್ರೀಮದವಿತ ನಮಿತಾಂಭೋಜ ಸಂಭವ ಜಂಭಾರಿ ಪ್ರಮುಖ ನಿಖಿಲ ಸುರಾಸುರ ವಂದ್ಯಮಾನ ಗರಳಪುರಾಧಿನಾಥ ಚರಣಾರವಿಂದ ಸೇವಾಸಮಾಸಾದಿತ ಗೀರ್ವಾಣಾಂಧ್ರ ಕರ್ಣಾಟಾಕಾದಿ ನಾನಾ ಭಾಷಾ ವಿಶೇಷ ಕಾವ್ಯರಚನಾ ಚಾತುರೀಧುರೀಣ ಶ್ರೀಮನ್ಮಹಾರಾಜಾಧಿರಾಜ ರಾಜ ಪರಮೇಶ್ವರ ರಾಜಮಾರ್ತಾಂಡ ಪ್ರೌಢಪ್ರತಾಪಾಪ್ರತಿಮ ವೀರ ನರಪತಿ ಬಿರುದಂತೆಂಬರ ಗಂಡ ಬಿರುದಾಂಕಿತ ಶಂಖಚಕ್ರ ಮಕರಮತ್ಸ್ಯ ಹನುಮದ್ಗರುತ ಗಂಡಭೇರುಂಡ ಸಿಂಹ ಶರಭ ಸಾಲ್ವ ಭೂವರಾಹಾದಿ ನಾನಾವಿಧ ದೈವಧ್ವಜ ಬಿರುದಾಂಕಿತ ಸಕಲ ದೇಶಾಧೀಶ ಕಿರೀಟಕೋಟಿ ಮಣಿ ಘೃಣಿ ಸೀರಾಜಿತ ಚರಣಯುಗಳ ಯಾದವವಂಶ ತಿಲಕ ಮಹೀಸೂರ ಕೃಷ್ಣರಾಜ ಸೇನಾ ದೊಡ್ಡರಾಜ ಪೌತ್ರ ವೀರರಾಜತನೂಜ ದೇವರಾಜಾನುಜ ಕಳಲೆ ನಂಜರಾಜ ಪರರಾಜ ಮಧೇಭ ಪಂಚಾನನ ದಾನಕ್ಷೌತ್ರಾಧೀಶ್ವರ ಹನುಮಧ್ವಜ ಬಿರುದಾಂಕಿತ ಶಿವಪುಜಾಧುರಂಧರ ಭಾರಧ್ವಾಜ ಗೋತ್ರಾಶ್ವಲಾಯನ ಸೂತ್ರ ಬುಕ್ಕಾಖಾಧ್ಯಾಯಿಕ ವಿಬುಧ ವಿಧೇಯ ರಾಜಮಾನ್ಯ ರಾಜ ಶ್ರೀಕಳಲೆ ನಂಜರಾಜ ವಿರಚಿತಮಾಗಿ." ಹಸ್ತಪ್ರತಿ ಪುಷ್ಪಿಕೆಯಲ್ಲಿಯ ಈ ವಿವರಗಳು ಕಳಲೆ ನಂಜರಾಜನಂತಹ ಸ್ಥಳೀಯ ಅರಸರ ಬಗೆಗೆ ಶಾಸನಗಳಲ್ಲಿ ದೊರೆಯದೇ ಇರುವ ಮಾಹಿತಿಗಳನ್ನು ಒದಗಿಸಿವೆ.

ಕೆಳದಿಯ ವಸ್ತುಸಂಗ್ರಹಾಲಯದಲ್ಲಿಯ ಕಳಲೆ ನಂಜರಾಜಯ್ಯಕೃತ ಬಧಿರಾಚಲ ಮಹಾತ್ಮೆ ಕೃತಿಯ ಹಸ್ತಪ್ರತಿಯಲ್ಲಿ ಕಳಲೆ ನಂಜರಾಜನ ವಿಶೇಷಣಗಳನ್ನು ಕುರಿತ ಉಲ್ಲೇಖವಿದೆ. ' ಯಿಂತು ಮಹೀಶೂರ ಸೇನಾಪತಿ ಕಳಲೆ ದೊಡ್ಡರಾಜ ಸುತ ವಿಬುಧನುತ ವೀರಧರಣೀಶತನಯ ನಂಜನರೇಂದ್ರ ವಿರಚಿತಮಾದ ಶ್ರೀ ಬ್ರಹ್ಮಾಂಡ ಪುರಾಣೋಕ್ತ ಬಧಿರಗಿರಿ ಮಹಿಮೆಯೊಳು ಕರ್ನಾಟಕ ಭಾಷಾರಚಿತ ಟೀಕೆ ನೊಳ್ಳೆದನೆ ಅಧ್ಯಾಯದರ್ಥ ಎಂಬ ವಿವರದಲ್ಲಿ ಕಳಲೆನಂಜರಾಜಯ್ಯನ ವಂಶವೃಕ್ಷವನ್ನು ನೋಡಬಹುದು.

ಕೃಷ್ಣ ಕಥಾರತ್ನಾಕರ ಎಂಬ ಕೃತಿಯ ಆದಿಯಲ್ಲಿಯ ಶ್ರೀಕೃಷ್ಣರಾಜ ಮಹಾರಾಜ ಕಂಠೀರವರಿಂದ ಶಕ ೧೭೮೭ ನೇ ರಕ್ತಾಕ್ಷಿ ಸಂವತ್ಸರದ ಚೈತ್ರಶುದ್ಧ ೧೫ ಗುರುವಾರ ವಿರಚಿತವಾದ ಎಂಬ ಹಾಗೂ ಅಂತ್ಯದಲ್ಲಿಯ ಶ್ರೀ ಮದ್ರಾಜಾಧಿರಾಜ ರಾಜಮಾರ್ತಾಂಡ ಕಂಠೀರವಾದ್ಯನೇಕ ಬಿರುದಾಂಕಿತ ಚಂಡಪ್ರಚಂಡೋದ್ದಂಡ ರಿಪುತಿಮಿರಮಾರ್ತಾಂಡ ಸರಸ ಕವಿತಾ ಚಮತ್ಕಾರ ಚತುರ ಶಿವಪೂಜಾ ಬದ್ಧ ದೀಕ್ಷಾ ದುರಂಧರ ಸಂಜರಾಜಾಭಿದ ಮುಂಮಡಿ ಕೃಷ್ಣರಾಜ ವಡೆಯರವರಿಂ ಪ್ರಕಾಶಿತವಾದ ಶ್ರೀಕೃಷ್ಣಕಥಾರತ್ನಾಕರ ವೆಂಬ ಗ್ರಂಥದೊಳ್ ಎಂಬ ( ಕ.ಹ.ವ.ಸೂ.

ಸಂ.೧ ಕ್ರ.ಸಂ.೩೨೭) ಉಲ್ಲೇಖದಲ್ಲಿ ಮೈಸೂರು ಒಡೆಯರ ವಿಶೇಷಣಗಳನ್ನು ಗುರುತಿಸ ಬಹುದು. ಹಾಗೆಯೇ ಇಲ್ಲಿಯ ಹಸ್ತಪ್ರತಿಗಳಲ್ಲಿ ಮೈಸೂರರಸರ ಪಟ್ಟಾಭಿಷೇಕ ಮುಹೂರ್ತ,ಮೈಸೂರು ಒಡೆಯರುಗಳಾದ ಚಾಮರಾಜ ಒಡೆಯರು ( ಶಾಲಿವಾಹನ ಶಕ ೧೪೯೩), ರಾಜವಡೆಯರು ಬೆಟ್ಟದ ಚಾಮರಾಜ ಒಡೆಯರು( ಶಾಲಿವಾಹನ ಶಕ ೧೭೧೮) ಕೃಷ್ಣರಾಜ ಒಡೆಯರ ಆಳ್ವಿಕೆಯ( ಶಾಲಿವಾಹನ ಶಕ ೧೭೨೧) ವೃತ್ತಾಂತ, ಮೈಸೂರು ನಗರದ ಪೂರ್ವೋತ್ತರ ಸಂಗತಿ, ಮೈಸೂರು ರಾಜವಂಶಾವಳಿ ಇತ್ಯಾದಿ ವಿವರಗಳು( ಕ.ಹ.ವ.ಸೂ. ಸಂ.೯ ಕ್ರ.ಸಂ.೫೮೦,೫೮೧,೫೮೨ ೫೮೩) ದೊರೆಯುತ್ತವೆ. ಕಳಲೆ, ಹದಿನಾಡ ಮತ್ತು ಉಮ್ಮತ್ತೂರ ಅರಸರು ಮತ್ತು ಮೈಸೂರಿನ ಒಡೆಯರಿಗೆ ಸಂಬಂಧಿಸಿದ ಈ ಮಾಹಿತಿಗಳನ್ನು ಮೈಸೂರು ಒಡೆಯರ ಹಾಗೂ ಈ ಭಾಗದ ಸ್ಥಳೀಯ ಅರಸರ ಇತಿಹಾಸದ ಪುನರ್‌ರಚನೆಯಲ್ಲಿ ಪೂರಕ ಆಕರಗಳಾಗಿ ಬಳಸಿ ಕೊಳ್ಳ ಬಹುದು.

ಬಿ.ವಿ.ಶಿರೂರ ಅವರು ಸಂಪಾದಿಸಿರುವ ಧೂಪದ ನಂಜೇಶ ಕವಿ ಬರೆದಿರುವ( ಕ್ರಿ..ಶ.೧೬೫೦) ಮೊಲ್ಲೆ ಬೊಮ್ಮಯ್ಯರ ಕಾವ್ಯದ ಹಸ್ತಪ್ರತಿಯು ಯಲಬುರ್ಗಾದ ಹಿರೇಮಠದಲ್ಲಿ ದೊರೆತಿದ್ದು, ಜಗದೇವನೊಂದಿಗೆ ಸೇರಿ ಬಿಜ್ಜಳನನ್ನು ಕೊಂದ ಮಲ್ಲೆಬೊಮ್ಮಯ್ಯನ ಇತಿವೃತ್ತವನ್ನು ಒಳಗೊಂಡಿದ್ದು ಯಲಬುರ್ಗಾ ಪರಿಸರದ ಕ್ರಿ.ಶ.೧೧೫೪ ಮತ್ತು ೧೧೮೬ ರ ಕಲ್ಲೂರು ಶಾಸನಗಳಲ್ಲಿಯ ಮಲ್ಲೆ ಬೊಮ್ಮಯ್ಯನ ವಿವರಗಳನ್ನು ಸಮರ್ಥಿಸುತ್ತದೆ. ಹೀಗಾಗಿ ಈ ಹಸ್ತಪ್ರತಿಗೆ ಚಾರಿತ್ರಿಕ ಮಹತ್ವ ಸಲ್ಲುತ್ತದೆ.

ಎಂ.ಎಂ.ಕಲಬುರ್ಗಿ ಮತ್ತು ವೀರಣ್ಣ ರಾಜೂರ ಅವರು ಸಂಪಾದಿಸಿರುವ ಕಂಪಲಿಯ ದೊಡ್ಡನಗೌಡರ ಮನೆಯಲ್ಲಿ ದೊರೆತ ಹೊಸ ಕುಮಾರ ರಾಮನ ಸಾಂಗತ್ಯ ಹಸ್ತಪ್ರತಿಯಲ್ಲಿಯ ವಿವರಗಳು ಕೊಪ್ಪಳ ಶಾಸನದಲ್ಲಿ ಪ್ರಸ್ತಾಪಿಸಿದ್ದ, ಕುಮಾರರಾಮನು ಕಮ್ಮಟ ದುರ್ಗದ ಜೈನರನ್ನು ಹೊರಹಾಕಲು ನಿಜವಾದ ಕಾರಣ ಸಂಗತಿಗಳನ್ನು ತಿಳಿಸುತ್ತದೆ. ಅಂದರೆ ಈ ಹಸ್ತಪ್ರತಿಯು ಕುಮ್ಮಟ ದುರ್ಗವನ್ನು ಆಳಿದ ಕುಮಾರ ರಾಮ ಮತ್ತು ಅಲ್ಲಿಯ ಜೈನಮನೆತನದ ವ್ಯಕ್ತಿಗಳ ಮನಸ್ತಾಪಕ್ಕೆ ಕಾರಣವಾದ ಜಾತಿಸೂತಕ ಸಂದರ್ಭದ ಬಗೆಗೆ ವಿವರಗಳಿವೆ. ಅಂದರೆ ಕುಮಾರರಾಮನನ್ನು ಪ್ರೀತಿ ಗೌರವಾದರಗಳಿಂದ ಬರಮಾಡಿಕೊಂಡ ಕುಮ್ಮಟದುರ್ಗದ ಜೈನಮನೆತನದ ವ್ಯಕ್ತಿಗಳು ಸತ್ಕರಿಸಿ ಕಳುಹಿಸಿ. ನಂತರ ಕುಮಾರ ರಾಮ ಕುಳಿತ ಸ್ಥಳ ಮಲಿನವಾಯಿತೆಂಬ ಭಾವನೆಯಿಂದ ಅದನ್ನು ಶುದ್ಧಗೊಳಿಸಿದರೆಂಬ ವದಂತಿಯನ್ನು ಕೇಳಿ ತಿಳಿದ ಕುಮಾರ ರಾಮ ಜೈನರನ್ನು ಕುಮ್ಮಟ ದುರ್ಗದಿಂದ ಹೊರ ಹಾಕಿದ್ದಲ್ಲದೆ, ಜೈನ ಬಸದಿಯಲ್ಲಿ ಕುರಿಕೋಣಗಳನ್ನು ವಧಿಸಿದ ಪ್ರಸಂಗಗಳನ್ನು ಈ ಹಸ್ತಪ್ರತಿಯು ಉಲ್ಲೇಖಿಸುತ್ತದೆ.

ಕೆಳದಿ ವಸ್ತು ಸಂಗ್ರಹಾಲಯದಲ್ಲಿರುವ ೧೭ ನೇ ಶತಮಾನಕ್ಕೆ ಸೇರಿದ ಶ್ರೀರಂಗಪಟ್ಟಣಕ್ಕೆ ಸಂಬಂಧಿಸಿದ ಇತಿಹಾಸ ಗ್ರಂಥ ಹಸ್ತಪ್ರತಿ (ಹಸ್ತಪ್ರತಿ ಸಂಖ್ಯೆ:೨೪೪)ಯಲ್ಲಿರುವ ಶ್ರೀರಂಗಪಟ್ಟಣದ ವರ್ಣನೆಯ ವಿವರ. ಹಸ್ತಪ್ರತಿಯಲ್ಲಿರುವ

ಶ್ರೀರಾಮಾನುಜಾಯ ನಮ:, ಶ್ರೀ ಕೃಷ್ಣದೇವರಾಯನ ಉಲ್ಲೇಖ, ಬಿಜಾಪುರದ ಆಲಿ ಆದಿಲ್ ಷಾಹ, ಅಹಮ್ಮದ್ ನಗರದ ನಿಜಾಂಷಹ,ಗೋಲ್ಕಂಡದ ನವಾಬನ ಚಾರಿತ್ರಿಕ ಸಂಗತಿಗಳನ್ನು ನಾಡಿನ ಸ್ಥಳೀಯ ಚರಿತ್ರೆಯ ಅಧ್ಯಯನಕ್ಕೆ ಬಳಸಿಕೊಳ್ಳಬಹುದಾಗಿದೆ. ಅದೇ ರೀತಿ ಶಿವಮೊಗ್ಗಾ ತಾಲೋಕಿನ ಕುಪ್ಪೂರಿನಲ್ಲಿ ದೊರೆತು ಈಗ ಕೆಳದಿ ವಸ್ತು ಸಂಗ್ರಹಾಲಯದಲ್ಲಿರುವ ಕೆಳದಿ ಅರಸರ ನಿರೂಪಗಳು ಹಸ್ತಪ್ರತಿಯಲ್ಲಿಯ ಕೆಳದಿ ಚೆನ್ನಾಮ್ಮಾಜಿಯ ವಿವರಗಳು, ಭದ್ರಪ್ಪನಾಯಕರು ವೆಂಕಟಗೆ ಬರಸಿ ಕಳುಹಿದ ಕಾರ್ಯ ಮುಂತಾದ ಚಾರಿತ್ರಿಕ ದಾಖಲೆಗಳು ಕೆಳದಿ ಅರಸರನ್ನು ಅರ್ಥೈಸಲು ಸಹಕಾರಿಯಾಗಿವೆ. (ಹಸ್ತಪ್ರತಿ ಸಂಖ್ಯೆ:೨೮೬. ಪು.೨೩) ಮೈಸೂರು. ವಿ.ವಿಯ ಕನ್ನಡ ಅಧ್ಯಯನ ಸಂಸ್ಥೆಯ ವರ್ಣನಾತ್ಮಕ ಹಸ್ತಪ್ರತಿ ಸೂಚಿ ಸಂಪುಟ ೧ ರಲ್ಲಿಯ( ಪು.೨೦೩) ಕದಿರೇರಾಯರ ಪೂರ್ವ ವೃತ್ತಾಂತ ಕಾಲ.೧೭೫೦, ಹಸ್ತಪ್ರತಿಯಲ್ಲಿ ಕದಿರೆರಾಯರ ಆಳ್ವಿಕೆಗೆ ಸಂಬಂಧಪಟ್ಟ ಗ್ರಾಮಗಳು, ಅವರ ಅಧೀನರು, ಹುದ್ದೆದಾರರ ಅಧಿಕಾರದ ವಿವರಗಳು, ಅವರ ವೇತನಾದಿಗಳು, ಗ್ರಾಮದಾನ ( ದೇವಸ್ಥಾನ ಮುಂತಾದವುಗಳಿಗೆ)ವಿವರವು, ಸಾಳುವ ಕೃಷ್ಣದೇವರಸವಡೇರು ಮೊದಲು ಮಾಡಿ ಬೆಳಗುತ್ತಿ ವಂಶಾವಳಿಯುಲ್ಲಿ ಚಲುವ ರಂಗಪ್ಪ ನಾಯಕರ ಮಗ ಮಾರಭೂಪರಾಯರ ವರೆಗಿನ ವಿವರಗಳಲ್ಲಿ ಶಿವಮೊಗ್ಗಾ ಜಿಲ್ಲೆಯ ಪರಿಸರದ ಇತಿಹಾಸದ ವಿವರಗಳನ್ನು ಕಾಣಬಹುದು.

ಚೆಲುವ ರಂಗಪ್ಪ ನಾಯ್ಕನು ಹೊಂನಾಳಿಯಂಬುದಾಗಿ ದೊಡ್ಡದಾಗಿ ಕೋಟೆ ಕಟ್ಟಿದ್ದು, ಹೊನ್ನಾಳಿ ಕಿಲ್ಲೇದ ಅಧಿಕಾರ ಮಾಡಿದ್ದು ಶಕ ೧೨೮೩ ಪ್ರವಸಂವತ್ಸರದ ಆರಭ್ಯ ಶಕ ೧೩೦೩ ದುರ್ಮತಿ ವರೆಗೆ ೨೦ ವರುಷ ಆಳಿದ್ದರ ಬಗೆಗೆ, ಇದೇ ಅವಧಿಯಲ್ಲಿಯೇ ಹೊನ್ನಾಳಿಯ ಕೋಟೆಯನ್ನು ನಿರ್ಮಿಸಿದ ಬಗೆಗೆ ವಿವರ ನೀಡಿದೆ. ಜೊತೆಗೆ ಈ ಹಸ್ತಪ್ರತಿಯಲ್ಲಿ ಶಿವಮೊಗ್ಗೆ ಪೂರ್ವರಾಯರ ವೃತ್ತಾಂತ, ಪೂರ್ವರಾಯರ ಪೈಕಿ ನಗರದ ವೃತ್ತಾಂತ, ಸಾಗರದ ಪೂರ್ವ ರಾಯರ ವೃತ್ತಾಂತ, ಹೊದಿಗೆರೆ ವೃತ್ತಾಂತ, ಸೂಳೇಕೆರೆ ಪೂರ್ವರಾಯರ ವೃತ್ತಾಂತ ಇತ್ಯಾದಿ ವಿವರಗಳು ಇವೆ. ಈ ವಿವರಗಳು ಆಯಾ ಸ್ಥಳೀಯ ಅರಸರ ಕಾಲ ನಿರ್ಣಯಮಾಡಲು ಸಹಕಾರಿಯಾಗಿದೆ. ಈ ಹಸ್ತಪ್ರತಿಯಲ್ಲಿಯ ಮಾಹಿತಿಗಳನ್ನು ಮೂಲ ಆಕರಗಳೊಂದಿಗೆ ಪೂರಕವಾಗಿ ಅಧ್ಯಯನಕ್ಕೆ ಬಳಸಿ ಕೊಳ್ಳ ಬಹುದಾಗಿದೆ.

ಈಗಾಗಲೇ ಕೆಳದಿ ನೃಪ ವಿಜಯ, ಕೆಳದಿ ಸಂಸ್ಥಾನದ ರಾಯರ ವಂಶಾವಳಿ ಇತ್ಯಾದಿ ಕೃತಿಗಳನ್ನು ಆಧರಿಸಿ ಕೆಳದಿ ಮನೆತನದ ಬಗೆಗೆ ಅಧ್ಯಯನ ನಡೆದಿದೆ. ಕೆಳದಿನೃಪವಿಜಯವು ಹರಪನಹಳ್ಳಿ ಪಾಳೆಗಾರರು ಮೊದಲುಗೊಂಡು ಇತರೆ ಸ್ಥಳೀಯ ಅರಸರ ಜೊತೆಗೆ ಹೊಂದಿದ್ದ ಸಂಬಂಧಗಳು ಇತ್ಯಾದಿ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಅಂಶಗಳನ್ನು ಅಧ್ಯಯನ ಮಾಡ ಬೇಕಾಗಿದೆ. ಈ ನಿಟ್ಟಿನಲ್ಲಿ ಕೆಳದಿ ವೆಂಕಟೇಶ ಜೋಯಿಸ್ ಅವರು ಕೆಳದಿ ನೃಪ ವಿಜಯವನ್ನು ಐತಿಹಾಸಿಕ ಹಾಗೂ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಅಧ್ಯಯನಕ್ಕೊಳ ಪಡಿಸಿ ಲೇಖನ ಪ್ರಕಟಿಸಿರುವುದನ್ನು

ಗಮನಿಸಬಹುದು. ಶಿವತತ್ವರತ್ನಾಕರದ ಲಭ್ಯವಿರುವ ಎಲ್ಲ ಹಸ್ತಪ್ರತಿಗಳನ್ನು ವ್ಯವಸ್ಥಿತ ಅಧ್ಯಯನಕ್ಕೆ ಒಳಪಡಿಸುವ ಮೂಲಕ ಕೆಳದಿ ಅರಸರ ಕಾಲದ ಸಾಂಸ್ಕೃತಿಕ ಹಾಗೂ ಧಾರ್ಮಿಕ ಸಂಗತಿಗಳ ಬಗೆಗೆ ಬೆಳಕು ಚೆಲ್ಲಬಹುದಾಗಿದೆ.

ಅದೇ ರೀತಿ ಕ್ರಿ.ಶ.೧೮೨೦ ಕ್ಕೆ ಹಿಂದೆ ತಳೇವಾಡ ಗ್ರಾಮದ ರೇವಣಯ್ಯ ಸ್ವಾಮಿಗಳಿಂದ ರಚಿತವಾದ ಬೊಮ್ಮಲಿಂಗದೇವರ ಕಾವ್ಯ ಎಂಬ ಅಪ್ರಕಟಿತ ಹಸ್ತಪ್ರತಿಯು ಉತ್ತರ ಕರ್ನಾಟಕ ಭಾಗದ ಹಂಜಿಗೆ,ಮಂಗಳಪುರ, ಅಕ್ಕಲಕೋಟೆ, ಕಲಬುರ್ಗಿ, ಕಮಲಪುರ, ಜಿನಪುರ ಮತ್ತು ಜೇವೂರಗಳ ಸ್ಥಳೀಯ ಚರಿತ್ರೆಯನ್ನು ಒದಗಿಸಿದೆ. ಹೀಗೆ ಬೇರೆಡೆ ಎಲ್ಲಿಯೂ ದೊರೆಯದೇ ಇರುವ ಸ್ಥಳೀಯ ಅರಸರ ಬಗೆಗಿ ಮಾಹಿತಿಗಳನ್ನು ಹಸ್ತಪ್ರತಿ ಪುಷ್ಪಿಕೆಗಳ ಆದಿ -ಅಂತ್ಯಗಳ ಹೇಳಿಕೆಗಳಲ್ಲಿಯ ವಿವರಗಳ ಮೂಲಕ ತಿಳಿದುಕೊಳ್ಳ ಬಹುದಾಗಿದೆ. ಸ್ಥಳೀಯ ಅರಸರ ಉಲ್ಲೇಖದ ಜೊತೆಗೆ ಅಧಿಕಾರ ವರ್ಗ, ಬೊಕ್ಕಸ ಮತ್ತು ಅರಮನೆಯ ಉಗ್ರಾಣದ ಕರಣಿಕೆ ವ್ಯಕ್ತಿಗಳ ಉಲ್ಲೇಖ ಕಸಬಾ ಪರಗಣಿ, ಮಾಗಣಿ, ಸಂಸ್ಥಾನ ಇತ್ಯಾದಿ ಆಡಳಿತ ವಿಭಾಗಗಳು, ಕೊತ್ವಾಲ, ಥಾಣೇದಾರ,ದಳವಾಯಿ, ನಾಡಗೌಡ,ಪಟ್ಟಣಶೆಟ್ಟಿ, ನಿರೂಪದ ಚಾವಡಿ,ಪೊತ್ತದಾರ, ಭಕ್ಷಿ,ಮಾಮಲೆ. ಸ್ಥಾನಿಕ, ಸುಬೇದಾರ ಇತ್ಯಾದಿ ವಿವರಗಳು ದೊರೆಯುತ್ತಿದ್ದು ಸ್ಥಳೀಯ ಅರಸರ ಕಾಲದ ಆಡಳಿತ ಮತ್ತು ಆರ್ಥಿಕ ಸಂಗತಿಗಳಿಗೆ ಸಂಬಂಧಿಸಿದಂತೆ ಅಧ್ಯಯನ ಮಾಡುವಲ್ಲಿ ಪುಷ್ಪಿಕೆಗಳಲ್ಲಿಯ ಈ ವಿವರಗಳನ್ನು ಮೂಲ ಆಕರಗಳಾಗಿ ಪರಿಗಣಿಸ ಬಹುದಾಗಿದೆ. ಚರಿತ್ರೆಯಲ್ಲಿ ದಾಖಲಾಗದೆ ಇರುವ ಸ್ಥಳೀಯ ಅರಸರ ಬಗೆಗೆ ಬೆಳಕು ಚೆಲ್ಲುವ ಹಸ್ತಪ್ರತಿಗಳು ಲಭ್ಯವಿದ್ದು ಅಪ್ರಕಟಿತ ಸ್ಥಿತಿಯಲ್ಲಿವೆ.

ಸಾಹಿತ್ಯ ಚರಿತ್ರೆಯ ಅಧ್ಯಯನದ ಆಕರಗಳಾಗಿ ಹಸ್ತಪ್ರತಿಗಳು:

ಹಸ್ತಪ್ರತಿಗಳಲ್ಲಿಯ ಕೆಲವು ಪುಷ್ಪಿಕೆಗಳಲ್ಲಿಯ ಉಲ್ಲೇಖಗಳು ಕವಿಗಳ ಹೆಸರನ್ನು ಕಾವ್ಯಗಳ ಕಾಲವನ್ನು ಅರ್ಥೈಸಲು ಸಹಕಾರಿಯಾಗಿವೆ.ಈ ಹಸ್ತಪ್ರತಿಗಳ ಪುಷ್ಪಿಕೆಗಳಲ್ಲಿಯ ಸಂಗತಿಗಳು ಸಾಹಿತ್ಯ ಚರಿತ್ರೆಯ ಅಧ್ಯಯನದ ದೃಷ್ಟಿಯಿಂದ ಮಹತ್ವದ ಪಾತ್ರ ವಹಿಸಿವೆ. ಕೆಲವು ನಿದರ್ಶನಗಳನ್ನು ನೋಡ ಬಹುದಾಗಿದೆ.

ಪ್ಲವ ಸಂವತ್ಸರ ಮಾಘಶುದ್ಧ ೧೫ರಲ್ಲು ಚಿಗನಾಯಕನಹಳ್ಳಿ ಲಿಂಗಪ್ಪನು ಮಹಾರಾಜೇಶ್ರೀ ಚೆನ್ನಾಜಮ್ಮನವರಿಗೆ ಪಾರಮಾರ್ಥಿಕದ ಪುಸ್ತಕ ಬರೆದು ಒಪ್ಪಿಸಿದಂಥಾ ಉಲ್ಲೇಖವು ಚಿಗನಾಯಕನಹಳ್ಳಿ ಲಿಂಗಪ್ಪನು ಕ್ರಿ.ಶ.೧೬೦೭ರಲ್ಲಿ ಪಾರಮಾರ್ಥಿಕ ಪುಸ್ತಕವನ್ನು ಪ್ರತಿಮಾಡಿ ಮಹಾರಾಜೇ ಶ್ರೀಚೆನ್ನಮ್ಮಾಜಿಯವರಿಗೆ ಒಪ್ಪಿಸಿದ್ದನ್ನು ತಿಳಿಸುತ್ತದೆ. ಪಾರಮಾರ್ಥಿಕದ ಪುಸ್ತಕ ಸರ್ವಜ್ಞನ ವಚನ ಸಂಕಲನ ವಾಗಿದ್ದು ಇದರಲ್ಲಿ ೭೭ಪದ್ಧತಿಗಳಿದ್ದು ೯೩೭ ತ್ರಿಪದಿಗಳಿವೆ. ಸರ್ವಜ್ಞನ ತ್ರಿಪದಿಗಳನ್ನು ಲಿಂಗಪ್ಪನು ಕ್ರಿ.ಶ. ೧೬೦೭ ರಲ್ಲಿಯೇ ಪ್ರತಿ ಮಾಡಿರುವುದರಿಂದ ೧೬೦೭ ಕ್ಕಿಂತ ಪೂರ್ವದಲ್ಲಿಯೇ ಸರ್ವಜ್ಞನು ಜೀವಿಸಿದ್ದನೆಂದು ಹೇಳಬಹುದಾಗಿದೆ. ಹಸ್ತಪ್ರತಿ ತಜ್ಞರಾಗಿದ್ದ ದಿವಂಗತ ಎಸ್.ಶಿವಣ್ಣನವರ ಪ್ರಕಾರ ಈ ಪುಷ್ಪಿಕೆಯಲ್ಲಿಯ ಉಲ್ಲೇಖವು ಕಾಲೋಲ್ಲೇಖವಿರುವ

ಸರ್ವಜ್ಞನ ಕೃತಿಯ ಪ್ರತಿಗಳಲ್ಲಿ ಅತ್ಯಂತ ಪ್ರಾಚೀನವಾದ ಕೃತಿಯಾಗಿದ್ದು, ಈ ಪ್ರತಿಯಲ್ಲಿಯ ಕಾಲದ ಉಲ್ಲೇಖವು ಸರ್ವಜ್ಞನ ಕಾಲನಿರ್ಣಯಕ್ಕೆ ಒಂದು ಮೈಲುಗಲ್ಲಾಗಿದೆ.

ಅದೇ ರೀತಿ ,ಗುಮ್ಮಳಾಪುರದ ಸಿದ್ಧಲಿಂಗಯತಿಯು ಶೂನ್ಯಸಂಪಾದನೆಯಲ್ಲಿ ತನ್ನ ಬಗೆಗೆ ' ಅನಾದಿ ಪರಶಿವ ತಾನೆ ಲೀಲಾ ಕ್ರೀಡೆಗೋಸ್ಕರ ಮರ್ತ್ಯಕ್ಕೆ ಬಿಜಯಂಗೈದ ಕರಚರಣ ಅವಯವಮಂ ಧರಿಸಿದ ತೋಂಟದ ಸಿದ್ಧೇಶ್ವರನ ವರಪುತ್ರನಾಗಿ ಜಗಹಿತಾರ್ಥವಾಗಿ ಗುಮ್ಮಳಾಪುರದ ಸಿದ್ಧಲಿಂಗದೇವರೆಂಬ ನಾಮವಿಡಿದು ಮತ್ತು ಶ್ರೀಮದ್ದೇಶಿಕ ಚಕ್ರವರ್ತಿಯೆನಿಪಾ ಸತ್ಕೀರ್ತಿಕಾಂತಂ ಬುಧಸ್ತೋಮಾಂಬೋನಿಧಿ ಪೂರ್ಣಚಂದ್ರನನಿಶಂ ಶ್ರೀ ತೋಂಟದಾರ್ಯರ್ಗಂಗೆ ಸತ್ಕ್ರೀಯುಂಬೆತ್ತಗದೂರ ಬೋಳಬಸವೇಶಾಚಾರ್ಯ ಕಾರುಣ್ಯದಿಂ ಭೌಮಂ ಸಿದ್ಧಸುಲಿಂಗ ಪೇಳ್ದನೊಲವಿಂದೀ ಶೂನ್ಯಸಂಪಾದನೆಯಂ' ಎಂದು ಹಾಗೂ ಕೃತಿಯ ಕೊನೆಯಲ್ಲಿ ಅನಾದಿ ಪರಶಿವ ತಾನೆ ತೋಂಟದ ಸಿದ್ಧೇಶ್ವರದೇವರ ದಿವ್ಯಶ್ರೀಪಾದಕ್ಕೆ ಸಮರ್ಪಿಸಿದ ಶೂನ್ಯ ಸಂಪಾದನೆ ಎಂದು ಹೇಳಿಕೊಂಡಿದ್ದಾನೆ. ಜೊತೆಗೆ ಸಮಾಪ್ತಿ ಕಂದ ಪದ್ಯ ೪ ರಲ್ಲಿ, ತೋಂಟದ ಸಿದ್ಧೇಶ್ವರನ ಪಾದಮೂಲದ ಬಳಿ ಕುಳಿತ ಗುಮ್ಮಳಾಪರಾಧೀಶನಾದ ತಾನು ಮೀಟೆನಿಸುವ ವಚನಾಮೃತದೂಟವ(ಶೂನ್ಯ ಸಂಪಾದನೆಯನ್ನು) ಶರಣಜನರ ಕರ್ಣಕ್ಕಿತ್ತುದಾಗಿ ಹೇಳಿಕೊಂಡಿದ್ದಾನೆ. ಅಲ್ಲದೆ ಕ್ರಿ.ಶ. ೧೫೪೦ ರ ಎಡೆಯೂರು ಶಿಲಾಶಾಸನದಲ್ಲಿ ತೋಂಟದ ಸಿದ್ಧಲಿಂಗ ಯತಿಗಳ ಜೊತೆಗೆ ಇದ್ದ ಇತರ ವಿರತರುಗಳ ಜೊತೆ ಗುಮ್ಮಳಾಪುರದ ಸಿದ್ಧಲಿಂಗರೂ ಇದ್ದರು ಎಂಬ ವಿವರ ಹಾಗೂ ಸಿದ್ಧನಂಜೇಶನ ರಾಘವಾಂಕ ಚರಿತದಲ್ಲಿಯ, ತುಮಕೂರಿನಲ್ಲಿ ನಡೆದ ತೋಂಟದ ಸಿದ್ಧಲಿಂಗರ ಮೆರವಣಿಗೆಯಲ್ಲಿ ಗುಮ್ಮಾಪುರದ ಸಿದ್ಧಲಿಂಗನೂ ಭಾಗವಹಿಸಿದ್ದನೆಂಬ ಹೇಳಿಕೆಯು ತೋಂಟದ ಸಿದ್ಧಲಿಂಗ ಯತಿಗಳ ಪರಂಪರೆಯವನು ಎಂಬುದನ್ನು ಸ್ಥಿರೀಕರಿಸುತ್ತದೆ. ಜೊತೆಗೆ ತುಮಕೂರು ಜಿಲ್ಲೆಯಲ್ಲಿ ದೊರೆತ ಜಕ್ಕಣಾರ್ಯ ಸಂಕಲಿತ ಏಕೋತ್ತರ ಶತಸ್ಥಲ ಹಸ್ತಪ್ರತಿಗೆ ಸಂಬಂಧಿಸಿದ ಪುಷ್ಪಿಕೆಯ ಆದಿಯಲ್ಲಿ

ಶ್ರೀ ಗುಮಳಾಪುರ ಸಿದ್ಧಲಿಂಗಾಯ ನಮಃ। ಯೆಕೋತ್ತರ ಸ್ವರವಚನ।

ಪಿಂಡಸ್ಥಲ ರಾಗಮಧುಮಾಧವಿ ಬಿಂದು-ವಿನ್ನಾಣದೊಳಗಂದವಿಟ್ಟಹ.........ಎಂದು

ಅಂತ್ಯದಲ್ಲಿ......ಹೆಬ್ಬೂರ ದೇವರು ಬರದ್ದು ಗುರುಲಿಂಗವೇ ಗತಿ, ಮತಿ, ಶುಭಮಸ್ತು, ನಿರ್ವಿಘ್ನಮಸ್ತು ಗುಮ್ಮಳಾಪುರದ ಸಿದ್ಧಲಿಂಗದೇವರ ಪಾದವೆ ಗತಿ ಮತಿ ಅಯ್ಯ.......ಗುಂಮಳಾಪುರಾಧಿಪ ಸಿದ್ಧಲಿಂಗಾಯ ನಮಃ ಎಂದಿದೆ. ಹಾಗೆಯೇ ಅದೇ ಕಟ್ಟಿನಲ್ಲಿಯ ಕೊನೆಯ ನಾಲ್ಕುಗರಿಗಳಲ್ಲಿ ವಾರ್ತೆ ಸೋಮಣ್ಣನ 'ಪಂಚೀಕರಣ ಪದಗಳು' ಪರಿವರ್ಧಿನಿಷಟ್ಪದಿಯ ಕೃತಿಯ ಆದಿಯಲ್ಲಿ ಶ್ರೀಗುರುಗುಮ್ಮಳಾಪುರ ಸಿದ್ಧಲಿಂಗಾಯ ನಮಃ ಎಂದಿದೆ. ತುಮಕೂರು ಜಿಲ್ಲೆಯ ಈ ಹಸ್ತಪ್ರತಿ ಪುಷ್ಪಿಕೆಗಳಲ್ಲಿಯ ಉಲ್ಲೇಖಗಳು ಶೂನ್ಯ ಸಂಪಾದನಾಕಾರ ಗುಮ್ಮಳಾಪುರ ಸಿದ್ಧಲಿಂಗಯತಿಗೂ ತುಮಕೂರು ಜಿಲ್ಲೆಯ ಪರಿಸರಕ್ಕೂ ಇದ್ದ ನಿಕಟ ಸಂಪರ್ಕದ ಬಗೆಗೆ ಹಾಗೂ

ತೋಂಟದಸಿದ್ಧಲಿಂಗಯತಿಗಳ ಶಿಷ್ಯ ಪರಂಪರೆಯವನು ಎಂಬುವುದಕ್ಕೆ ಪುರಾವೆಯನ್ನು ಒದಗಿಸುತ್ತದೆ.

ಕ್ರಿ.ಶ.೧೬೦೩ರಲ್ಲಿ 'ಪಂಚಪ್ರಕಾರ ಗದ್ಯವನ್ನು ಶ್ರೀಮದ್ವೀರಶೈವಾಚಾರ ವಿಸ್ತಾರ ವೀರಮಾಹೇಶ್ವರಾಗ್ರಣಿ ವಿರಕ್ತ ಶಿಖಾಮಣಿ ಗೂಳೂರು ಸಿದ್ಧವೀರೇಶ್ವರದೇವರ ಶ್ರೀಪಾದಪದ್ಮಕ್ಕೆ ಬಿಜ್ಜಾವರಪುರವರ ಗುರುಲಿಂಗ ಜಂಗಮಾಚಾರಾದಿವಾಚರಣ ಚಿಕ್ಕಭೂಪಾಲ ಭಕ್ತಿಯಿಂದೆ ಬರೆಯಿಸಿ ಸಮರ್ಪಿಸಿದರು' ಎಂಬ ಹಸ್ತಪ್ರತಿ ಪುಷ್ಪಿಕೆಯಿಂದ ಪಂಚಪ್ರಕಾರ ಗದ್ಯಗಳನ್ನು ಇಮ್ಮಡಿ ಚಿಕ್ಕಭೂಪಾಲ ಭಕ್ತಿಯಿಂದ ಬರೆಯಿಸಿ ಗೂಳೂರು ಸಿದ್ಧವೀರೇಶ್ವರದೇವರ ಶ್ರೀಪಾದ ಪದ್ಮಕ್ಕೆ ಅರ್ಪಿಸಿರುವುದು ತಿಳಿದುಬರುತ್ತದೆ. ಈ ಪ್ರತಿಯ ಕಾಲೋಲ್ಲೇಖದ ಪ್ರಕಾರ ಕ್ರಿ.ಶ. ೧೬೦೩ರಲ್ಲಿ ಗೂಳೂರು ಸಿದ್ಧವೀರೇಶ್ವರ ದೇವರು ಜೀವಿಸಿದ್ದರು ಎಂಬುದು ತಿಳಿದುಬರುತ್ತವೆ. ಈ ಹಸ್ತಪ್ರತಿಯ ಪುಷ್ಪಿಕೆಯ ಕಾಲದ ಉಲ್ಲೇಖವು ತೋಂಟದ ಸಿದ್ಧಲಿಂಗಯತಿಗಳ ಕಾಲ ನಿರ್ಣಯಕ್ಕೆ ಆಕರವಾಗಿದೆ.ಗೂಳೂರು ಸಿದ್ಧವೀರೇಶ್ವರದೇವರು ತೋಂಟದ ಸಿದ್ಧಲಿಂಗಯತಿಗಳ ಶಿಷ್ಯರಾದ ನಾಗವಲ್ಲಿಯ ಬೋಳಬಸವರಶಿಷ್ಯರಾಗಿದ್ದು, ಐದನೆಯ ಶೂನ್ಯಸಂಪಾದನೆಯ ಸಂಕಲನಕಾರರಾಗಿದ್ದಾರೆ. ಇವರ ಶೂನ್ಯಸಂಪಾದನೆಯನ್ನು ವಿರಕ್ತ ತೊಂಟದಾರ್ಯ ಕ್ರಿ.ಶ,೧೬೧೬ರಲ್ಲಿ ಪ್ರತಿ ಮಾಡಿದ್ದಾರೆ.

ಬೇಡತ್ತೂರಿನ ರಾಮಾಂಜನೇಯವರ ಸಂಗ್ರಹದಲ್ಲಿದ್ದ ಪ್ರಭುಲಿಂಗಲೀಲೆಯ ಹಸ್ತಪ್ರತಿಯ ಪುಷ್ಪಿಕೆಯಲ್ಲಿಯ ಶ್ರೀಗುರು ಬಸವಲಿಂಗಾಯ ನಮಃ ಹಂಪೆ ಚಾಮರಸೈಯ್ಯನವರು ನಿರೂಪಿಸಿದ ಪ್ರಭುಲಿಂಗಲೀಲೆ ಬರೆಯುವುದಕ್ಕ

ಬೇಡತ್ತೂರಿನ ರಾಮಾಂಜನೇಯವರ ಸಂಗ್ರಹದಲ್ಲಿದ್ದ ಪ್ರಭುಲಿಂಗಲೀಲೆಯ ಹಸ್ತಪ್ರತಿಯ ಪುಷ್ಪಿಕೆಯಲ್ಲಿಯ ಶ್ರೀಗುರು ಬಸವಲಿಂಗಾಯ ನಮಃ ಹಂಪೆ ಚಾಮರಸೈಯ್ಯನವರು ನಿರೂಪಿಸಿದ ಪ್ರಭುಲಿಂಗಲೀಲೆ ಬರೆಯುವುದಕ್ಕೆ ಶುಭಮಸ್ತು ಎಂಬ ಉಲ್ಲೇಖವು ಪ್ರಭುಲಿಂಗಲೀಲೆಯ ಕರ್ತೃ ಚಾಮರಸ ಹಾಗೂ ಆತ ಹಂಪೆಯವನು ಎನ್ನುವ ವಿಷಯವನ್ನು ಸ್ಥಿರೀಕರಿಸುತ್ತದೆ.

ಗೋವಿಂದವೈದ್ಯನ ಕಂಠೀರವ ನರಸರಾಜೇಂದ್ರ ವಿಜಯದ ಹಸ್ತಪ್ರತಿಯ ಅಂತ್ಯದಲ್ಲಿ," ಸ್ವಸ್ತಿಶ್ರೀ ವಿಜಾಯಾಭ್ಯುದಯ ಶಾಲಿವಾಹನ ಶಕ ೧೫೭೦ ಸಂದ ಸರ್ವಧಾರಿ ಸಂವತ್ಸರದ ಜೇಷ್ಠ ಶುದ್ಧ೧೧ ಚಂದ್ರವಾರದಲ್ಲೂ ಶ್ರೀ ಮನ್ಮಹಾದೇವ ದೇವೋತ್ತಮನಾದ ಶ್ರೀ ಲಕ್ಷ್ಮೀನರಸಿಂಹನು ಕಂಠೀರವ ನರಸರಾಜೇಂದ್ರನಿಗೆ ಆಯುರಾರೋಗ್ಯೈಶ್ವರ್ಯಾಭಿವೃದ್ಧ್ಯಷ್ಟಪುತ್ರ ಬಹುಧನವನು ಕೊಟ್ಟು ರಕ್ಷಿಸಲಿ ಎಂದು ರಂಗನಾಥಸ್ವಾಮಿಯ ಕೃಪೆಯಿಂದ ಶ್ರೀನಿವಾಸ ಪಂಡಿತರ ಮಗ ಗೋವಿಂದ ವೈದ್ಯನು ಕಂಠೀರವ ನರಸರಾಜ ವಿಜಯವನ್ನು ವಿರಚಿಸಿ ಅಚಂದ್ರಾರ್ಕವಾಗಿ ಭೂಮಿಯೊಳಿರಲಿಯೆಂದು ಭಾರತಿ ನಂಜನ ಮುಖದಿಂದ ವಾಚಿಸಿ ರಾಜಾಸ್ಥಾನದಲ್ಲಿ ವಿಸ್ತಾರ ಪಡಿಸಿದುದು.

ಕವಿಯು ತನ್ನ ಕೃತಿಯನ್ನು ಅದರ ಕಥಾನಾಯಕನ ಎದುರಿಗೆ ಭಾರತಿ ನಂಜ

ಎಂಬ ಗಮಕಿಯಿಂದ ಓದಿಸಿದ ಸ್ವಾರಸ್ಯ ಸಂಗತಿ ಇದರಿಂದ ವ್ಯಕ್ತವಾಗುತ್ತದೆ. ಕಂಠೀರವ ನರಸರಾಜನ ಆಶ್ರಯದಲ್ಲಿ ಭಾರತಿ ನಂಜ ಎಂಬ ಗಮಕಿಯಿದ್ದ ಎಂಬ ಅಂಶವೂ ಗಮಕ ಕಲೆಯ ದೃಷ್ಟಿಯಿಂದ ಗಮನಾರ್ಹವಾದುದಾಗಿದೆ.

ಹರಿಹರ ಕವಿಯ ನಂತರ ಅವನು ಹುಟ್ಟು ಹಾಕಿದ ರಗಳೇ ಸಾಹಿತ್ಯ ಪ್ರಕಾರ ನಂತರದ ಸಾಹಿತ್ಯ ಚರಿತ್ರೆಯ ಪರಂಪರೆಯಲ್ಲಿ ಮುಂದುವರೆಯಲಿಲ್ಲ ಎನ್ನುವ ಅಭಿಪ್ರಾಯ ವಿದ್ವಾಂಸರಿಂದ ವ್ಯಕ್ತವಾಗಿದೆ. ಆದರೆ ಈ ಅಭಿಪ್ರಾಯವನ್ನು ದೊರೆತ ಹಸ್ತಪ್ರತಿಗಳ ಮೂಲಕ ನಿರಾಕರಿಸುವಂತಾಗಿದೆ. ಹರಿಹರನು ಹುಟ್ಟು ಹಾಕಿದ ರಗಳೆ ಸಾಹಿತ್ಯ ಪ್ರಕಾರವನ್ನು ನಂತರದ ಕಾಲದಲ್ಲಿ ಅವನಷ್ಟು ವಿಪುಲವಾಗಿ ಹಾಗೂ ಸಮರ್ಥವಾಗಿ ಶಂಕರಕವಿ, ವಿರಕ್ತ ತೋಂಟದಾರ್ಯ, ಸೋಮೆಕಟ್ಟೆ ಚೆನ್ನವೀರಸ್ವಾಮಿಗಳು ಮುಂದುವರೆಸಿಕೊಂಡು ಬಂದಿದ್ದಾರೆ. ಈ ವಿಷಯವನ್ನು ತುಮಕೂರು ಜಿಲ್ಲೆಯಲ್ಲಿ ದೊರೆತ ಹಸ್ತಪ್ರತಿಗಳು ಸಮರ್ಥಿಸುತ್ತವೆ.

ಕೆಳದಿ ಅರಸರು, ಇಕ್ಕೇರಿ ಅರಸರು, ಸ್ವಾದಿ ಅರಸರು, ಬಿದನೂರಿನ ಅರಸರನ್ನು ಉಲ್ಲೇಖಿಸುವ ಹಸ್ತಪ್ರತಿಗಳನ್ನು ಶೋಧಿಸಿ ಅಧ್ಯಯನಕ್ಕೊಳ ಪಡಿಸ ಬೇಕಾಗಿದೆ, ಶಿವಮೊಗ್ಗ ಜಿಲ್ಲೆಯ ಕೆಳದಿ ಅರಸರ ಕಾಲದ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಜೀವನದ ಮೇಲೆ ಬೆಳಕು ಚೆಲ್ಲುವಂತಹ ಲಿಂಗಣ್ಣ ಕವಿಯ ಕೆಳದಿ ನೃಪವಿಜಯ, ಇಮ್ಮಡಿ ಬಸವಪ್ಪನಾಯಕನ ಶಿವತತ್ವರತ್ನಾಕರ, ಕೆಳದಿ ಗಂಗದೇವಿಯದೆಂದು ಹೇಳಲಾದ ಕೆಳದಿ ರಾಜಾಭ್ಯುದಯ, ಬಸವರಾಜಾಭುದ್ಯಯ, ಕರ್ನಾಟಕ ಶಿವಗೀತೆ, ಪರಮದೇವ ಕವಿ ವಿರಚಿತ ತುರಂಗ ಭಾರತ ಹಾಗೂ ಕೆಳದಿ ಅರಸರನ್ನು ಪರೋಕ್ಷವಾಗಿ ಉಲ್ಲೇಖಿಸಿರುವ ಕೀರ್ತನೆಗಳು ಇತ್ಯಾದಿ ಲಭ್ಯವಿರುವ ಹಸ್ತಪ್ರತಿಗಳೆಲ್ಲವನ್ನು ವ್ಯವಸ್ಥಿತವಾಗಿ ಅಧ್ಯಯನಕ್ಕೆ ಒಳಪಡಿಸುವ ಮೂಲಕ ಹೊಸ ಅಂಶಗಳನ್ನು ಹೊರತೆಗೆಯ ಬಹುದಾಗಿದೆ.

ಲಿಂಗಣ್ಣ ಕವಿಯು ತನ್ನ ಕೃತಿಯಲ್ಲಿ' ಮುಗುಳ್ದಿಕ್ಕೇರಿಯರಮನೆಯೊಳ್ ವಿಚಿತ್ರ ತೆರೆ ರಚನಾ ಕೌಶಲ್ಯದಿಂ ನಾಟಕ ಶಾಲೆಯಂ ನಿರ್ಮಾಣಗೈಸಿ ಎಂದು ಹೇಳಿರುವ ಹಿನ್ನೆಲೆಯಲ್ಲಿ ಕೆಳದಿ ಅರಸರು ಜನಪದ ರಂಗಭೂಮಿಯ ಯಕ್ಷಗಾನ ಕಲೆಗೆ ಯಾವ ರೀತಿ ಕಾಯಕಲ್ಪ ಕೊಟ್ಟರು ಹಾಗೂ ಜನಪದ ಕಲೆಯೊಂದು ರಾಜಾಶ್ರಯ ಪಡೆದು ಅರಮನೆಯ ಗೌರವಾದರಕ್ಕೆ ಯಾವ ರೀತಿ ಪಾತ್ರವಾಗಿದ್ದಿತು ಎಂಬುದನ್ನು ಗುರುತಿಸ ಬಹುದಾಗಿದೆ. ಇದಕ್ಕೆ ನಿದರ್ಶನವಾಗಿ ಯಕ್ಷಗಾನದ ಹಸ್ತಪ್ರತಿಗಳಾದ ಅಭಿಮನ್ಯು ಕಾಳಗ, ಕನಕಾಂಗಿ ಕಲ್ಯಾಣ,ಕೃಷ್ಣಾರ್ಜುನ ಕಾಳಗ, ಕುಶಲವರ ಕಾಳಗ,ಪಾರಿಜಾತ ಪ್ರಸಂಗ, ಬಬ್ರುವಾಹನ ಕಾಳಗ ಇತ್ಯಾದಿ ಹಸ್ತಪ್ರತಿಗಳು ಕೆಳದಿ ಪರಿಸರದಲ್ಲಿ ದೊರೆತಿರುವುದನ್ನು ಗಮನಿಸ ಬಹುದಾಗಿದೆ.

ಶಿವಮೊಗ್ಗಾ ಜಿಲ್ಲೆಯ ಕಾಸರವಳ್ಳಿ ಮನೆತನದಲ್ಲಿ ಲಭ್ಯವಿರುವ ಹಸ್ತಪ್ರತಿ ದಾಖಲೆಗಳು (ಶಹ ಪುಸ್ತಕಗಳು) ೧೭ ಮತ್ತು ೧೮ ನೇ ಶತಮಾನದ ಇತಿಹಾಸ ರಚನೆಗೆ ಯಾವ ರೀತಿ ಪುರಕವಾಗಿವೆ ಎಂಬುದನ್ನು ಅಧ್ಯಯನ ಕ್ಕೊಳಪಡಿಸ ಬೇಕಾಗಿದೆ. ಈ ನಿಟ್ಟಿನಲ್ಲಿ

ಕೆಳದಿ ವೆಂಕಟೇಶ ಜೋಯಿಸ್ ಅವರು ಕೆಳದಿಯ ಬಸಪ್ಪನಾಯಕನು ಶಿವತತ್ವರತ್ನಾಕರವನ್ನು ಬರೆದು ಮುಗಿಸಿದ ದಿನಾಂಕವುಳ್ಳ ಚಾರಿತ್ರಿಕ ದಾಖಲೆಯನ್ನು ಕಾಸರವಳ್ಳಿ ಮನೆತನದ ದಾಖಲೆಗಳಲ್ಲಿ ಶೋಧಿಸಿ ಬೆಳಕಿಗೆ ತಂದಿದ್ದಾರೆ. ( ಇತಿಹಾಸ ದರ್ಶನ, ಸಂ.೨೩, ಪು.೩೨೯) .

ಕೆಲವು ವ್ಯಕ್ತಿಗಳು ವೈಯಕ್ತಿಕವಾದ ಶಾರದಾ ಭಂಡಾರವನ್ನು ಹೊಂದಿದ್ದು ತಾವೇ ಸ್ವತಹ ಪ್ರತಿಮಾಡಿಸಿ ಸೇರಿಸುತ್ತಿದ್ದರು ಎಂಬುದು ಗಮನಾರ್ಹ ಸಂಗತಿಯಾಗಿದೆ. ಮಹಾನಾಡು ಪ್ರಭುಗಳ ಶಾರದಾ ಭಂಡಾರ ಹಾಗೂ ಅದರಲ್ಲಿದ್ದ ಹಸ್ತಪ್ರತಿಗಳ ಪುಷ್ಪಿಕೆಗಳು ಒದಗಿಸುವ ಮಾಹಿತಿಗಳ ಮಹತ್ವದ ಬಗೆಗೆ ಪ್ರಸ್ತಾಪಿಸಲೇ ಬೇಕಾಗಿದೆ. ೧೭ನೇ ಶತಮಾನದಲ್ಲಿ ಬಿಜ್ಜಾವರದ ಮಹಾನಾಡುಪ್ರಭುಗಳು ಅದರಲ್ಲಿಯು ಇಮ್ಮಡಿ ಚಿಕ್ಕಪ್ಪಗೌಡರ ಆಳ್ವಿಕೆಯ ಕಾಲದಲ್ಲಿ ತಮ್ಮ ಅರಮನೆಯಲ್ಲಿ ಶಾರದಾ ಭಂಡಾರವನ್ನು ಹೊಂದಿದ್ದರು ಎಂಬ ಸಂಗತಿ ಐತಿಹಾಸಿಕ ಮಹತ್ವ ಪಡೆದಿದೆ. ತಮ್ಮ ಅರಮನೆಯ ಶಾರದಾ ಭಂಡಾರಕ್ಕೆ ಬೇರೆಯವರಿಂದ ಪ್ರತಿಮಾಡಿಸಿ ಸೇರಿಸುತ್ತಿದ್ದರು ಎಂಬುದು ಗಮನಾರ್ಹ ಸಂಗತಿಯಾಗಿದೆ. ಮಹಾನಾಡು ಸಂಸ್ಥಾನದ ಶಾರದ ಭಂಡಾರದಲ್ಲಿ ಹಸ್ತಪ್ರತಿಗಳ ಬಗೆಗೆ ಸಂಬಂಧಿಸಿದ ಹಾಗೆ ಕ್ರಿ.ಶ.೧೬೦೧ರಿಂದ೧೬೨೧ ಕಾಲಾವಧಿಯಲ್ಲಿ ೭ ಹಸ್ತಪ್ರತಿಗಳ ಪುಷ್ಪಿಕೆಗಳು ಲಭ್ಯವಿವೆ. ಸಾನಂದ ಪುರಾಣ, ಭರತೇಶ ಚರಿತೆ, ಪಂಚಪ್ರಕಾರ ಗದ್ಯ, ಪಾರಮಾರ್ಥಿಕ ಪುಸ್ತಕ ಸ್ತೋತ್ರಭಾಷ್ಯಗಳ ಪುಸ್ತಕ, ಆರಾಧ್ಯ ಚಾರಿತ್ರೆ, ಜನವಶ್ಯ ಕೃತಿಗಳನ್ನು ಬರೆಸಿ ಶಾರದ ಭಂಡಾರಕ್ಕೆ ಸೇರಿಸಿದ್ದರ ಬಗೆಗೆ ಪುಷ್ಪಿಕೆಗಳಿಂದ ತಿಳಿದು ಬರುತ್ತದೆ. ೧೬೨೦ರಲ್ಲಿ ರಚಿತವಾದ ಸ್ತೋತ್ರಭಾಷ್ಯಗಳ ಪ್ರತಿಯ ಪುಷ್ಪಿಕೆಯಲ್ಲಿ ಇಮ್ಮಡಿ ಚಿಕ್ಕಪ್ಪಗೌಡರ ಶಾರದಾ ಭಂಡಾರದ ಉಲ್ಲೇಖವಿದೆ. ಸ್ಥಳೀಯ ಅರಸರೊಬ್ಬರ ಆಳ್ವಿಕೆಯ ಕಾಲದಲ್ಲಿ ಸರಸ್ವತಿ ಭಂಡಾರದ ಸ್ಥಾಪನೆ ಹಾಗೂ ಅದರ ಸಲುವಾಗಿ ವಿಶೇಷ ಆಸಕ್ತಿ ವಹಿಸಿ ಕೆಲವು ಪ್ರಮುಖ ಕೃತಿಗಳನ್ನು ಪ್ರತಿಮಾಡಿಸಿ ಶಾರದಾ ಭಂಡಾರಕ್ಕೆ ಸೇರಿಸಿದ್ದು ಮಹತ್ತರ ಸಂಗತಿಯಾಗಿದೆ. " ಹದಿನಾಡ ಸೀಮೆಯ ಯಳವಂದೂರ ಸ್ಥಳಕ್ಕೆ ಪೂರ್ವಿಕರಾದ ಕಾಸ್ಯಪ ಗೋತ್ರದ ತಣಪಂಡಿತರ ಕುಮಾರರಾದ ಸೂರಿ ಪಂಡಿತರ ಕಿರಿಯರ ಮಗ ಬೊಂಮರಸ ಪಂಡಿತನು ನಮ್ಮ ಶಾರದಾ ಭಂಡಾರಕ್ಕೆ ಪೊಸ್ತುಕವಾಗಬೇಕು ಯೆಂದು ಬರೆದೆರಡು ಸನತ್ಕುಮಾರನ ಕೃತಿಯ ಪೊಸ್ತುಕಕ್ಕೆ( ಕ.ಹ.ವ.ಸೂ. ಸಂ೯ ಕ್ರ.ಸಂ.೪೯) ಸರಸ್ವತಿ ಭಂಡಾರದ ಸ್ಥಾಪನೆ ಹಾಗೂ ಅದರ ಸಲುವಾಗಿ ವಿಶೇಷ ಆಸಕ್ತಿ ವಹಿಸಿ ಕೆಲವು ಪ್ರಮುಖ ಕೃತಿಗಳನ್ನು ಪ್ರತಿಮಾಡಿಸಿ ಶಾರದಾ ಭಂಡಾರಕ್ಕೆ ಸೇರಿಸಿದ್ದು ಮಹತ್ತರ ಸಂಗತಿಯಾಗಿದೆ. ಅದೇ ರೀತಿ ಕೆಲವು ವ್ಯಕ್ತಿಗಳು ವೈಯಕ್ತಿಕವಾದ ಶಾರದಾ ಭಂಡಾರವನ್ನು ಹೊಂದಿದ್ದು ತಾವೇ ಸ್ವತಹ ಪ್ರತಿಮಾಡಿಸಿ ಸೇರಿಸುತ್ತಿದ್ದರು ಎಂಬುದು ಗಮನಾರ್ಹ ಸಂಗತಿಯಾಗಿದೆ. ಪೂರ್ವಿಕರಲ್ಲಿ ಕೆಲವರು ವೈಯಕ್ತಿಕವಾಗಿ ಹಸ್ತಪ್ರತಿಗಳ ಸಂಗ್ರಹವನ್ನು ಹೊಂದಿದ್ದರ ಬಗೆಗೆ ಪುಷ್ಪಿಕೆಗಳಲ್ಲಿ ವಿವರಗಳು ದೊರೆಯುತ್ತವೆ. ನಿದರ್ಶನಕ್ಕೆ ಕರೆವೃಷಭನ ಪುಸ್ತಕವು, ಕರಿಯ ಬಂಟನ ಪುಸ್ತಕ.ಪರಪ್ಪನ ಪುಸ್ತಕ, ನಾರಣರಾಜಯ್ಯ ಅರಸಿನವರ ಪುಸ್ತಕ, ಸಾಲೆ ವೀರಣ್ಣನ

ಪುಸ್ತಕ, ಯಾನ್ಗೋಡ ಮಠದ ಚರಂತಿ ದೇವರ ಪುಸ್ತಕವು ಇತ್ಯಾದಿ.

ಸಾಹಿತ್ಯದ ಅಧ್ಯಯನವಾಗಿಯೂ ಹಸ್ತಪ್ರತಿಗಳ ಅಧ್ಯಯನ ಇಂದು ಮುಖ್ಯವಾಗಿದೆ. ಆಧುನಿಕ ಪೂರ್ವಯುಗದಲ್ಲಿ ಸಾಹಿತ್ಯ ಕೃತಿಯೊಂದರ ಪ್ರಸರಣವನ್ನು ಲಭ್ಯವಿರುವ ಆ ಕೃತಿಯ ಹಸ್ತಪ್ರತಿಗಳ ಸಂಖ್ಯೆಯನ್ನು ಆಧರಿಸಿ ಗ್ರಹಿಸ ಬಹುದಾಗಿದೆ. ವಚನಕಾರರ ವಚನಗಳು, ಹರಿದಾಸರ ಕೀರ್ತನೆಗಳು, ಭೀಮಕವಿಯ ಬಸವಪುರಾಣ, ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣ, ಲಕ್ಷ್ಮೀಶನ ಜೈಮಿನಿ ಭಾರತ, ಕುಮಾರವ್ಯಾಸನ ಕುಮಾರವ್ಯಾಸ ಭಾರತ ಇತ್ಯಾದಿ ಕೃತಿಗಳ ಅಸಂಖ್ಯಾತ ಹಸ್ತಪ್ರತಿಗಳು ದೊರೆಯುತ್ತವೆ. ಈ ದೇಶೀ ಕಾವ್ಯಗಳೇ ಏಕೇ ಅಧಿಕ ಸಂಖ್ಯೆಯಲ್ಲಿ ದೊರೆಯುತ್ತವೆ. ಪಂಪಭಾರತ, ಗದಾಯುದ್ಧದಂತಹ ಚಂಪುಕೃತಿಗಳ ಹಸ್ತಪ್ರತಿಗಳೇಕೆ ಅಷ್ಟು ಸಂಖ್ಯೆಯಲ್ಲಿ ದೊರೆಯುವುದಿಲ್ಲ ಎಂಬುದನ್ನು ಅಧ್ಯಯನಕ್ಕೊಳಪಡಿಸ ಬಹುದಾಗಿದೆ. ಕೃತಿಗಳ ಕುರಿತ ಲಭ್ಯವಿರುವ ಹಸ್ತಪ್ರತಿಗಳ ಸಂಖ್ಯೆಯ ಆಧಾರದ ಮೇಲೆ ಆ ಕಾಲದ ಓದುಗವರ್ಗದ ಮನೋಭಾವವನ್ನು ಚರ್ಚೆಗೊಳಪಡಿಸ ಬಹುದಾಗಿದೆ. ಒಂದು ಕೃತಿಯ ಹಸ್ತಪ್ರತಿಗಳು ದೊರೆಯುವ ಭೌಗೋಳಿಕ ಪ್ರದೇಶಗಳನ್ನು ಗಮನದಲ್ಲಿರಿಸಿಕೊಂಡು ಪ್ರಾದೇಶಿಕ ಭಿನ್ನಪಾಠಗಳನ್ನು ಗುರುತಿಸ ಬಹುದಾಗಿದೆ. ಯಾವ ಯಾವ ಪ್ರದೇಶದಲ್ಲಿ ಯಾವ ಯಾವ ಕವಿಯ ಕೃತಿಗಳನ್ನು ಅಧ್ಯಯನ ಮಾಡುವ ಓದುವ ವರ್ಗ ಇದ್ದಿತು? ಅವರ ಮನೋಭಾವ ಎಂತಹದ್ದು ಎಂಬುದನ್ನು ಗುರುತಿಸ ಬಹುದು. ಜೊತೆಗೆ ಕೃತಿಗಳ ಜನಪ್ರಿಯತೆ ಹೇಗಿತ್ತು? ಏನಿತ್ತು? ಆಕಾಲದ ಜನರ ಮನೋಧೋರಣೆ ಯಾವ ರೀತಿಯಾಗಿತ್ತು? ಎಂಬ ಅಂಶವು ಮನದಟ್ಟಾಗುತ್ತದೆ. ಒಂದು ಕೃತಿಗೆ ಸಂಬಂಧಿಸಿದ ವಿವಿಧ ಹಸ್ತಪ್ರತಿಗಳಲ್ಲಿ ಕಂಡು ಬರುವ ಭಿನ್ನ ಪಾಠಗಳು ಅಥವಾ ಸ್ಖಾಲಿತ್ಯಗಳನ್ನು ಹಸ್ತಪ್ರತಿ ಅಧ್ಯಯನದ ನೆಲೆಯಲ್ಲಿ ಬೇರೆ ಬೇರೆ ಆಯಾಮಗಳ ಹಿನ್ನೆಲೆಯಲ್ಲಿ ಗುರುತಿಸ ಬೇಕಾಗಿದೆ. ಇವುಗಳು ಸಾಂಸ್ಕೃತಿಕ ಅಧ್ಯಯನದಲ್ಲಿ ಸಮಾಜದ ಪಠ್ಯಗ್ರಹಿಕೆಯ ಸ್ವರೂಪ ಮತ್ತು ಭಾಷಿಕವಾಗಿ ಪ್ರಾದೇಶಿಕ ಭಾಷೆಯ ಮಾದರಿಯ ಆಯಾಮವನ್ನು ಯಾವರೀತಿ ಪಡೆದುಕೊಂಡಿದೆಂಬುದನ್ನು ಗ್ರಹಿಸಬಹುದು. ಹಸ್ತಪ್ರತಿಗಳ ಅಧ್ಯಯನದ ಮೂಲಕ ಪ್ರಾಚೀನ ಕಾಲದ ಜನತೆಯ ವಿದ್ಯಾಭಿಮಾನ, ಧರ್ಮಾಭಿಮಾನ ಹಾಗೂ ಬದುಕಿನ ಪ್ರಜ್ಞೆಯನ್ನು ತಿಳಿದುಕೊಳ್ಳಲು ಸಾಧ್ಯ ಇರುವುದರಿಂದ ಮಹತ್ತರವಾದ ಸಾಂಸ್ಕೃತಿಕ ದಾಖಲೆಗಳಾಗಿವೆ. ಹಸ್ತಪ್ರತಿ ಪುಷ್ಪಿಕೆಗಳಲ್ಲಿ ಮತ್ತು ಭಿನ್ನಪಾಠಗಳಲ್ಲಿ ಅಡಗಿರುವ ಹೇರಳವಾದ ಸಾಂಸ್ಕೃತಿಕ- ಸಾಹಿತ್ಯ ವಿವರಗಳು ಸಂಸ್ಕೃತಿಯ ಪುನರ್‌ರಚನೆಯಲ್ಲಿ ಮಹತ್ತರ ಪಾತ್ರ ವಹಿಸಿವೆ. ದೇಸೀ ಕಾವ್ಯದ ಹಸ್ತಪ್ರತಿಗಳನ್ನು ಇದ್ದ ಹಾಗೆಯೇ ವ್ಯವಸ್ಥಿತವಾಗಿ ಪರಿಷ್ಕರಿಸಬೇಕಾಗಿದೆ ಎಂಬ ನಿಲುವು ಇತ್ತೀಚಿನ ದಿನಮಾನಗಳಲ್ಲಿ ವ್ಯಕ್ತಗೊಂಡಿದೆ. ಹಸ್ತಪ್ರತಿಗಳ ಸಾಂಸ್ಕೃತಿಕ ಅಧ್ಯಯನದ ನೆಲೆಯಿಂದಾಗಿ ಹಸ್ತಪ್ರತಿಗಳ ಅಧ್ಯಯನದಲ್ಲಿ ಓದುಗನ ಮನೋಭಾವ, ಪಠ್ಯಬದಲಾವಣೆಗಳ, ಸಾಂಸ್ಕೃತಿಕ ಸಂಗತಿಗಳ ಪಲ್ಲಟದ ಆಯಾಮವನ್ನು ಗುರುತಿಸ ಬಹುದಾಗಿದೆ. ಮಧ್ಯಕಾಲೀನ ಯುಗದಲ್ಲಿ ಕೆಲವು ಕವಿಗಳು ಕೇಳಲು ಯೋಗ್ಯವಾದ ಪಠ್ಯವನ್ನು ರಚಿಸಿ ಆ ಪಠ್ಯದ

ಯೋಗ್ಯತೆಯನ್ನು ವರ್ಧಿಸುವ ರಾಗ ತಾಳಗಳ ಸೂಚನೆಯನ್ನು ಕೊಟ್ಟಿದ್ದಾರೆ. ಆದರೆ ದೇಸೀ ಕಾವ್ಯ ಪ್ರಕಾರಗಳಲ್ಲಿ (ಹಾಡುಗಬ್ಬಗಳು) ಕಾವ್ಯಗಳನ್ನು ರಚಿಸುವುದರ ಜೊತೆಗೆ ಆ ಪಠ್ಯಗಳನ್ನು ಕೇಳುವ ಹಿನ್ನಲೆಯಲ್ಲಿ ನೀಡಿದ್ದ ಸಂಗೀತಕ್ಕೆ ಸಂಬಂಧಿಸಿದ ರಾಗ-ತಾಳಗಳ ಸೂಚನೆಯನ್ನು ಕೈಬಿಟ್ಟು ಪ್ರಕಟಿಸಿದ್ದಾರೆ. ಹಾಡುಗಬ್ಬಗಳ ಪರಿಷ್ಕರಣೆಯ ಸಂದರ್ಭದಲ್ಲಿ ಹಸ್ತಪ್ರತಿಗಳಲ್ಲಿರುವ ಗಮಕ ಪದ್ಧತಿ ಹಾಗೂ ಸಂಗೀತಕ್ಕೆ ಸಂಬಂಧಿಸಿದ ರಾಗ-ತಾಳಗಳ ಸೂಚನೆಗಳನ್ನು ನಿರೂಪಿಸಿ ಅವುಗಳ ಮಹತ್ವವನ್ನು ಮೌಲ್ಯೀಕರಿಸಬೇಕಾಗಿದೆ. ಎಲ್.ಬಸವರಾಜು ಅವರು ಸಂಪಾದಿಸಿರುವ 'ಶಿವದಾಸ ಗೀತಾಂಜಲಿ' ಮಾದರಿಯಲ್ಲಿ ಸಿದ್ಧಗೊಳ್ಳಬೇಕಾಗಿದೆ. ಹಸ್ತಪ್ರತಿಗಳ ಪಾಠದಲ್ಲಿ ಸಾಂಸ್ಕೃತಿಕ ಸಂಸ್ಕರಣಕ್ಕೆ ಹೆಚ್ಚಿನ ಆದ್ಯತೆ ಕೊಡಬೇಕು. ಹಸ್ತಪ್ರತಿ ಪಾಠನಿರ್ಣಯದಲ್ಲಿ ಒಂದು ಕೃತಿ ಹುಟ್ಟಿದ ಕಾಲ ಮತ್ತು ಆ ಕಾಲದ ಸಾಂಸ್ಕೃತಿಕ ಮೌಲ್ಯದ ತಿಳುವಳಿಕೆಯೊಂದಿಗೆ ಪರಿಷ್ಕರಿಸಬೇಕು. ವಚನ, ಕೀರ್ತನೆ ಮುಂತಾದ ಹಾಡುಗಬ್ಬಗಳ ಪ್ರಕಾರಗಳಲ್ಲಿ ಈ ತಿಳುವಳಿಕೆಯು ಅಪೇಕ್ಷಣೀಯ. ಒಂದು ಪಠ್ಯ ಮಾತಿನ ಮೂಲಕ ಅಭಿವ್ಯಕ್ತವಾಗುವಾಗ ನಿರ್ದಿಷ್ಟ ಪ್ರದೇಶವೊಂದರ ವೈಲಕ್ಷ್ಯಣ್ಯಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತದೆ. ಅಂತಹ ಸಂದರ್ಭದಲ್ಲಿ ಲಿಖಿತ ಪಠ್ಯ ಮೌಖಿಕವಾಗಿ ಅಭಿವ್ಯಕ್ತವಾಗುವಾಗ ವ್ಯತ್ಯಾಸಗಳು ಕಂಡುಬರುತ್ತವೆ. ಗ್ರಂಥಸಂಪಾದನೆಯ ಅಧ್ಯಯನವನ್ನು ಸಾಂಸ್ಕೃತಿಕ ಅಧ್ಯಯನವಾಗಿ ಗುರುತಿಸಲು ಸಾಧ್ಯವಿಲ್ಲ.

ಹಸ್ತಪ್ರತಿಗಳಲ್ಲಿ ಒಡಮೂಡಿರುವ ಚಿತ್ರಕಲೆಗಳಲ್ಲಿಯ ಸಂಸ್ಕೃತಿಯ ಗ್ರಹಿಕೆ:

ಪ್ರತಿಯೊಬ್ಬ ಲಿಪಿಕಾರನೂ ಅಕ್ಷರಗಳ ಅಂಗರಚನೆ, ಒಳವರ್ತುಲಗಳ ಆಯ, ಪ್ರಮಾಣಗಳನ್ನು ಬಲ್ಲಿದವನಾಗಿದ್ದ. ಪೊಕ್ಕಳು, ತಲೆಕಟ್ಟು ಮುಂತಾದ ಕ್ರಮಾನುಗತವನ್ನು ಲಿಪಿಕಾರರು ಬಲ್ಲವರಾಗಿದ್ದರು. ಕೆಲವು ಲಿಪಿಕಾರರು ಅಕ್ಷರಗಳಲ್ಲಿ ಪುಷ್ಪ.ಪಕ್ಷಿ, ಪ್ರಾಣಿಗಳನ್ನು ಬಿಡಿಸಿ ಸೌಂದರ್ಯ ಪ್ರಜ್ಞೆಯನ್ನು ಮೂಡಿಸಿದ್ದಾರೆ. ಹಸ್ರಪ್ರತಿಗಳಲ್ಲಿ ಕಂಡು ಬರುವ ಚಿತ್ರಕಲೆಯು ಸಾಂಸ್ಕೃತಿಕ ಅಧ್ಯಯನದ ವಿಧಾನವೇ ಆಗಿದೆ. ಪಠ್ಯಕೇಂದ್ರಿತವಾಗಿ ಪಠ್ಯದ ಒಂದು ಭಾಗವಾಗಿ ಹಸ್ತಪ್ರತಿಗಳಲ್ಲಿ ವರ್ಣ ಚಿತ್ರಗಳು ಬಳಸಲ್ಪಟ್ಟಿವೆ. ಧಾರ್ಮಿಕ ಗ್ರಂಥವಾದರೆ ಧರ್ಮದ ವಿಚಾರವನ್ನು ಹೇಳುವುದಕ್ಕೆ, ತಾಂತ್ರಿಕ ವಿಷಯವುಳ್ಳ ಹಸ್ತಪ್ರತಿಗಳು ತಾಂತ್ರಿಕ ಚಿತ್ರಗಳನ್ನು, ವೈದ್ಯದ ವಿಷಯವುಳ್ಳ ಹಸ್ತಪ್ರತಿಗಳಲ್ಲಿ ಆ ವಿಷಯಕ್ಕೆ ಸಂಬಂಧಿಸಿದ ವರ್ಣ ಚಿತ್ರಗಳು ಮತ್ತು ರೇಖಾ ಚಿತ್ರಗಳು ಕಂಡು ಬರುತ್ತಿದ್ದು ಇವುಗಳನ್ನು ಪಾರಂಪರಿಕ ವರ್ಣಚಿತ್ರಗಳ ಸಾಲಿನಲ್ಲಿ ಸೇರಿಸಿ ಅಧ್ಯಯನ ಮಾಡಬಹುದಾಗಿದೆ. ಈ ತೆರನಾದ ಅಧ್ಯಯನವನ್ನು ಬಿ.ಕೆ. ಹಿರೇಮಠ ಅವರು ಕನ್ನಡ ಹಸ್ತಪ್ರತಿಗಳ ಅಧ್ಯಯನದ ಪುಸ್ತಕದಲ್ಲಿ ಮಾಡಿದ್ದಾರೆ. ಹಸ್ತಪ್ರತಿ ಚಿತ್ರಗಳು ನಮ್ಮ ಪೂರ್ವಿಕರ ವಿಚಾರ, ಚಿಂತನೆಗಳು ಮತ್ತು ಧರ್ಮಗಳ ಬೆಳವಣಿಗೆಯಲ್ಲಿ ಯಾವ ತೆರನಾದ ಸಂಬಂಧವನ್ನು ಹೊಂದಿದ್ದವು ಎಂಬುದನ್ನು ಗ್ರಹಿಸ ಬಹುದಾಗಿದೆ. ಶ್ರವಣಬೆಳಗೊಳದ ಶ್ರೀಜೈನಮಠದ ಹಸ್ತಪ್ರತಿ ಭಂಡಾರದಲ್ಲಿಯ ೧೫-೧೬ ನೇಶತಮಾನಕ್ಕೆ ಸೇರಿದ ಹಸ್ತಪ್ರತಿಯ ಗರಿಗಳ ಮೇಲೆ ಗ್ರಂಥದ ಬರೆಹ

ಮತ್ತು ಚಿತ್ರದ ರಚನೆಗಳಿರುವುದನ್ನು ಬಿ.ಕೆ.ಹಿರೇಮಠ ಅವರು ಗುರುತಿಸಿದ್ದಾರೆ. ಈ ಹಸ್ತಪ್ರತಿಯ ಗರಿಗಳಲ್ಲಿ ಜೈನಬಸದಿ,ದೇವಾಲಯಗಳ ಮುಂಭಾಗದಲ್ಲಿ ಕಂಗೊಳಿಸುವ ಮಾನಸ್ತಂಭಗಳನ್ನು ಬಿಡಿಸಿ ತೋರಿಸಲಾಗಿದೆ. ಸ್ತಂಭದ ಪೀಠ, ಮೇಲಿನ ಸ್ತಂಭರಚನೆ, ಅದಕ್ಕೂ ಮೇಲಿರುವ ಮಂಟಪ ಈ ಪ್ರಮುಖ ಭಾಗಗಳನ್ನು ಪ್ರಮಾಣಬದ್ಧವಾಗಿ ತೋರಿಸಲಾಗಿದೆ. ಈ ರೀತಿಯ ಹಸ್ತಪ್ರತಿಗಳಲ್ಲಿ ದೇವಸ್ಥಾನ, ಬಸದಿಗಳಲ್ಲಿ ನಡೆಯುತ್ತಿದ್ದ ವೈಭವದ ಪೂಜೆಗಳಿಗೆ ಬೇಕಾಗುವ ಅಲಂಕರಣ ವಸ್ತು ಸಾಧನ ಸಾಮಗ್ರಿಗಳ ಚಿತ್ರ ವಿವರಗಳು ಇದ್ದು ಆ ಕಾಲದ ಜಿನಧರ್ಮದ ಧಾರ್ಮಿಕ ಆಚರಣೆಯ ಸ್ವರೂಪಗಳನ್ನು ತಿಳಿದುಕೊಳ್ಳ ಬಹುದಾಗಿದೆ. ಕೆಲವು ಹಸ್ತಪ್ರತಿಗಳಲ್ಲಿ ಕಾವ್ಯದ ಪ್ರಮುಖವಾದ ಪ್ರಸಂಗ ಅಥವಾ ಸನ್ನಿವೇಶಗಳ ಚಿತ್ರಗಳ ರಚನೆಯನ್ನು ಕಾಣಬಹುದು. ಶಬ್ದರೂಪವಾಗಿರುವ ಕಾವ್ಯದ ಸಂದರ್ಭಗಳನ್ನು ಚಾಕ್ಷುಷಗೊಳಿಸಿರುವ ಪ್ರಯತ್ನವನ್ನು ಇಲ್ಲಿ ಕಾಣಬಹುದು. ಪ್ರತಿಕಾರನು ಒಂದು ಕೃತಿಯನ್ನು ಬರಹಕ್ಕಿಳಿಸುತ್ತ ಅದನ್ನು ಆಸ್ವಾದಿಸುತ್ತ ಸುಂದರ ಸನ್ನಿವೇಶಗಳನ್ನು ಅಂತರಂಗದಲ್ಲಿ ಪರಿಭಾವಿಸಿಕೊಳ್ಳುತ್ತಾ ದೃಶ್ಯಮಾಲೆಯನ್ನು ಸೃಷ್ಟಿಸಿರುವುದನ್ನು ಮನಗಂಡರೆ ಹಸ್ತಪ್ರತಿಕಾರರು ಚಿತ್ರಕಲಾ ಪರಿಣಿತಿಯನ್ನು ಹೊಂದಿದ್ದರು ಎಂಬುದು ಸಾಬೀತಾಗುತ್ತದೆ. ಹಸ್ತಪ್ರತಿಗಳಲ್ಲಿನ ಚಿತ್ರರಚನೆಗೆ ಇರುವ ಅವಕಾಶ ಸೀಮಿತವಾಗಿದ್ದು ಅತ್ಯಂತ ದಕ್ಷತೆಯಿಂದ ಕೌಶಲ್ಯ ಪೂರ್ಣವಾಗಿ ಮಾಡಬೇಕಾದ ಕೆಲಸ. ಹಸ್ತಪ್ರತಿ ಚಿತ್ರಕಾರರು ತಮ್ಮ ಕಲ್ಪನೆ, ಸಂಸ್ಕಾರ ಪರಿಸರಗಳನ್ನು ಮೈಗೂಡಿಸಿಕೊಂಡು ಮುಕ್ತವಾಗಿಯೂ ವೈವಿಧ್ಯಪೂರ್ಣವಾಗಿಯೂ ಅಲ್ಲಲ್ಲಿ ಸ್ವಾತಂತ್ರ್ಯ ವಹಿಸಿ ಚಿತ್ರ ರಚನೆ ಮಾಡಿರುವುದು ಹಾಗೂ ಚಿತ್ರಗಳಿಗೆ ತಮ್ಮ ಪರಿಸರದ ವೇಷಭೂಷಣಗಳನ್ನು ತೊಡಿಸಿರುವುದು ಕರ್ನಾಟಕ ಚಿತ್ರಕಲಾ ಪರಂಪರೆಯಲ್ಲಿ ಗಮನಾರ್ಹವಾದುದಾಗಿದೆ. ಹಸ್ತಪ್ರತಿಗಳು ಸಾಹಿತ್ಯಕ ಮೌಲ್ಯದೊಂದಿಗೆ ತಮ್ಮಲ್ಲಿರುವ ಚಿತ್ರ,ವರ್ಣಚಿತ್ರ ರಚನೆಗಳಿಂದಾಗಿ ಚಾರಿತ್ರಿಕ ಸಾಂಸ್ಕೃತಿಕ ಮತ್ತು ಕಲಾ ಪರಂಪರೆಯ ಮೌಲ್ಯಗಳನ್ನು ವ್ಯಕ್ತ ಪಡಿಸಿವೆ. ಹಸ್ತಪ್ರತಿ ಚಿತ್ರಕಾರರು ತಮ್ಮ ಕಲ್ಪನೆ, ಸಂಸ್ಕಾರ ಪರಿಸರಗಳನ್ನು ಮೈಗೂಡಿಸಿಕೊಂಡು ಮುಕ್ತವಾಗಿಯೂ ವೈವಿಧ್ಯಪುರ್ಣವಾಗಿಯೂ ಅಲ್ಲಲ್ಲಿ ಸ್ವಾತಂತ್ರ್ಯ ವಹಿಸಿ ಚಿತ್ರ ರಚನೆ ಮಾಡಿರುವುದು ಹಾಗೂ ಚಿತ್ರಗಳಿಗೆ ತಮ್ಮ ಪರಿಸರದ ವೇಷಭೂಷಣಗಳನ್ನು ತೊಡಿಸಿರುವುದು ಕರ್ನಾಟಕ ಚಿತ್ರಕಲಾ ಪರಂಪರೆಯಲ್ಲಿ ಗಮನಾರ್ಹವಾದುದಾಗಿದೆ. ನಿದರ್ಶನವಾಗಿ ಮೈಸೂರು ಪರಿಸರದಲ್ಲಿ ದೊರೆತಿರುವ ನಂಜುಂಡ ಕವಿಯ ವೃಷಭೇಂದ್ರ ವಿಲಾಸ ಎಂಬ ಯಕ್ಷಗಾನ ಕೃತಿ, ಮುಮ್ಮಡಿ ಕೃಷ್ಣರಾಜ ಒಡೆಯರ ಶ್ರೀತತ್ವನಿಧಿ ಮತ್ತು ಸೌಗಂಧಿಕಾ ಪರಿಣಯ, ಹಾಗೂ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದಲ್ಲಿ ಇರುವ ಅಶ್ವಶಾಸ್ತ್ರಕ್ಕೆ ಸಂಬಂಧಿಸಿದ ಎರಡು ಸಚಿತ್ರ ಹಸ್ತಪ್ರತಿಗಳನ್ನು ಹೆಸರಿಸಬಹುದಾಗಿದೆ. ಸುತ್ತೂರು ಮಠದ ಜಗದ್ಗುರುಗಳಲ್ಲಿ ಇದ್ದಂತಹ ಬಸವಣ್ಣನವರ ಜೀವನವನ್ನು ಚಿತ್ರರೂಪದಲ್ಲಿ ಚಿತ್ರಿಸಿರುವ ವೃಷಭೇಂದ್ರ ವಿಲಾಸದ ಹಸ್ತಪ್ರತಿಯು ಒಂದೂವರೆ ಅಡಿ ಉದ್ದ ಅರ್ಧ ಅಡಿ ಅಗಲದ ಕಾಗದದ ರೂಪದಲ್ಲಿದೆ. ಪ್ರತಿಯೊಂದು ಪುಟದ ಅಂಚಿಗೆ ಹಳದಿ ಬಣ್ಣವನ್ನು ಲೇಪಿಸಿದ್ದು

ವಿಶೇಷವಾಗಿದೆ. ಪ್ರತಿಯೊಂದು ಪುಟದಲ್ಲಿಯೂ ಕಥಾ ನಿರೂಪಣೆಯ ಒಂದು ಅಥವಾ ಎರಡು ಪದ್ಯಗಳಿದ್ದು ಉಳಿದಂತೆ ಚಿತ್ರಗಳನ್ನು ಅಧಿಕವಾಗಿ ಕಾಣಬಹುದು. ಬಸವಣ್ಣನವರ ಕಥೆಯ ಆರಂಭದಿಂದ ಕೊನೆಯವರೆಗಿನ ಅಂದರೆ ಬಸವಣ್ಣನ ಮರ್ತ್ಯದ ಮಣಿಹವನ್ನು ಮುಗಿಸಿ ಕೂಡಲಸಂಗಮದಲ್ಲಿ ಐಕ್ಯವಾಗಿ ಕೈಲಾಸಕ್ಕೆ ಬರುವ ವರೆಗಿನ ಸನ್ನಿವೇಶಗಳನ್ನು ಸಾಂಕೇತಿಕವಾಗಿ ಚಿತ್ರಿಸಿದೆ. ಚಿತ್ರಕಲಾಪರಂಪರೆಯಲ್ಲಿಯೇ ಅವಿಸ್ಮರಣೀಯವಾದ ಸಾವಿರಾರು ಚಿತ್ರಗಳುಳ್ಳ ಈ ಹಸ್ತಪ್ರತಿಯು ಸುತ್ತೂರು ಮಠದ ಜಗದ್ಗುರುಗಳಿಂದಲೇ ಸಂಪಾದನೆಗೊಂಡು ಸಚಿತ್ರ ಸಮೇತ ಪ್ರಕಟಗೊಂಡಿದೆ.

ಅದೇ ರೀತಿ ಆಗಮ,ಶಿಲ್ಪ, ಜ್ಯೋತಿಷ್ಯ, ಸಂಗೀತ,ಕ್ರೀಡೆ ಇತ್ಯಾದಿ ಒಂಭತ್ತು ವಿಭಾಗಗಳನ್ನು ಹೊಂದಿರುವ ಮುಮ್ಮಡಿ ಕೃಷ್ಣರಾಜ ಒಡೆಯರ ಶ್ರೀತತ್ವನಿಧಿ ಕೃತಿಯಲ್ಲಿ ಪ್ರತಿಯೊಂದು ಪುಟದಲ್ಲಿಯ ಶ್ಲೋಕಗಳಿಗೆ ಅನುಗುಣವಾಗಿ ೧೮೮೬ ವರ್ಣಚಿತ್ರಗಳು ಹಾಗೂ ೪೫೦ ರೇಖಾಚಿತ್ರಗಳನ್ನು ರೂಪಿಸಲಾಗಿದೆ. ಈ ಕೃತಿಯ ಮೂರು ಸಚಿತ್ರ ಹಸ್ತಪ್ರತಿಗಳು ಜಿಲ್ಲೆಯಲ್ಲಿ ಉಪಲಬ್ದವಿವೆ. ಎಸ್.ಕೆ.ರಾಮಚಂದ್ರರಾವ್ ಅವರು ತಮ್ಮಲ್ಲಿದ್ದ ಹಸ್ತಪ್ರತಿಯನ್ನು ಮೂಲವಾಗಿಟ್ಟುಕೊಂಡು ಮುಮ್ಮಡಿ ಕೃಷ್ಣರಾಜ ಒಡೆಯರ ಶ್ರೀತತ್ವನಿಧಿ ಸಂಪುಟ–೧ ಎಂಬ ಹೆಸರಿನಿಂದ ಸಂಪಾದಿಸಿದ್ದಾರೆ.

ಮೈಸೂರು ವಿ.ವಿ.ಯ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದಲ್ಲಿಯ ಕ್ರಮಾಂಕ ೫೭೭ನೇ ಅಶ್ವಪರೀಕ್ಷೆ ಎಂಬ ಹಸ್ತಪ್ರತಿಯು ಚಾಮರಾಜ ಒಡೆಯರ ಕಾಲದಲ್ಲಿ ರಚಿತವಾಗಿದ್ದು ಅಶ್ವ ಪರೀಕ್ಷೆಯ ಲಕ್ಷಣಗಳ ಬಗೆಗಿನ ೨೦೩ ಉಲ್ಲೇಖಗಳಿವೆ. ಆರಂಭದ ೧೦೫ ಉಲ್ಲೇಖಗಳಿಗೆ ವರ್ಣರಂಜಿತ ಕುದುರೆಯ ಚಿತ್ರಗಳಿದ್ದು ಆ ಚಿತ್ರಗಳಿಗನುಗುಣವಾಗಿ ವಿವರಣೆಗಳನ್ನು ಕೊಡಲಾಗಿದೆ. ಅಶ್ವವೈದ್ಯ ಸಚಿತ್ರ ಎಂಬ ಇನ್ನೊಂದು ಹಸ್ತಪ್ರತಿಯು ಇಲ್ಲಿದ್ದು ( ಕ್ರ.ಸಂ.೫೭೧) ೮೪ ಪತ್ರಗಳಿವೆ. ಈ ಪತ್ರಗಳಲ್ಲಿ ಕುದುರೆಗೆ ಬರುವ ರೋಗಗಳನ್ನು ಹಾಗೂ ಇಲಾಜನ್ನು ಕುರಿತು ವೈವಿಧ್ಯಮಯವಾದ ಚಿತ್ರಗಳೊಂದಿಗೆ ವಿವರಿಸಲಾಗಿದೆ. ಹಸ್ತಪ್ರತಿಯಲ್ಲಿ ಏಕಪ್ರಕಾರವಾಗಿ ವರ್ಣ ಚಿತ್ರಗಳನ್ನು ಹಸ್ತಪ್ರತಿಗಳು ಸಾಹಿತ್ಯಕ ಮೌಲ್ಯದೊಂದಿಗೆ ತಮ್ಮಲ್ಲಿರುವ ಚಿತ್ರ,ವರ್ಣಚಿತ್ರ ರಚನೆಗಳಿಂದಾಗಿ ಚಾರಿತ್ರಿಕ ಸಾಂಸ್ಕೃತಿಕ ಮತ್ತು ಕಲಾ ಪರಂಪರೆಯ ಮೌಲ್ಯಗಳನ್ನು ವ್ಯಕ್ತ ಪಡಿಸಿವೆ.

**ಸಾಂಸ್ಕೃತಿಕ ಆಯಾಮದ ಹಿನ್ನೆಲೆಯಲ್ಲಿ ಹಸ್ತಪ್ರತಿಗಳ ಭಾಷೆಯ ಗ್ರಹಿಕೆ:**

ವಿವಿಧ ಕಾಲಘಟ್ಟಗಳಲ್ಲಿ ಸೃಷ್ಟಿಯಾಗಿರುವ ಹಸ್ತಪ್ರತಿಗಳಲ್ಲಿಯ ಬರೆಹ ಭಾಷೆಯನ್ನು ಅಧ್ಯಯನಕ್ಕೊಳ ಪಡಿಸ ಬಹುದಾಗಿದೆ. ಕನ್ನಡ ಭಾಷೆಯ ವಿಕಾಸ ಕ್ರಮವನ್ನು ಅರಿಯಲು ಸ್ವಲ್ಪ ಮಟ್ಟಿಗೆ ಹಸ್ತಪ್ರತಿಗಳ ನೆರವನ್ನು ಪಡೆದು ಕೊಳ್ಳಬಹುದು. ಒಂದು ಕಾಲದ ಅಥವಾ ಪ್ರದೇಶದ ಭಾಷೆಯ ಸ್ವರೂಪವನ್ನು ತಿಳಿಯಲು ಹಸ್ತಪ್ರತಿಗಳು ಆಕರಗಳಾಗಿ ಕೆಲಸ ಮಾಡುತ್ತವೆಂಬುದು ಪ್ರಮುಖ ಸಂಗತಿ. ಹಸ್ತಪ್ರತಿ ಲಿಪಿಕಾರರು ಒಂದು ಕಾಲಘಟ್ಟದ ಭಾಷಿಕ ಸಂಕಥನಕಾರರು. ಹಸ್ತಪ್ರತಿಗಳ ಪ್ರಸರಣ ಕ್ರಿಯೆಯಲ್ಲಿ ತೊಡಗಿಸಿಕೊಂಡಿದ್ದ ಲಿಪಿಕಾರರು ಲಿಪಿಕರಣ ಕ್ರಿಯೆಯಲ್ಲಿ ತಮ್ಮದೇ ಆದ

ದೃಷ್ಟಿಕೋನವನ್ನು ಹೊಂದಿದ್ದರು. ಬರೆಹದ ಪ್ರಕ್ರಿಯೆಯಲ್ಲಿ ಆಡುನುಡಿಯ ಜೊತೆ ಸಂಬಂಧವನ್ನು ಬೆಳಸಿಕೊಂಡಿದ್ದಾರೆ. ಗ್ರಂಥಸಂಪಾದನೆಯ ಮೂಲಕ ಪ್ರಕಟಿಸಿರುವ ಪ್ರಾಚೀನ ಕೃತಿಗಳಲ್ಲಿಯ ಭಾಷೆಯು ಹಸ್ತಪ್ರತಿಗಳ ಭಾಷೆಗಿಂತ ಸಂಪುರ್ಣವಾಗಿ ಭಿನ್ನವಾಗಿದೆ. ಗ್ರಂಥ ಸಂಪಾದನೆಯ ವಿಧಾನದಲ್ಲಿ ಹಸ್ತಪ್ರತಿಗಳಲ್ಲಿರುವ ಅನೇಕ ಭಾಷಿಕ ರೂಪಗಳನ್ನು ತಿದ್ದಿ ಗ್ರಾಂಥಿಕ ಕನ್ನಡ ಪದಗಳನ್ನು ಬಳಸಲಾಗಿದೆ. ಅವರು ತಮ್ಮಕಾಲದ ಭಾಷಾ ಬಳಕೆಯ ವಿಧಾನವನ್ನು, ಉಚ್ಚಾರಣೆಯ ಕ್ರಮವನ್ನು ಅರಿತಿದ್ದರು. ಅವರು ಅನೇಕ ಸಂದರ್ಭಗಳಲ್ಲಿ ಪ್ರತಿಯನ್ನು ನಕಲುಮಾಡುವಾಗ ಮೂಲಕೃತಿಗೆ ನಿಷ್ಠರಾಗಿರಲಿಲ್ಲ. ಮೂಲ ಕೃತಿಯ ರೂಪಗಳನ್ನು ತಮ್ಮಕಾಲದ ಉಚ್ಚಾರಣೆಗೆ ತಕ್ಕಂತೆ ಮಾರ್ಪಡಿಸಿಕೊಂಡಿರುವುದಕ್ಕೆ ಉದಾಹರಣೆಗಳು ಸಿಗುತ್ತವೆ.ಇದಕ್ಕೆ ನಿದರ್ಶನವಾಗಿ ವೀರೇಶ ಬಡಿಗೇರ ಮತ್ತು ಎಸ್.ಆರ್. ಚೆನ್ನವೀರಪ್ಪ ಅವರಿಂದ ಸಂಪಾದನೆಗೊಂಡು ಕನ್ನಡ ವಿಶ್ವವಿದ್ಯಾಲಯದ ಮೂಲಕ ಪ್ರಕಟಗೊಂಡಿರುವ ವಿಷ್ಣುಶರ್ಮನ ಪಂಚತಂತ್ರಕತೆಗಳ ಕನ್ನಡ ಸಾರಸಂಗ್ರಹ ಕೃತಿಯನ್ನು ಹೆಸರಿಸ ಬಹುದು. ಈ ಕೃತಿಯಲ್ಲಿ ಲಿಪಿಕಾರ ತನ್ನಕಾಲದ ಕನ್ನಡ ಭಾಷೆಯನ್ನು ಬಳಸಿದ್ದಾನೆ.ಉದಾಹರಣೆಗೆ ಗದ್ಯದ ಒಂದು ಭಾಗವನ್ನು ನೋಡ ಬಹುದು. ' ಯಿವು ಮೊದಲಾದ ಪುರ್ವ ಲಿಖಿತವ ಮೀರ ಕೂಡದು ಯೆಂದು। ತಾನು ಪುರ್ವದಲ್ಲಿ ಅಕ್ಕಸಾಲಿಗೆ। ವುಪಕಾರವ ಮಾಡಲು। ಅವನು ನಂನ್ನನು ಯಿಷ್ಟು ಭಂಗಕ್ಕೆ ತಂದನು। ಆದರೆ ಯೇನಾಯಿತು। ಹಿಂದೆ ನಾನು ಸರ್ಪಗೆ ವುಪಕಾರ ಮಾಡಿಯಿದ್ದೆನಲ್ಲಾ।ಅದನೆನಸಿ ನೋಡುವೆಯೆಂದು। ಆ ಸರ್ಪಂ ನೆನೆಯಲಾಗಿ। ಆ ಸರ್ಪನು ಬಂದು ವಂದನೆಯ ಮಾಡಿ। ಯಿದು ಯೇನೆಂದು ಕೇಳಲು। ಯೀ ಅಕ್ಕಸಾಲೆಯು ಮಾಡಿದ ವೃತ್ತಾಂತವಂ ಹೇಳಲು।ಯಿದು ಯೆಷ್ಟರ ಕೆಲಸವುಂಟು। ಯೀ ಶೆರೆಯ ಯರಡು ಮೂರು ದಿನದೊಳಗೆ ಪರಿಹರಿಸುತ್ತೇನೆ ಯೆಂದು ಹೇಳಿ। ಯಿತ್ತೇಂದಿತು. ಈ ಕೃತಿಯಲ್ಲಿ ಉದ್ದಕ್ಕೂ ಯಿವು, ವುಪಕಾರ, ಯೀ, ಯರಡು ಇತ್ಯಾದಿ ಆಡುಭಾಷೆಯ ಪದಗಳೇ ಕಂಡು ಬಂದಿವೆ. ಪ್ರಮಾಣೀಕೃತ ಬರೆಹದ ರೂಪಗಳು ಉಚ್ಚಾರಣೆಗೆ ತಕ್ಕಂತೆ ಈ ಕಾವ್ಯದಲ್ಲಿ ದಾಖಲಾಗಿವೆ. ಕಾವ್ಯದ ಈ ಆಡು ಭಾಷಾ ರೂಪಗಳು ಹಸ್ತಪ್ರತಿಯು ದೊರೆತಿರುವ ಬಳ್ಳಾರಿ ಪ್ರದೇಶದ ಕಡೆಯಲ್ಲಿ ಪ್ರಾದೇಶಿಕವಾಗಿ ಬಳಕೆಯಲ್ಲಿವೆ. ಹಸ್ತಪ್ರತಿಗಳಲ್ಲಿ ಕಂಡು ಬರುವ ಭಾಷಿಕ ಪ್ರಬೇಧಗಳನ್ನು ಆಯಾಕಾಲದ ಪ್ರತಿಕಾರರ ಕನ್ನಡಂಗಳ ವೈಶಿಷ್ಟ್ಯವೆಂದು ಭಾಷಿಕ ಸಂಕಥನವೆಂದೂ, ಬರವಣಿಗೆಯ ಬಹುಸಾಧ್ಯತೆಗಳ ವಿಕಾಸವೆಂದು ಭಾವಿಸಿದರೆ ಕನ್ನಡ ಬರವಣಿಗೆ ಮತ್ತು ಉಚ್ಚಾರದ ಹಲವು ವೈವಿಧ್ಯಗಳು ದೊರೆತು ಬರವಣಿಗೆಗೆ ಸಾಮಾಜಿಕ ನೆಲೆಯು ಪ್ರಾಪ್ತವಾಗುತ್ತದೆ. ಹಸ್ತಪ್ರತಿಗಳನ್ನು ವಿವಿಧ ಕಾಲಘಟ್ಟಗಳಲ್ಲಿ ಪ್ರತಿಮಾಡಿದ ಪ್ರತಿಕಾರರು ಅವರ ಕಾಲದ ಆಡುಮಾತಿನ ರೂಪಗಳನ್ನು, ಅಕ್ಷರ ರೂಪಗಳನ್ನು ವಿವಿಧ ವಿನ್ಯಾಸಗಳಿಂದ ಮೂಡಿಸಿದ್ದಾರೆ. ಆ ಅಕ್ಷರಗಳ ವಿನ್ಯಾಸ ಹಾಗೂ ಪದಗಳ ಸ್ವರೂಪಗಳ ಮೂಲಕ ಆ ಭಾಷೆಯ ಸ್ವರೂಪವನ್ನು ಅಧ್ಯಯನ ಮಾಡಿದರೆ ಆಯಾ ಕಾಲದ ಆಡುಭಾಷೆಯ ಸ್ವರೂಪವನ್ನು ಸ್ವಲ್ಪ ಮಟ್ಟಿಗೆ ಹಸ್ತಪ್ರತಿಗಳ ಬರೆಹದ ಅಧ್ಯಯನದ ಮೂಲಕ ತಿಳಿಯಬಹುದಾಗಿದೆ. ಕನ್ನಡ ಭಾಷೆಯು ಹಸ್ತಪ್ರತಿಗಳಲ್ಲಿ

ಸ್ಪಷ್ಟವಾದ ನೆಲೆಯನ್ನು ಕಂಡುಕೊಂಡಿದ್ದು, ಆಡುನುಡಿ ಮತ್ತು ಆ ಕಾಲದ ಪ್ರಮಾಣ ಭಾಷೆಯನ್ನು ಗಟ್ಟಿಯಾಗಿ ತೋರಿಸಿದೆ.

ಇಂದು ಹಸ್ತಪ್ರತಿಗಳ ಅಧ್ಯಯನಕ್ಕೆ ನೂತನವಾದ ಕಾಯಕಲ್ಪವನ್ನು ನೀಡಬೇಕಾಗಿದೆ.

೧. ನಾಡಿನ ಹಸ್ತಪ್ರತಿಗಳ ಪುಷ್ಪಿಕೆಗಳ ಆದಿ-ಅಂತ್ಯಗಳಲ್ಲಿಯ ಮಾಹಿತಿಗಳನ್ನು ಸಾಹಿತ್ಯೇತರ ಅಧ್ಯಯನದ ನೆಲೆಗಟ್ಟಿನಲ್ಲಿ ನೋಡಬೇಕಾಗಿರುವುದು ಮತ್ತು ನಾಡಿನ ಹಸ್ತಪ್ರತಿ ಲಿಪಿಕಾರರ ಸ್ವರೂಪ-ವೈವಿಧ್ಯತೆಯನ್ನು ಅಧ್ಯಯನ ಮಾಡುವುದು.

೨. ಹಸ್ತಪ್ರತಿಗಳ ಬಗೆಗಿನ ಸಾಂಸ್ಕೃತಿಕ ತಿಳಿವಳಿಕೆಗಳನ್ನು ಜಾಗೃತಗೊಳಿಸಿ ನಮ್ಮ ಸಂದರ್ಭಕ್ಕೆ ಅಳವಡಿಸಿಕೊಳ್ಳುವ ಕಾರ್ಯ ಆಗಬೇಕಾದರೆ ಇಂದು ಪಾರಂಪರಿಕ ಸಂರಕ್ಷಣಾ ಕ್ರಮಗಳಿಗಿಂತಲೂ ಮಾಹಿತಿತಂತ್ರಜ್ಞಾನದ ಮೂಲಕ ಸಮರ್ಪಕವಾಗಿ ಹಾಗೂ ಬಹುಕಾಲದ ಪ್ರಯೋಜನಕ್ಕಾಗಿ ಡಿಜಿಟಲ್ ರೂಪದಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸುವ ಕಾರ್ಯ ಕೈಗೊಳ್ಳಬೇಕಾಗಿದೆ. ಇಂದು ಎಲ್ಲಾ ಶೈಕ್ಷಣಿಕ ಶಿಸ್ತುಗಳು ವೈಜ್ಞಾನಿಕ ಸ್ವರೂಪ ಪಡೆದುಕೊಳ್ಳುತ್ತಿರುವ ಸಂದರ್ಭದಲ್ಲಿ ಹಸ್ತಪ್ರತಿಗಳಿಗೂ ಆಧುನಿಕ ಕಾಯಕಲ್ಪವನ್ನು ಕೊಡಬೇಕಾಗಿದೆ. ಹಸ್ತಪ್ರತಿಗಳನ್ನು ಗಣಕೀಕರಣಗೊಳಿಸಿದರೆ ಮಹತ್ತರವಾದ ಪ್ರಯೋಜನವಿದೆ. ಈ ರೀತಿ ಕಾರ್ಯ ನಡೆದಾಗ ಹಸ್ತಪ್ರತಿಗಳ ಬಹುಮುಖ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟಂತಾಗುತ್ತದೆ. ಹಸ್ತಪ್ರತಿಗಳ ಪರಂಪರಾಗತ ತಿಳಿವಳಿಕೆ ಮತ್ತು ಅಧ್ಯಯನಗಳ ಮುಂದುವರಿಕೆಯಾಗಿ ಆಧುನಿಕ ವಿಧಿವಿಧಾನಗಳನ್ನು ಅನ್ವಯಿಸಿಕೊಳ್ಳುವುದರ ಮೂಲಕ ಹೊಸ ದೃಷ್ಟಿಕೋನವನ್ನು ಕಂಡು ಕೊಳ್ಳಬೇಕಾಗಿದೆ.

೩. ಉಪೇಕ್ಷಿತ ಹಸ್ತಪ್ರತಿಗಳಲ್ಲಿರುವ ಮಾಹಿತಿ ಸಂಪತ್ತನ್ನು ಜನತೆಯ ಕಲ್ಯಾಣದ ಹಿನ್ನಲೆಯಲ್ಲಿ ಬಳಸಿಕೊಳ್ಳುವಂತಹ ಅನ್ವಯಿಕ ವಿಧಾನವನ್ನು ಅನುಸರಿಸುವುದು.

೪. ಇಲ್ಲಿಯವರೆಗೂ  ಹಸ್ತಪ್ರತಿಗಳ ಸಂಗ್ರಹ,ಸಂರಕ್ಷಣೆ, ಸಂಪಾದನೆ ಯಂತಹ ಪಾರಂಪರಿಕ ಕೆಲಸಗಳ ಮೂಲಕ ಬಹುಪಾಲು ಪಠ್ಯ ಕೇಂದ್ರಿತ ಸಂಪಾದನೆಯ ಪ್ರಕ್ರಿಯೆಗಳೇ ಹೆಚ್ಚಾಗಿ ನಡೆದಿರುವುದು. ಇಂದು ಈ ಪ್ರಕ್ರಿಯೆಯ ಜೊತೆಗೆ ಹಸ್ತಪ್ರತಿಗಳನ್ನು ಸಾಮಾಜಿಕ, ಸಾಂಸ್ಕೃತಿಕ ನೆಲೆಗಟ್ಟುಗಳ ಮೂಲಕವೂ ಅಧ್ಯಯನ ಕೈಗೊಳ್ಳಬೇಕಾಗಿದೆ. ಇತ್ತೀಚಿನ ಆಧುನೀಕರಣದ ಸಂದರ್ಭದಲ್ಲಿ ಅಧ್ಯಯನಗಳು ಹೊಸತನದ ಸ್ವರೂಪಕ್ಕೆ ಒಗ್ಗಿಕೊಳ್ಳುತ್ತಿರುವ ಸಂದರ್ಭದಲ್ಲಿ ಹಸ್ತಪ್ರತಿಗಳ ಅಧ್ಯಯನವೂ ಸಹ ಹೊಸತನವನ್ನು ಅಳವಡಿಸಿಕೊಳ್ಳ ಬೇಕಾಗಿದೆ.

ಹಸ್ತಪ್ರತಿ ಅಧ್ಯಯನವು ತನ್ನ ಅರಿವಿನ ಕಾಲಘಟ್ಟದಲ್ಲಿ  ತನ್ನನ್ನು ಸಕಾಲಿಕಗೊಳಿಸುವುದು ಅನಿವಾರ್ಯವಾಗಿದೆ. ಮಾಹಿತಿ ತಂತ್ರಜ್ಞಾನಯುಗದ ಸಂದರ್ಭದಲ್ಲಿ ಹಸ್ತಪ್ರತಿಗಳ ಅನ್ವಯಕತೆ ಮತ್ತು ಸಂವಹನ ಕ್ರಿಯಾ ವಿಧಾನಗಳು ಬದಲಾಗ ಬೇಕಾಗಿದೆ. ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ ಮತ್ತು ಸಂಯೋಜನೆಯಷ್ಟೇ ಅದರ ಮಾಹಿತಿಯನ್ನು ಹರಡುವುದು ಮುಖ್ಯವಾಗಿದೆ. ನಮ್ಮ ದೇಸಿ ಜ್ಞಾನ ಪರಂಪರೆಯನ್ನು ಮರುಶೋಧಿಸಿ ಆಮೂಲಕ ನಮ್ಮ ಸಂಸ್ಕೃತಿಯ ಅಸ್ತಿತ್ವವನ್ನು ಸದೃಢಪಡಿಸ ಬೇಕಾಗಿದೆ. ಹಸ್ತಪ್ರತಿ ಭಂಡಾರಗಳಲ್ಲಿ ಸಂಗ್ರಹಗೊಂಡು ಅನಾದಾರಣೆಗೆ

ಒಳಗಾಗಿರುವ ಉಪೇಕ್ಷಿತ ಹಸ್ತಪ್ರತಿಗಳೆಂಬ ಹಣೆಪಟ್ಟಿಯನ್ನು ಅಂಟಿಸಿಕೊಂಡಿರುವ ಶಾಸ್ತ್ರಕೃತಿಗಳನ್ನು ಜರೂರಾಗಿ ಸಂಪಾದಿಸಿ ಪ್ರಕಟಗೊಳಿಸುವುದರ ಮೂಲಕ ಅವುಗಳಲ್ಲಿ ಹುದುಗಿರುವ ದೇಸಿಪರಂಪರೆಯನ್ನು ಶೋಧಿಸ ಬೇಕಾಗಿದೆ. ಪ್ರಸ್ತುತ ಹಸ್ತಪ್ರತಿಗಳಲ್ಲಿರುವ ಅಪಾರ ವಿಷಯ ಸಾಮಗ್ರಿಗಳನ್ನು, ಮಾಹಿತಿಗಳನ್ನು ಆಧುನಿಕ ಚಿಂತನಾ ಕ್ರಮಕ್ಕೆ ಅಳವಡಿಸ ಬೇಕಾಗಿದೆ. ಹಸ್ತಪ್ರತಿಗಳಲ್ಲಿಯ ಮಾಹಿತಿ ಸಂಪತ್ತನ್ನು ಸಮಕಾಲೀನ ಮೌಲ್ಯಗಳೊಂದಿಗೆ ಸಮೀಕರಿಸುವುದು, ಪ್ರಾಚೀನ ನಂಬಿಕೆ, ವಿಚಾರ, ಮೌಲ್ಯಗಳನ್ನು ಸಂವಾದಕ್ಕೆ ಪ್ರೇರೇಪಿಸುವುದು, ಆಯಾ ಜ್ಞಾನಶಾಸ್ತ್ರಗಳ ಪಾರಂಪರಿಕ ಹಾಗೂ ಸಮಕಾಲೀನ ಕ್ಷೇತ್ರಗಳ ಮೌಲ್ಯ ವಿವೇಚನೆ ಮಾಡುವುದು, ಹಸ್ತಪ್ರತಿ ಸಂಪತ್ತನ್ನು ಇಂದಿನ ಬದುಕಿಗೆ ಉಪಯೋಗವಾಗುವ ರೀತಿಯಲ್ಲಿ ಅನ್ವಯಿಸುವುದು ಇತ್ಯಾದಿ ಕಾರ್ಯಗಳನ್ನು ಆಯೋಜಿಸಬೇಕಾಗಿದೆ. ಆಧುನಿಕ ವೈಜ್ಞಾನಿಕ-ವೈಚಾರಿಕ ಚಿಂತನೆಗಳ ನೆಲೆಯಲ್ಲಿ ಪಾರಂಪರಿಕ ಮೌಲ್ಯಗಳನ್ನು ಅದ್ದಿ ತೆಗೆದು ಅವುಗಳ ಸಾರ್ವತ್ರಿಕ ಮಹತ್ವಗಳನ್ನು ದಾಖಲಿಸುವುದರ ಮೂಲಕ ಅವುಗಳ ಪರಿಚಯವಿಲ್ಲದ ಆಧುನಿಕ ಸಮಾಜಕ್ಕೆ ಹಸ್ತಪ್ರತಿಗಳ ಮಹತ್ವದ ಬಗೆಗೆ ಅರಿವು ಮೂಡಿಸ ಬೇಕಾಗಿದೆ. ಹಸ್ತಪ್ರತಿಗಳಲ್ಲಿ ಅಡಗಿರುವ ಮಾಹಿತಿ ಕಣಜವನ್ನು ಹಾಗೂ ಸಾಂಸ್ಕೃತಿಕ ಸಂಪತ್ತನ್ನು ವಿವಿಧ ಮಗ್ಗುಲಗಳಿಂದ ಅಧ್ಯಯನ ಮಾಡಿ ಅವುಗಳ ಶಾಸ್ತ್ರೀಯ ಜ್ಞಾನಕ್ಷೇತ್ರದ ಮಹತ್ವವನ್ನು ಆಧುನಿಕ ಜಗತ್ತಿಗೆ ಪರಿಚಯಿಸ ಬೇಕಾಗಿದೆ.

ಗ್ರಂಥ ಋಣ

೧.ಹಸ್ತಪ್ರತಿ ಅಧ್ಯಯನದ ಹೊಸ ಸಾಧ್ಯತೆಗಳು ಸಂ: ವೀರೇಶ ಬಡಿಗೇರ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೫

೨. ಮಣಿಹ ಸಂ: ಎಂ.ವಿ.ಸೀತಾರಾಮಯ್ಯ
ಬಿ.ಎಂ.ಶ್ರೀ. ಪ್ರತಿಷ್ಠಾನ, ಬೆಂಗಳೂರು. ೧೯೭೦

೩. ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು ಸಂ: ಎಸ್.ಶಿವಣ್ಣ
ವೀರಶೈವ ಅಧ್ಯಯನ ಸಂಸ್ಥೆ, ಗದಗ ೧೯೯೪

೪. ಸಿ.ನಾಗಭೂಷಣ. ಸಾಹಿತ್ಯ-ಸಂಸ್ಕೃತಿ ಅನ್ವೇಷಣೆ
ಸಿ.ವಿ.ಜಿ.ಪಬ್ಲಿಕೇಷನ್, ಬೆಂಗಳೂರು, ೨೦೦೭

೫. ಎಸ್.ಎಸ್.ಅಂಗಡಿ. ಕನ್ನಡ ಹಸ್ತಪ್ರತಿ ರಚನೆ ಭಾಷಿಕ ವಿವೇಚನೆ
ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ ಹಂಪಿ.೨೦೦೬

೬, ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ
ವೀರಶೈವ ಅಧ್ಯಯನ ವೇದಿಕೆ, ಮುಧೋಳ,೧೯೯೨

೭. ನಾ. ಗೀತಾಚಾರ್ಯ:ಹಸ್ತಪ್ರತಿ ಅಧ್ಯಯನ ಶಾಸ್ತ್ರ
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ. ಬೆಂಗಳೂರು೨೦೦೯

೮. ವೀರೇಶ ಬಡಿಗೇರ: ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬

# ಪ್ರೇಹರಾ ಎನ್ನುವುದು ಏನು ? ಮತ್ತು ಯಾವುದು ?

ಡಾ. ಬಿ. ರಾಜಶೇಖರಪ್ಪ

ಕರ್ನಾಟಕ ಇತಿಹಾಸದಲ್ಲಿ ಕದಂಬ ರಾಜವಂಶದ ಸ್ಥಾಪಕನಾದ ಮಯೂರವರ್ಮನ ಸಂಬಂಧದಲ್ಲಿ ಒಂದು ಗಡಿಯನ್ನು ಸೂಚಿಸಲು ಬಳಕೆಯಾಗಿರುವ ಹೆಸರು 'ಪ್ರೇಹರಾ'. ಅದು ಕ್ರಿ.ಶ. ೫ನೇ ಶತಮಾನದ ತಾಳಗುಂದ ಶಾಸನದಲ್ಲಿ ೧ ಬರುತ್ತದೆ. ಬಂಡುಕೋರನಾಗಿದ್ದ ಮಯೂರವರ್ಮನನ್ನು ಹತ್ತಿಕ್ಕಲು ಪಲ್ಲವ ದೊರೆಗಳ ಪ್ರಯತ್ನಗಳೆಲ್ಲಾ ವಿಫಲವಾದಾಗ, ಅವರು ಅವನನ್ನು 'ಅಪರಾರ್ಣವ' ೨ ದಿಂದ 'ಪ್ರೇಹರಾ'ದ ವರೆಗೆ ವಿಸ್ತರಿಸಿರುವ ಪ್ರಾಂತ್ಯದ ರಾಜನನ್ನಾಗಿ ಒಪ್ಪಿಕೊಂಡು ಎಂದು ಆ ಶಾಸನ ಹೇಳುತ್ತದೆ. ಹೀಗೆ ಪ್ರೇಹರಾ ಎಂಬುದು ಅಂದಿನ ಕದಂಬ ಸಾಮ್ರಾಜ್ಯದ ಒಂದು ಗಡಿಯಾಗಿ ಸೂಚಿತವಾಗಿದೆ.

ಈ ಶಬ್ದ ನಾನಾ ರೀತಿಯಲ್ಲಿ ಓದಲ್ಪಟ್ಟಿದೆ ಮತ್ತು ವ್ಯಾಖ್ಯಾನಿಸಲ್ಪಟ್ಟಿದೆ. ಬಿ.ಎಲ್. ರೈಸ್ ಅವರು ತಾಳಗುಂದ ಶಾಸನವನ್ನು ಮೊತ್ತಮೊದಲಿಗೆ ಪ್ರಕಟಿಸಿದಾಗ ಇದನ್ನು 'ಪ್ರೇಮಾರ' ೩ ಎಂದು ಓದಿದ್ದರು. ಎಫ್. ಕೀಲ್‌ಹಾರ್ನ್ ಅವರು ಈ ಶಾಸನದ ಪರಿಷ್ಕೃತ ಆವೃತ್ತಿಯಲ್ಲಿ ಇದನ್ನು 'ಪ್ರೇಹರಾ' ಅಥವಾ 'ಪ್ರೇಹರ'೪ ಎಂದು ತಿದ್ದಿದರು. ತರುವಾಯದಲ್ಲಿ ಹಲವು ವಿದ್ವಾಂಸರು ಇದಕ್ಕೆ ತಮ್ಮದೇ ಆದ ಬೇರೆ ಬೇರೆ ಪಾಠಗಳನ್ನು ಸೂಚಿಸಿರುತ್ತಾರೆ. ೫ ಹೀಗೆ ಇದಕ್ಕೆ ಪ್ರೇಮಾರ, ಪ್ರಮಾರ, ಪ್ರೇಹಾರ, ಪ್ರೇಹರ, ಪ್ರೇಹಾರ, ಪ್ರೆಹರಾ ಮುಂತಾಗಿ ವಿಧವಿಧವಾದ ರೂಪಗಳು ಹೇಳಲ್ಪಟ್ಟಿದೆ.

ಶಾಸನದಲ್ಲಿ ಬರುವ 'ಪ್ರೇಹರಾಂತಂ' ಎಂಬ ಸಮಾಸ ಪದದಲ್ಲಿ ಕಡೆಯಲ್ಲಿರುವ 'ಅಂತಂ' ಎಂಬ ಭಾಗವನ್ನು ಬಿಟ್ಟರೆ, ಮೊದಲಿಗೆ ಪ್ರೊ. ಕೀಲ್‌ಹಾರ್ನ್ ಅವರು ಸೂಚಿಸಿರುವಂತೆ 'ಪ್ರೇಹರ' ಅಥವಾ 'ಪ್ರೇಹರಾ' ಎಂಬ ಎರಡು ರೂಪಗಳು ಮಾತ್ರ ಸಾಧ್ಯವಾಗುತ್ತವೆ. ಈ ಎರಡು ರೂಪಗಳಲ್ಲಿ ಮುಂದೆ ವಿವರಿಸುವ ನಿರ್ದಿಷ್ಟ ಕಾರಣಗಳಿಂದಾಗಿ 'ಪ್ರೇಹರಾ' ಎಂಬುದೇ ಉಚಿತ ರೂಪ ಎಂದೆನಿಸುತ್ತದೆ.

ಶಾಸನದಲ್ಲಿ ಹೇಳಿರುವ ಅಪರಾರ್ಣವ ಎಂಬುದು, ಕದಂಬ ಸಾಮ್ರಾಜ್ಯದ ಪಶ್ಚಿಮದ ಗಡಿ ಎನಿಸಿದ ಕರಾವಳಿ ರೇಖೆಯನ್ನು ಹೊಂದಿದ ಪಶ್ಚಿಮ ಸಮುದ್ರವೇ ಆಗಿದೆ. ಹಾಗಿರುವಾಗ ಪ್ರೇಹರಾ ಎಂಬುದು ಕದಂಬ ರಾಜ್ಯದ ಪೂರ್ವದ ಗಡಿ ಎಂದು ಸ್ವಯಂಸ್ಪಷ್ಟವಾಗಿದೆ. ಈ ಪ್ರೇಹರಾ ಎಂಬುದು ಒಂದು ದೇಶ, ಒಂದು ನದಿ, ಒಂದು ಪರ್ವತದ ಸಾಲು ಮುಂತಾಗಿ ಭಾವಿಸಿಕೊಂಡು ಅದನ್ನು ಇಂಥದೇ ಎಂದು ಗುರುತಿಸುವ ಅನೇಕ ಪ್ರಯತ್ನಗಳು ನಡೆದಿರುತ್ತವೆ.

ಬಿ.ಎಸ್. ರೈಸ್ ಅವರು ಪ್ರೆಮಾರ ಎಂಬುದು, ಪರಮಾರ ಎಂಬುದಕ್ಕೆ ಸಾದೃಶ್ಯವಿರುವ ಪದವಾದ್ದರಿಂದ ಅದು ಪರಮಾರ ದೊರೆಗಳು ಆಳುತ್ತಿದ್ದ ಮಾಳವ ದೇಶ ಇರಬೇಕೆಂದು ಸೂಚಿಸಿದ್ದಾರೆ.೬

ತರುವಾಯ ಎಫ್. ಕೀಲ್‌ಹಾರ್ನ್ ಅವರು ಪ್ರೆಮಾರ ಪಾಠವನ್ನು (ಪದವನ್ನು) ಪ್ರೇಹರ ಅಥವಾ ಪ್ರೇಹರಾ ಎಂದು ತಿದ್ದಿದ ಮೇಲೆ ಅದು ಒಂದು ನದಿ ಎಂದು ಭಾವಿಸಿ, ಬಹುಶಃ ಅದು ತುಂಗಭದ್ರಾ ನದಿ ಎಂದು ಸೂಚಿಸಿದ್ದಾರೆ. ೭

ಎಂ.ಎಚ್. ಕೃಷ್ಣ ಅವರ ದೃಷ್ಟಿಯಲ್ಲಿ ಅವರ ದೃಷ್ಟಿಯಲ್ಲಿ ಪ್ರೇಹರಪ್ರ ಬಹುಶಃ ಶ್ರೀಶೈಲಂ ಹತ್ತಿರದ ಪೂರ್ವ ಘಟ್ಟಗಳಲ್ಲಿ ಯಾವುದೋ ಒಂದು ಭಾಗ ಅಥವಾ ಪಾಲಾರ್ ನದಿ. ೮ ಕೆ.ಎಸ್. ವೈದ್ಯನಾಥನ್ ಅವರು ಅದು ಹಗರಿ (ವೇದಾವತಿ) ೯ ನದಿ ಇರಬಹುದೆಂದು ತೋರಿಸಲು ಯತ್ನಿಸಿದ್ದಾರೆ. ಹುಲ್ಲೂರು ಶ್ರೀನಿವಾಸ ಜೋಯಿಸರು ಅದು ಶ್ರೀಶೈಲ ಪರ್ವತ ಅಥವಾ ವೇದಾವತಿನದಿ ಎಂದು ಅಭಿಪ್ರಾಯಿಸಿರುತ್ತಾರೆ.೧೦

ಪ್ರೊ. ಕೆ.ಎ. ನೀಲಕಂಠಶಾಸ್ತ್ರಿ ಅವರು ಅದು ತುಂಗಭದ್ರಾ ಇಲ್ಲವೇ ಮಲಪ್ರಭಾ ನದಿ ಇರಬೇಕೆಂದು ಭಾವಿಸುತ್ತಾರೆ. ೧೧ ಡಿ.ಸಿ. ಸರ್ಕಾರ್ ಅವರು ಇದನ್ನು ಒಂದು ನದಿ ಎಂದು ಅಂಗೀಕರಿಸಲು ಹಿಂದಿಗೆದಿದ್ದರಾದರು೧೨ ಅನಂತರದಲ್ಲಿ ಅದು ಮಲಪ್ರಭಾ ನದಿ ಇರಬೇಕೆಂದು ಪರಿಗಣಿಸಿರುತ್ತಾರೆ. ೧೩ ಇನ್ನು ಕೆಲವು ವಿದ್ವಾಂಸರು ತರುವಾಯದ ಕಾಲದಲ್ಲಿ ಅದು ಘಟಪ್ರಭಾ ನದಿ ಎಂಬ ಸೇರ್ಪಡೆ ಮಾಡಿದರು.೧೪ ಎಸ್. ಶ್ರೀಕಂಠಶಾಸ್ತ್ರೀ ಯವರು ಅನುಮಾನಪಡುತ್ತಲೇ ಅದು ತುಂಗಭದ್ರಾ ನದಿ ಇರಬಹುದೆಂದು೧೫ ಮೊದಲಿಗೆ ಗುರುತಿಸಿದರಾದರೂ ಅನಂತರದಲ್ಲಿ ಅದು ಮಲಪ್ರಭಾ ಎಂದೂ೧೬ ಮತ್ತೂ ಅನಂತರದಲ್ಲಿ ಅದು ಕೃಷ್ಣಾ ನದಿ ಎಂದೂ೧೭ ಗುರುತಿಸಿದರು. ಕೃಷ್ಣಾನದಿಯನ್ನು ಶಾಸನಗಳಲ್ಲಿ ಪೇರಾರು ಎಂದು ಪೆರ್ದೊರೆ ಎಂದು೧೮ ಕರೆಯಲಾಗಿರುವುದರಿಂದ ಎನ್.ಲಕ್ಷ್ಮೀನಾರಾಯಣರಾವ್ ಅವರು ಅದು ಕೃಷ್ಣಾ ನದಿಯೇ ಇರಬೇಕೆಂದು ಅಭಿಪ್ರಾಯಪಟ್ಟರು. ಬಾ.ರಾ. ಗೋಪಾಲ್ ಮತ್ತು ಇತರರು ಅದು ಘಟಪ್ರಭಾ ನದಿಯೆಂದು ಮೊದಲಿಗೆ ಗುರುತಿಸಿದ್ದವರು ಆಮೇಲೆ ಅದು ಮಲಪ್ರಭಾ ನದಿಯೆಂದು ಪರಿಗಣಿಸಿದರು.೧೯

ಹೀಗೆ ಪ್ರೇಹರಾ ಎಂಬುದನ್ನು ಗುರುತಿಸುವಲ್ಲಿ ಅನೇಕ ಭಿನ್ನ ಅಭಿಪ್ರಾಯಗಳು ಬಂದುವು; ಗೊಂದಲವನ್ನೂ ಸೃಷ್ಟಿಸಿದವು. ಈಗ ಹೇಳಬೇಕಾದ ಮಾತೆಂದರೆ ಪ್ರೇಹರಾ ಎಂಬುದು ಹಗರಿ ಎಂದು ಎಂದು ಬಂದಿರುವ ಅಭಿಪ್ರಾಯವೊಂದು ತುಂಬಾ ಗಣನೀಯವೆನಿಸುತ್ತದೆ.೨೦ ಏಕೆಂದರೆ ಭೌಗೋಳಿಕ ಅಂಶಗಳ ಮೇಲೆ ಅದರ ಪರಿಗಣನೆ ನಿಂತಿದೆ. ಆದರೆ ಅದಕ್ಕೆ ಭಾಷಾಶಾಸ್ತ್ರೀಯವಾದ ವಿವರಣೆ ಮಾತ್ರ ಕೊಡಲ್ಪಟ್ಟಿರುವುದಿಲ್ಲ. ಇಲ್ಲಿ ಪ್ರೇಹರಾ ಎಂಬುದು ಏನು ಎಂಬುದರ ವಿವಿಧ ಅಭಿಪ್ರಾಯಗಳ ಪುನರ್ ಪರಿಶೀಲನೆ ಮತ್ತು ಆ ಶಬ್ದದ ಭಾಷಾಶಾಸ್ತ್ರೀಯ ವಿವರಣೆ ಇವಕ್ಕೆ ಪ್ರಯತ್ನಿಸಲಾಗಿದೆ.

ಒಂದು ಪ್ರಾಂತ ಅಥವಾ ದೇಶದ ಗಡಿಗಳನ್ನು ಹೇಳುವಾಗ ಆ ಗಡಿಗಳು ಪೂರ್ವ, ಪಶ್ಚಿಮ ರೇಖೆಗಳ ಮಧ್ಯದಲ್ಲಿ ಅಥವಾ ದಕ್ಷಿಣ–ಉತ್ತರ ರೇಖೆಗಳ ಮಧ್ಯದಲ್ಲಿ ಇರುವಂತೆ ಹೇಳುವುದು ಪದ್ಧತಿ. ಉದಾ :

೧) ಆಸೇತು ಹಿಮಾಚಲ ಪರ್ಯಂತಂ.[೨೧]

೨) ಪೂರ್ವಾಪರ ಜಲನಿಧಿ ವೇಲಾವಲಗ್ನಾ.[೨೨]

೩) ಕಾವೇರಿಯಿಂದಮಾ ಗೋದಾವರಿವರಂ[೨೩]

ಈ ಹಿನ್ನೆಲೆಯಲ್ಲಿ ನೋಡಿದಾಗ ಅಪರಾರ್ಣವವು (ಪಶ್ಚಿಮ ಸಮುದ್ರ) ಪಶ್ಚಿಮ ಬದಿಯಲ್ಲಿ ಒಂದು ನೇರವಾದ ಗಡಿರೇಖೆಯಂತೆ ತೋರಿಬರುತ್ತದೆ. ಹಾಗೆಯೇ ಅದಕ್ಕೆ ಅನುಗುಣವಾಗಿ ಪೂರ್ವ ಬದಿಯಲ್ಲೂ ಹಾಗೆಯೇ ನೇರ ರೇಖೆಯ ರೀತಿಯಲ್ಲಿ ಒಂದು ಕರಾವಳಿ ರೇಖೆಯಾಗಲಿ ಅಥವಾ ಸುದೀರ್ಘವಾದ ಪರ್ವತ ಶ್ರೇಣಿಯಾಗಲಿ ಅಥವಾ ನದಿಯಾಗಲಿ ಇರಬೇಕಾಗುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಪ್ರೇಹರಾ ಎಂಬುದು ಕರಾವಳಿ ರೇಖೆಯೂ ಅಲ್ಲ ; ಹಾಗೆಯೇ ದೀರ್ಘ ಪರ್ವತ ಶ್ರೇಣಿಯೂ ಅಲ್ಲ. ಏಕೆಂದರೆ ಪೂರ್ವದಲ್ಲಿ ಆ ಹೆಸರಿನಿಂದ ಕರೆದ ಕರಾವಳಿ ರೇಖೆಯಾಗಲಿ ದೀರ್ಘ ಪರ್ವತ ಪಂಕ್ತಿಯಾಗಲಿ ಇಲ್ಲ.

ಪಾಲಾರ್ ನದಿ ಸ್ವಲ್ಪಮಟ್ಟಿಗೆ ಸ್ವಲ್ಪಮಟ್ಟಿಗೆ ದಕ್ಷಿಣೋತ್ತರವಾಗಿ ಹರಿಯುವ ನದಿಯಾಗಿದ್ದರೂ ಅದು ಪೂರ್ವ ದಿಕ್ಕಿನ ಗಡಿ ರೇಖೆಯಂತೆ ಗುರ್ತಿಸುವ ಸ್ಥಿತಿಯಲ್ಲಿ (ಆಕಾರದಲ್ಲಿ) ಕಾಣುವುದಿಲ್ಲ. ಅದಲ್ಲದೆ ಆ ನದಿಗೆ ಪ್ರೇಹರಾ ಎಂಬ ಹೆಸರನ್ನು ಎಲ್ಲೂ ಬಳಸಿರುವುದಿಲ್ಲ. ಇನ್ನು ಉಳಿದಂತೆ ತುಂಗಭದ್ರ, ಮಲಪ್ರಭಾ, ಘಟಪ್ರಭಾ ಮತ್ತು ಕೃಷ್ಣಾ ನದಿಗಳು ಹರಿಯುವುದು ಪಶ್ಚಿಮ ಕರಾವಳಿ ರೇಖೆಗೆ ಲಂಬಕೋನದ ದಿಕ್ಕಿನಲ್ಲಿ. ಆದ್ದರಿಂದ ಅವು ಕೂಡ ಗಡಿರೇಖೆಯ ರೀತಿಯಲ್ಲಿ ಗುರುತಿಸುವ (ಆಕಾರದಲ್ಲಿ) ಸ್ಥಿತಿಯಲ್ಲಿ ಇಲ್ಲ.

ಹಗರಿ ಅಥವಾ ವೇದಾವತಿ ನದಿ (ಪಶ್ಚಿಮ ಘಟ್ಟಗಳಲ್ಲಿ ಹುಟ್ಟುವ ವೇದಾ ಮತ್ತು ಆವತಿ ನದಿಗಳ ಸಮ್ಮಿಲನ) ಮೊದಲಿಗೆ ಸ್ವಲ್ಪ ದೂರ ಈಶಾನ್ಯ ದಿಕ್ಕಿಗೆ ಹರಿದು ಆಮೇಲೆ ದಕ್ಷಿಣೋತ್ತರವಾಗಿ ಸಾಕಷ್ಟು ದೀರ್ಘವಾಗಿ ಹರಿದು ಕಡೆಯಲ್ಲಿ ತುಂಗಭದ್ರಾ ನದಿಯನ್ನು ಕೂಡುತ್ತದೆ.[೨೪] ಹೀಗೆ ಆ ನದಿ ದೊಡ್ಡ ಪ್ರಾಂತ್ಯವೊಂದರ ಪೂರ್ವದ ಮತ್ತು ದಕ್ಷಿಣದ ಗಡಿರೇಖೆಯಾಗಿ ಪರಿಣಮಿಸಿದೆ. ಪ್ರೇಹರಾ ಮತ್ತು ಅದರ ಇತ್ತೀಚಿನ ಆಧುನಿಕ ರೂಪವಾದ ಹಗರಿ ಎಂಬ ಎರಡು ಶಬ್ದಗಳ ನಿಷ್ಪತ್ತಿ ಅಧ್ಯಯನ ಕೂಡ ಇದಕ್ಕೆ ಪೂರಕವಾಗಿದೆ. ಹಾಗೂ ಪಶ್ಚಿಮ ಸಮುದ್ರದ ಕರಾವಳಿ ರೇಖೆಗೆ ಲಂಬಕೋನ ದಿಕ್ಕಿನಲ್ಲಿ ಹರಿಯದೇ ಅದಕ್ಕೆ ಸಮಾನಾಂತರವಾಗಿ, (ಪ್ಯಾರಾಲಾಲ್) ದಕ್ಷಿಣೋತ್ತರವಾಗಿ ಹರಿದು ಪೂರ್ವದ ಗಡಿ ರೇಖೆಯಾಗಿ ಗುರುತಿಸಬಹುದಾದ ರೀತಿಯ ಇನ್ನೊಂದು ನದಿ ದಕ್ಷಿಣ ಭಾರತದ ಮಧ್ಯದಲ್ಲಿ ಇದನ್ನು ಬಿಟ್ಟರೆ ಬೇರಾವುದೂ ಇಲ್ಲ. ಆದರಿಂದ ಈ ಭೌಗೋಳಿಕ ಅಂಶ ಕದಂಬ ರಾಜ್ಯದ ಗಡಿಗಳನ್ನು ಗುರುತಿಸುವಲ್ಲಿ ತುಂಬಾ ಮುಖ್ಯವೆನಿಸುತ್ತದೆ.

ಹತ್ತು ಮತ್ತು ಹನ್ನೆರಡನೇ ಶತಮಾನದ ಶಾಸನಗಳಲ್ಲಿ ಹಗರಿಯ [illegible] ಹೆಸರಾಗಿ ಪಗರೆ ಎಂಬ ಮಾತು ಬರುತ್ತದೆ.[೨೫] ಇದರ ಮೂಡಣ [illegible] ಪ್ರದೇಶವನ್ನು ಮೂಡಪಗರೆ ಎಂದು, ಪಶ್ಚಿಮ ಪ್ರದೇಶವನ್ನು ಪಡುವಗರೆ (ಪಡುಪಗರೆ)

ಎಂದು, ಕರೆದಿರುವುದನ್ನು ಕಾಣುತ್ತೇವೆ. ಹೀಗೆ ಪಗರೆ ನದಿಯ ಹೆಸರು ಹಿಂದಿನ ಕಾಲದಲ್ಲಿ ಪ್ರಾಂತಗಳನ್ನು ಹೆಸರಿಸುವಲ್ಲಿ ಕೂಡ ಸಾಕಷ್ಟು ಮುಖ್ಯ ಪಾತ್ರ ವಹಿಸಿತ್ತೆಂದು ಸ್ಪಷ್ಟವಾಗಿದೆ.

ತಾಳಗುಂದದ ಶಾಸನದಲ್ಲಿ ಬರುವ ಸಮಾಸ ಪದ 'ಪ್ರೇಹರಾಂತಂ' ಎಂಬುದರಲ್ಲಿರುವ 'ಪ್ರೇಹರಾ' ಒಂದು ಸಂಸ್ಕೃತ ಪದ ಎಂದು ಸ್ವಾಭಾವಿಕವಾಗಿ ಅನ್ನಿಸುತ್ತದೆ. ಆದರೆ ಸಂಸ್ಕೃತದಲ್ಲಿ ಆ ರೀತಿಯ ಪದ ಇಲ್ಲ. ಹಾಗಾಗಿ ಅದಕ್ಕೆ ಏನೂ ಅರ್ಥವನ್ನು ಹಚ್ಚಲು ಬರುವುದಿಲ್ಲ. 'ಪ್ರೇಹರಾ' ಎಂಬುದನ್ನು ಪದವಿಭಾಗ ಮಡಿದಾಗ ಅದು 'ಪ್ರ+ಇಹರಾ' ಅಥವಾ 'ಪ್ರ+ಈಹರಾ' ಎಂದು ಬಿಡಿಸಿಕೊಳ್ಳಬೇಕಾಗುತ್ತದೆ. ಇಲ್ಲಿ ಪ್ರ ಎಂಬುದು ಸಂಸ್ಕೃತದಲ್ಲಿ ಸರ್ವೇಸಾಧಾರಣವಾಗಿ ಬಳಕೆಯಾಗುವ ಒಂದು ಉಪಸರ್ಗ. ಆದರೆ ಅದಕ್ಕೆ ಸೇರುವ 'ಇಹರಾ' ಅಥವಾ 'ಈಹರಾ' ಎಂಬುವು ಸಂಸ್ಕೃತ ಶಬ್ದಗಳಲ್ಲ. ಹಾಗಾಗಿ ಅವು ಕೂಡ ಏನೂ ಅರ್ಥ ಕೊಡುವುದಿಲ್ಲ. ಇಲ್ಲಿ ಛಂದಸ್ಸಿಗೆ ಹೊಂದಿಕೆಯಾಗುವಂತೆ 'ಪ್ರ' ಎಂಬುದರ ಬದಲಿಗೆ 'ಪ್ರೇ' ಎಂಬ ದೀರ್ಘಾಕ್ಷರವನ್ನು ಶಾಸನಕಾರ ಬಳಸಿರುವುದಾಗಿ ಕಾಣುತ್ತದೆ. ೨೬ ಹಾಗಾಗಿ ಇಲ್ಲಿ 'ಇಹರಾ' ಮತ್ತು 'ಈಹರಾ' ಎಂಬುವುಗಳನ್ನು ಬಳಸದೆ ಕೇವಲ 'ಹರಾ' ಎಂಬುದನ್ನು ಬಳಸಿರಬೇಕೆನಿಸುತ್ತದೆ. ಆಗ ಉಪಸರ್ಗ 'ಪ್ರ' ಸೇರಿ ಆ ಶಬ್ದ 'ಪ್ರಹರಾ' ಎಂದಾಗುತ್ತದೆ. ಇದು ಸಂಸ್ಕೃತದಲ್ಲಿ ವಿಶೇಷವಾಗಿ ಪ್ರವಹಿಸುವುದು ಅಥವಾ ವಿಶೇಷವಾಗಿ ಸೆಳೆದೊಯ್ಯುವುದು ಎಂಬ ಅರ್ಥ ಕೊಡುತ್ತದೆ.

ಹೀಗಾಗಿ ಅಲ್ಲಿ ಇರಬೇಕಾದ ಶಬ್ದ 'ಪ್ರೇಹರಾ' ಎಂಬುದಲ್ಲ 'ಪ್ರಹರಾ' ಎಂದು ತೆಗೆದುಕೊಳ್ಳಬೇಕಾಗುತ್ತದೆ. ಇದೇ ಮುಂದೆ ಪಗರೆ, ಹಗರೆ ಮತ್ತು ಹಗರಿ ಎಂಬ ರೂಪಾಂತರವನ್ನು ಹೊಂದಿರುವುದಾಗಿ ಕಾಣುತ್ತದೆ. ಇದನ್ನು ಈ ಮುಂದಿನಂತೆ ಭಾಷಾವೈಜ್ಞಾನಿಕವಾಗಿ ವಿವರಿಸಬಹುದು. ಭಾರತದಲ್ಲಿ ಇರುವ ಅನೇಕ ನದಿಗಳು ಆಕಾರಾಂತವಾದ ಸಂಸ್ಕೃತ ಹೆಸರುಗಳನ್ನೇ ಹೊಂದಿವೆ. ಉದಾ : ಗಂಗಾ, ಯಮುನಾ, ನರ್ಮದಾ, ವರದಾ, ಕೃಷ್ಣಾ, ಭೀಮಾ, ತುಂಗಭದ್ರಾ ಇತ್ಯಾದಿ. ಹಾಗೆಯೇ ಪ್ರಹರಾ ಎಂಬುದು ಕೂಡ ಆಕಾರಾಂತವಾದ ಒಂದು ಹೆಸರಾಗಿದೆ.

ಹೆಸರುಗಳಲ್ಲಿರುವ ದೀರ್ಘ ಆಕಾರಾಂತವು ಹ್ರಸ್ವ ಎಕಾರಾಂತವಾಗಿ ಕನ್ನಡದಲ್ಲಿ ಬಳಕೆಯಾಗುತ್ತದೆ. ಉದಾ : ಗಂಗಾ  ಗಂಗೆ, ಯಮುನಾ  ಯಮುನೆ – ನರ್ಮದಾ – ನರ್ಮದೆ ಇತ್ಯಾದಿ ಹಾಗೆಯೇ 'ಪ್ರಹರಾ' ಎಂಬುದು 'ಪ್ರಹರೆ' ಎಂದಾಗುತ್ತದೆ.

ಸಂಸ್ಕೃತದ ಉಪಸರ್ಗವಾದ ಪ್ರ ಎಂಬುದು ಕನ್ನಡದಲ್ಲಿ ಮಧ್ಯದ ರೇಫವನ್ನು ಕಳೆದುಕೊಂಡು 'ಪ' ಎಂಬ ರೂಪವನ್ನು ಪಡೆಯುತ್ತದೆ. ಉದಾ :

ಪ್ರಕರಣ > ಪಗರಣ > (ಹಗರಣ)

ಪ್ರಗ್ರಹ > ಪಗ್ಗ > ಹಗ್ಗ

ಪ್ರವಾಳ > ಪವಳ > ಹವಳ

ಪ್ರಸಾದ > ಪಸಾದ > ಹಸಾದ

ಪ್ರಯಾಣ > ಪಯಣ

ಪ್ರತಿಹಾರಿ > ಪಡಿಹಾರಿ

ಹೀಗೆ ಆದಂತೆ 'ಪ್ರಹರೆ' ಎಂಬುದು 'ಪಹರೆ' ಎಂದಾಗುತ್ತದೆ. ಕಾವಲು, ಕಾವಲು ಕಾಯುವವ ಎಂಬ ಅರ್ಥದ 'ಪಹರೆ' ಎಂಬ ಇನ್ನೊಂದು ಶಬ್ದವು ಸಹ ಕನ್ನಡದಲ್ಲಿ ಇದೆ. ಇವೆರಡೂ ಬೇರೆ ಬೇರೆ ಶಬ್ದಗಳೇ ಎಂಬುದನ್ನು ಗಮನಿಸಬೇಕು.

ಕೆಲವು ಸಂಸ್ಕೃತ ಶಬ್ದಗಳಲ್ಲಿ ಇರುವ ಹ ಕಾರವು ಕನ್ನಡ ಮತ್ತು ಇತರ ದ್ರಾವಿಡ ಭಾಷೆಗಳಲ್ಲಿ ಗ ಕಾರವಾಗಿ ಮಾರ್ಪಡುತ್ತದೆ. ಉದಾ :

ಸಿಂಹ > ಸಿಂಗ

ಮೋಹರ > ಮೊಗ್ಗರ

ದಾಹಂ > ದಾಗಂ > ಧಗೆ

ಮಹೇಂದ್ರ > ಮಗೇಂದಿರ

ಇದೇ ರೀತಿ 'ಪಹರೆ' ಎಂಬುದು 'ಪಗರೆ' ಆಗಿರಬೇಕು.

ಮುಂದೆ ಹಳಗನ್ನಡ ಶಬ್ದಗಳಲ್ಲಿ ಹಲವೆಡೆ ಬರುವ 'ಪ' ಎಂಬುದು ನಡುಗನ್ನಡಕ್ಕೆ ಬರುವಾಗ 'ಹ' ಎಂದಾಗುತ್ತದೆ. ಉದಾ :

ಪಗೆ > ಹಗೆ

ಪಾಲು > ಹಾಲು

ಪಿರಿದು > ಹಿರಿದು

ಪುಲಿ > ಹುಲಿ

ಪೆರ್ಗಡೆ > ಹೆಗ್ಗಡೆ

ಪೊಗೆ > ಹೊಗೆ

ಪೋಗು > ಹೋಗು

ಇದೇ ರೀತಿ 'ಪಗರೆ' ಎಂಬ ಶಬ್ದದಲ್ಲಿಯ ಪಕಾರ – ಹಕಾರವಾಗಿ, ಆ 'ಪಗರೆ' ಎಂಬುದು 'ಹಗರೆ'ಯಾಗಿ ಅದೇ ಮುಂದಿನ ಕಾಲದಲ್ಲಿ 'ಹಗರಿ' ಎಂಬ ರೂಪವನ್ನು ಪಡೆದಿದೆ ಮತ್ತು ಈಗಲೂ ಪ್ರಚಲಿತದಲ್ಲಿದೆ.

ಈಗ ನದಿಯ ಹೆಸರಿನ ನಿಷ್ಪತ್ತಿಯನ್ನು ಈ ಕೆಳಗಿನಂತರ ತೋರಿಸಬಹುದು.

ಪ್ರಹರಾ > ಪ್ರಹರೆ > ಪಹರೆ > ಪಗರೆ > ಹಗರೆ > ಹಗರಿ

'ಪ್ರೇಹರಾ' ಶಬ್ದವು 'ಪಗರೆ' ಶಬ್ದದ ಸಂಸ್ಕೃತೀಕರಣಗೊಂಡ ರೂಪ ಎಂದು ಯಾರಾದರೂ ಹೇಳಬಹುದೇನೋ ? ಆದರೆ ಹಾಗೆಂದು ಪರಿಗಣಿಸಲಾಗದು. ಏಕೆಂದರೆ ಪ ಎಂಬುದು ಸಂಸ್ಕೃತದಲ್ಲಿ ಪ್ರೇ ಎಂದಾಗುವುದು ಹೇಗೆ, ಹಾಗೇ ಗ ಎಂಬುದು ಸಂಸ್ಕೃತದಲ್ಲಿ ಹ ಎಂದಾಗುವುದು ಹೇಗೆ ಎಂದು ವಿವರಿಸಲು ಸಾಧ್ಯವಾಗುವುದಿಲ್ಲ.

ಪ್ರೇಹರಾ ಎಂಬುದು ಹಗರಿ ನದಿಯನ್ನೇ ಸೂಚಿಸುವ ಹೆಸರು ಎಂಬುದಕ್ಕೆ ಈ ಮುಂದಿನ ಅಂಶಗಳು ದೃಢೀಕರಣ ಕೊಡುತ್ತವೆ.

೧) ಚಂದ್ರವಳ್ಳಿ ಶಾಸನದ ಪುನರ್ ಪರಿಶೀಲನೆಯಿಂದ ಮಯೂರವರ್ಮನು ತನ್ನದೇ ರಾಜ್ಯವನ್ನು ಸ್ಥಾಪಿಸಿಕೊಳ್ಳುವ ಮುಂಚೆ ಇದ್ದದ್ದು ಚಂದ್ರವಳ್ಳಿಯ ಬಳಿಯ ಕಾಡಿನಲ್ಲಿ ೨೭ ಎಂಬುದು ಈಗಾಗಲೇ ಸ್ಪಷ್ಟವಾಗಿದೆ. ತಾಳಗುಂದ ಶಾಸನದ ಪ್ರಕಾರ ಅವನು ಬೃಹದ್ಬಾಣರೇ ಮುಂತಾದ ದೊರೆಗಳ ಮೇಲೆ ಪಲ್ಲವರ ಬದಲು ತನಗೇ ತೆರಿಗೆ ಕೊಡಬೇಕೆಂದು ಒತ್ತಾಯಿಸಿದನೆಂದು ತಿಳಿಯುತ್ತದೆ. ಹಾಗೆಯೇ ಆ ಬೃಹದ್ಬಾಣರ ರಾಜ್ಯವು ಇದ್ದದ್ದು ಈ ಪಗರೆ ನದಿಯ ಪೂರ್ವ ಭಾಗದಲ್ಲಿ ಮತ್ತು ಮಯೂರವರ್ಮನ ಎಲ್ಲಾ ಚಟುವಟಿಕೆಗಳ ಕೇಂದ್ರಸ್ಥಾನವಾಗಿದ್ದ ಚಂದ್ರವಳ್ಳಿ ಪಟ್ಟಣಕ್ಕೆ ಹತ್ತಿರದಲ್ಲಿ ೨೮ ಎನ್ನುವುದು ಈಗಾಗಲೇ ತಿಳಿದ ಸಂಗತಿಯಾಗಿದೆ.

೨) ತಾಳಗುಂದ ಶಾಸನದಲ್ಲಿ ಮಯೂರವರ್ಮನ ರಾಜ್ಯದ ಉತ್ತರ ಮತ್ತು ದಕ್ಷಿಣದ ಗಡಿಗಳು ಯಾವುವು ಇದ್ದುವು ಎಂಬುದನ್ನು ಹೇಳಿಲ್ಲವಾದರೂ ಪ್ರಸ್ತುತ ವಿವೇಚನೆಯಂತೆ ಪಗರೆ ನದಿ ಮತ್ತು ಪಶ್ಚಿಮ ಸಮುದ್ರದ ಕರಾವಳಿ ರೇಖೆ ಇವುಗಳ ಮಧ್ಯದಲ್ಲಿ ಅವನ ರಾಜ್ಯವಿತ್ತೆಂಬುದು ತಿಳಿಯುತ್ತದೆ. ಆ ರಾಜ್ಯವು ಬೆಳಗಾವಿ, ಉ.ಕನ್ನಡ, ದ.ಕನ್ನಡ, ಧಾರವಾಡ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ರಾಯಚೂರು, ಬಳ್ಳಾರಿ, ಅನಂತಪುರ (ತೆಲಂಗಾಣ ರಾಜ್ಯ) ಮತ್ತು ಚಿತ್ರದುರ್ಗ.

ಹೀಗಾಗಿ ಮಯೂರವರ್ಮನ ರಾಜ್ಯವು ಈ ಮೊದಲಿಗೆ ತಿಳಿಯಲಾಗಿದ್ದಂತೆ ಆಭೀರ, ತ್ರೈಕೂಟ, ಪಲ್ಲವ, ಪಾರಿಯಾತ್ರಿಕ, ಶಕಸ್ಥಾನ, ಸೇಂದ್ರಕ, ಪುನ್ನಾಟ ಮತ್ತು ಮೌಖರಿ೨೯ ಪ್ರದೇಶಗಳನ್ನು ಒಳಗೊಂಡ ವಿಶಾಲ ರಾಜ್ಯವಾಗಿರಲಿಲ್ಲ.೩೦

೩) ತಾಳಗುಂದ ಶಾಸನವು ಮಯೂರವರ್ಮನು ಬೃಹದ್ಬಾಣರ ರಾಜ್ಯದ ಮೇಲೆ ಹಲವು ಬಾರಿ ದಾಳಿ ಮಾಡಿದ ಎಂಬುದನ್ನು ಹೇಳುತ್ತದೆ. ಈಗ ಶಾಸನದ 'ಪ್ರೇಹರಾ' ಎನ್ನುವುದು 'ಪಗರೆ' ನದಿ ಎಂದು ಗುರುತಿಸಲ್ಪಟ್ಟ ಮೇಲೆ ಆ ನದಿಯು ಪೂರ್ವ ಬದಿಗಿದ್ದ ರಾಜ್ಯವು ಮಯೂರವರ್ಮನ ರಾಜ್ಯದೊಳಗೆ ಅಂತರ್ಗತವಾಗಿರಲಿಲ್ಲ ಬದಲಿಗೆ ಪಲ್ಲವ ದೊರೆಗಳು ಅದನ್ನು ತಮ್ಮ ಅಧೀನ ರಾಜರುಗಳಿಗಾಗಿ ತಮ್ಮ ವಶದಲ್ಲಿ ಉಳಿಸಿಕೊಂಡರು–ಎಂದು ವ್ಯಕ್ತವಾಗುತ್ತದೆ. ಇದು ಪಲ್ಲವ ದೊರೆಗಳ ಮತ್ತು ಮಯೂರವರ್ಮನ ನಡುವೆ ಆದ ಒಪ್ಪಂದದಲ್ಲಿ ಅದರ ಬಗ್ಗೆ ಇತ್ಯರ್ಥವಾಗಿ ಆ ಕ್ರಮದಂತೆ ನಡೆದಿರಬೇಕು.

ಅಡಿ ಟಿಪ್ಪಣಿಗಳು

೧ ಎ) ಎಕ ಸಂಪುಟ ೭ (೧೯೦೨) ; ಸಂ: ಬಿ.ಎಲ್. ರೈಸ್. ಶಿಕಾರಿಪುರ ೧೭೬.

೨ ಬ) ಎಇಂ ಸಂಪುಟ ೮ (೧೯೦೫–೦೬) (ಪುನರ್ಮುದ್ರಣ ೧೯೮೧) ; ಸಂ: ಎಫ್. ಕೀಲ್‌ಹಾರ್ನ್, ಪು. ೨೪–೩೬.

೩ ಬಿ.ಎಲ್.ರೈಸ್ ಅವರು ಇದನ್ನು 'ಅಮರಾರ್ಣವ' ಎಂದು ಓದಿದ್ದರು, ಆದರೆ ಎಫ್. ಕೀಲ್‌ಹಾರ್ನ್ ಅವರು

೪ ಎಕ ೭, ಶಿಕಾರಿಪುರ ೧೭೬.

೫ ಎಕ ೮, ಪು.೩೨, ಅಡಿಟಿಪ್ಪಣಿ ಸಂಖ್ಯೆ ೧೦, ಕೀಲ್‌ಹಾರ್ನ್ ಅವರ ತಿದ್ದುಪಡಿಗಳು, ೧೯೮೫ ರಲ್ಲಿ ನಾನು ಖುದ್ದಾಗಿ ಶಾಸನವನ್ನು ಪರಿಶೀಲಿಸಿದಾಗ ಖಚಿತಪಟ್ಟಿವೆ.

೬ ಎಂಎಆರ್ ೧೯೨೯, ಪು.೫೯; ಜಿ.ಎಂ. ಮೊರೇಸ್, ದಿ ಕದಂಬ ಕುಲ, ಪು. ೩೨; ೧೯೩೧, ಮುಂಬೈ; ಡಿ.ಸಿ. ಸರ್ಕಾರ್, ದಿ ಸಕ್ಸೆಸರ್ಸ್ ಆಫ್ ಶಾತವಾಹನಾಸ್, ಪು. ೨೨೩ ಮತ್ತು ೨೫೯, ೧೯೫೯, ಕೊಲ್ಕೊತ; ದಿ ಕ್ಲಾಸಿಕಲ್ ಏಜ್, ಪು. ೨೭೧, ೧೯೫೪, ಮುಂಬೈ; ಕೆ.ಎ. ನೀಲಕಂಠಶಾಸ್ತ್ರಿ, ಎ ಹಿಸ್ಟರಿ ಆಫ್ ಸೌತ್ ಇಂಡಿಯಾ, ಪು. ೧೧೦, ೧೯೬೬; ಕನಾಟಕ ಪರಂಪರೆ, ಭಾಗ ೧, ಪು.೧೩೩ ಮತ್ತು ೧೬೦, ೧೯೭೦. ಇದರಲ್ಲಿ ಬಂದಿರುವ ಎಸ್. ಶ್ರೀಕಂಠಶಾಸ್ತ್ರಿ ಅವರ ಲೇಖನ

೬ ಎಕ ೭, ಪೀಠಿಕೆ, ಪು. ೮.

೭ ಎಇಂ ೮, ಪು. ೨೯, ಅಟಿ ಸಂಖ್ಯೆ ೧.

೮ ಎಂಎಆರ್ ೧೯೨೯, ಪು. ೫೯.

೯ ಕ್ಯುಜೆಎಂಎಸ್ ೪೦, ನಂ. ೩, ಪು. ೮೪-೯೨.

೧೦ ಹುಲ್ಲೂರು ಶ್ರೀನಿವಾಸ ಜೋಯಿಸರ ಲೇಖನ, ಶರಣ ಸಾಹಿತ್ಯ, ೧೯೫೬.

೧೧ ಎ ಹಿಸ್ಟರಿ ಆಫ್ ಸೌತ್ ಇಂಡಿಯಾ, ಪು. ೧೧೦.

೧೨ ದಿ ಸಕ್ಸೆಸರ್ಸ್ ಆಫ್ ಶಾತವಾಹನಾಸ್, ಪು.೨೨೩ ಮತ್ತು ೨೫೯.

೧೩ ಬಾ.ರಾ. ಗೋಪಾಲ್, ಬನವಾಸಿ, ಪು.೨೫, ೧೯೮೬, ಬೆಂಗಳೂರು.

೧೪ ಎಲ್.ಟಿ. ಶರ್ಮ ಮತ್ತು ಬಿ.ಎಚ್. ಶ್ರೀಧರ, ಬನವಾಸಿಯ ಕದಂಬರು, ಪು. ೬೪, ೧೯೬೬, ಶಿರಸಿ. ಕನ್ನಡ ವಿಷಯ ವಿಶ್ವಕೋಶ, ಪು. ೧೧೨೬, ೧೯೭೯, ಮೈಸೂರು. ಇದರಲ್ಲಿರುವ ಬಾ.ರಾ. ಗೋಪಾಲ್ ಅವರ ಲೇಖನ.

೧೫ ಸೋರ್ರಸ್ ಆಫ್ ಕರ್ನಾಟಕ ಹಿಸ್ಟರಿ -ಸಂ. ೧, ಸಂ : ಎಸ್. ಶ್ರೀಕಂಠಶಾಸ್ತ್ರಿ, ಪು. ೧೮-೧೯, ೧೯೭೯, ಮೈಸೂರು.

೧೬ ಕರ್ನಾಟಕದ ಪರಂಪರೆ ಭಾಗ-೧, ಪು. ೧೩೩, ೧೯೭೦, ಬೆಂಗಳೂರು.

೧೭ ಸಂಶೋಧನ ಲೇಖನಗಳು, ಹು.ಶ್ರೀ.ಜೋ., ಪು. ೯೫-೯೬, ೧೯೮೫.

೧೮ ವಿ. ರಾಘವನ್ ಅಭಿನಂದನ ಸಂಪುಟ, ಪು. ೧೫೯-೪೨.

೧೯ ಕನ್ನಡ ವಿಷಯ ವಿಶ್ವಕೋಶ, ಪು. ೧೧೨೬.

ಎ ಹಿಸ್ಟರಿ ಆಫ್ ಕರ್ನಾಟಕ, ಪು. ೪೮೪, ೧೯೮೧, ಧಾರವಾಡ;

ಕಾರ್ಪಸ್ ಆಫ್ ಕದಂಬ ಇನ್ಸ್‌ಕ್ರಿಪ್ಷನ್ಸ್, ಸಂಪುಟ ೧, ಪು. ಥಥಥತು, ಟಥತು, ೧೯೮೫, ಶಿರಸಿ.

೨೦ ಕ್ಯುಜೆಎಂಎಸ್ ಸಂಪುಟ ೪೦, ನಂ. ೯, ಪು. ೮೪-೯೨.

೨೧ ಅನೇಕ ಸಾರಿ ಬಳಸಲಾಗಿರುವ ಸಂಸ್ಕೃತದ ಜನಪ್ರಿಯ ಪದಪುಂಜ.

೨೨ ಬಾಣಾಸ್ ಕಾದಂಬರಿ, ಸಂ : ಎಂ.ಆರ್.ಕಾಳೆ, ಪು.೩೬, ೧೯೬೮, ಡೆಲ್ಲಿ ಇದರ ಕಡೆ ನನ್ನ ಗಮನ ಸೆಳೆದ ಶ್ರೀ ಟಿ.ವಿ. ಸುರೇಶ್‌ಗುಪ್ತ ಅವರಿಗೆ ನಾನು

ಕೃತಜ್ಞನಾಗಿದ್ದೇನೆ.

೨೩ ಕವಿರಾಜಮಾರ್ಗಂ, ಸಂ : ಎಂ.ವಿ. ಸೀತಾರಾಮಯ್ಯ, ಅಧ್ಯಾಯ ೧- ಪ ೫, ೩೬, ೧೯೭೦, ಬೆಂಗಳೂರು.

೨೪ ಬಿ.ಎಲ್.ರೈಸ್, ಮೈಸೂರು, ಸಂಪುಟ-೨ (ಪರಿಷ್ಕೃತ ಆವೃತ್ತಿ), ಪು. ೫೨೧, ೫೨೭, ೫೩೧, ೫೩೮, ೫೩೯,

೧೮೯೭, ವೇದಾವತಿ ಎಂಬ ಹೆಸರು ವಿಜಯನಗರ ಕಾಲದಷ್ಟು ಹಿಂದೆಯೇ ಕಾಣಿಸಿಕೊಂಡಿದೆ. ನೋಡಿ ಎ.ಕ. ೧೧, ಹೊಳಲ್ಕೆರೆ ೧೩೨.

೨೫ ಎ.ಕ. ೧೧, ಹಿರಿಯೂರು ೧; ಚಿತ್ರದುರ್ಗ ೧೯ ಮತ್ತು ೩೪;

ಎಸ್ಐಐ ೯, ಭಾಗ ೨, ನಂ.೨೪೯

'ಪಡುವಗರೆ' ಅನೇಕ ಸಾಸನಗಳಲ್ಲಿ ಕಾಣಸಿಗುತ್ತದೆ. 'ಮೂಡವಗರೆ' ಎಂಬುದು ಚಳ್ಳಕೆರೆ ತಾಲ್ಲೂಕಿನ ಹಿರೇಮಧುರೆ ಗ್ರಾಮದಲ್ಲಿ ನಾನು ಕೈಗೊಂಡ ಕ್ಷೇತ್ರಕಾರ್ಯದಲ್ಲಿ ದೊರೆತ ೧೦ನೆಯ ಶತಮಾನದ ನೊಳಂಬಪಲ್ಲವ ಶಾಸನದಲ್ಲಿ ಕಂಡುಬಂದಿದೆ.

ಈಚಿನ ವರ್ಷಗಳಲ್ಲಿ, ಹಗ್ಗ ಅರಿ, ಅಘ-ಹರಿ, ಅಘ-ಅರಿ ಮುಂತಾದ ರೂಪಗಳನ್ನು 'ಹಗರಿ' ಎಂಬುದಕ್ಕೆ ಆರೋಪಿಸಲಾಗಿದೆ. ಆದರೆ ಇವಾವುವೂ ಶಾಸನಗಳಲ್ಲಿ ಕಾಣದ ಕಲ್ಪನಾ ರೂಪ (ವ್ಯಾಖ್ಯಾನ) ಗಳಾಗಿವೆ.

೨೬ ಅವಂತಿ ಸುಂದರಿ ಕಥಾ ಎಂಬ ಕೃತಿಯಲ್ಲಿ ಹೇಳಲಾಗಿರುವ ಎರಡು ನುಡಿಗಳಲ್ಲಿ ಒಂದು ಪ್ರೇಹರಾ ಎಂದು ಹೇಳಲಾಗಿದೆ. ಇಂಥ ಭಿನ್ನರೂಪಗಳು ಕಂಡಾಗ್ಗೆ ಅವನ್ನು ತುಂಬ ಎಚ್ಚರಿಕೆಯಿಂದ ಪರೀಕ್ಷಿಸಬೇಕಲ್ಲದೆ, ರಚನಕಾರನ ಇಲ್ಲವೆ ಲಿಪಿಕಾರನ ತಿದ್ದುಪಡಿ (ಕೈವಾಡ) ಇರುವ ಸಾಧ್ಯತೆಯನ್ನು ಪರಿಗಣಿಸಬೇಕಾಗುತ್ತದೆ. ವಿ.ರಾಘವನ್, ಆನಲ್ಸ್ ಆಫ್ ಓರಿಯೆಂಟಲ್ ರಿಸರ್ಚ್ ಇನ್ಸ್‌ಸ್ಟಿಟ್ಯೂಟ್, ಸಂಪುಟ ೧, ಭಾಗ ೨, ಪು.೩ (ಸಂಸ್ಕೃತ ವಿಭಾಗ).

೨೭ ಬಿ. ರಾಜಶೇಖರಪ್ಪ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೬೯, ಸಂಚಿಕೆ ೨, ಪು. ೮೯-೧೦೦, ೧೯೮೪, ಬೆಂಗಳೂರು.

೨೮ ಎಂ.ಎ.ಆರ್. ೧೯೨೮, ಪು.೫೯,

ಜೆಐಎಚ್, ಸಂಪುಟ ೧೨ (ಭಾಗ ೧ ಮತ್ತು ೩), ಪು. ೩೫೯.

ಕರ್ನಾಟಕದ ಪರಂಪರೆ, ಭಾಗ ೧, ಪು. ೧೩೩.

೨೯ ಎಂ.ಎ.ಆರ್. ೧೯೨೯, ಪು. ೫೮-೬೦.

೩೦ ಬಿ. ರಾಜಶೇಖರಪ್ಪ, ಅದೇ, ಪು.೮೯-೧೦೦.

ಡಾ. ಬಿ. ರಾಜಶೇಖರಪ್ಪ [ಮೊ : ೯೪೪೮೦೨ ೨೬೦೬೪]
ಕನ್ನಡ ಪ್ರಾಧ್ಯಾಪಕರು, ಪ್ರಾಂಶುಪಾಲರು (ನಿ)
೨ನೆಯ ಕ್ರಾಸ್ (ಪಶ್ಚಿಮ), ಜೆ. ಸಿ. ಆರ್. ಬಡಾವಣೆ
ಚಿತ್ರದುರ್ಗ -೫೭೭ ೫೦೧

# ಪರೀಕ್ಷೆ-ನಿರೀಕ್ಷೆ

**ಡಾ.ದಾಕ್ಷಾಯಣಿ**

ಹೆಣ್ಣು ತನ್ನ ಸಾಮಾಜಿಕ ಪರಿಸರದ ರೀತಿ ನೀತಿಗಳ ವಿರುದ್ಧ ಹೆಜ್ಜೆ ಹಾಕಿದರೆ ಅವುಗಳಿಗೆ ಬದ್ಧಳಾಗದಿದ್ದರೆ, ಸಾಮಾಜಿಕ ಕಟ್ಟಳೆಗಳನ್ನು ಪಾಲಿಸದಿದ್ದರೆ,ಯಾವ ರೀತಿಯ ತೊಂದರೆಗಳನ್ನು ಮಾನಸಿಕ ಹಿಂಸೆಯನ್ನು ಅನುಭವಿಸಬೇಕಾಗುತ್ತದೆ ಎಂಬುದಕ್ಕೆ ಅಕ್ಕಮಹಾದೇವಿಯ ಜೀವನವು ಇತಿಹಾಸದುದ್ದಕ್ಕೂ ಸಾಕ್ಷಿಯಾಗಿ ನಿಂತಿದೆ. ಸ್ತ್ರೀಲೋಕವನ್ನು ಈ ಘಟನೆಗಳು/ಪರೀಕ್ಷೆಗಳು ವ್ಯಗ್ರಗೊಳಿಸುತ್ತವೆ. ಅಕ್ಕಮಹಾದೇವಿ ಎದುರಿಸಿದ ಪರೀಕ್ಷೆ ಒಂದಲ್ಲ. ಇಡೀ ಲೋಕವೇ ಆಕೆಯ ವಿರುದ್ಧವಾಗಿತ್ತು, ವಿವಾಹವನ್ನು ನಿರಾಕರಿಸಿದಳು, ಉಟ್ಟ ಸೀರೆಯನ್ನು ಸೀಳಿ ಅಪಹಾಸಕ್ಕೆ ಗುರಿಯಾದಳು. ಸೀರೆ ತ್ಯಜಿಸುವಿಕೆ ಕ್ಷಣಾರ್ಧದಲ್ಲಿ ನಡೆಯಿತಾದರೂ, ಆಕೆಯ ವಿರಕ್ತಿ ಅದಾಗಲೇ ಕುದಿದು ಕುದಿದು ಗಟ್ಟಿಯಾಗಿತ್ತೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಒಂದು ಸಾಮಾನ್ಯ ಪರಿಸ್ಥಿತಿಯಲ್ಲಿ, ಒಬ್ಬ ಸಾಮಾನ್ಯ ಸ್ತ್ರೀಗೆ ಇಂತಹ ನಿರ್ಣಯವನ್ನು ತೆಗೆದುಕೊಳ್ಳಲು ಸಾಧ್ಯವೇ ಎಂಬುದನ್ನು ಪುನ: ಪುನ: ಚಿಂತಿಸಬೇಕಾಗುತ್ತದೆ. ಅಕ್ಕ ಸಾಮಾನ್ಯ ಸ್ತ್ರೀಯ ಮಿತಿಯನ್ನು, ಸಾಧ್ಯತೆಯನ್ನು ಮೀರಿ ಸಾಧನೆಗೈದ ಒಬ್ಬ ಕಠೋರ ಸಾಧಕಳು.

ಅಕ್ಕ ಜನಸಾಮಾನ್ಯರ ಪರೀಕ್ಷೆಗೆ ಒಳಗಾದಳು, ಇದನ್ನು ಪರೀಕ್ಷೆ ಎನ್ನಲಾಗದು. ಎಂದೂ ಕಾಣದ,ಕೇಳದಂತಹ ವಿಚಿತ್ರ ಭೌತಿಕ ಅವಸ್ಥೆಯಲ್ಲಿದ್ದ ಆಕೆಯನ್ನು ನೋಡಿದ ಸಾಮಾನ್ಯರು, ವಿವಶರಾಗಿ ಆಕೆಯ ಬೆನ್ನು ಹತ್ತಿದರು. ಅಕ್ಕ ಇಂತಹ ಸನ್ನಿವೇಶವನ್ನು ನಿರೀಕ್ಷಿಸಿದ್ದಳೇ? ಇರಬಹುದು. ಇಂಥ ಜನರನ್ನು ಎದುರಿಸುವ ಅಸಾಧ್ಯ ಮಾನಸಿಕ ಧೃಡತೆಯನ್ನು ಹೊಂದಿದ್ದುದರಿಂದ ಆ ಪರಿಸರದಿಂದ ಅಕ್ಕ ಪಾರಾದಳು ಎಂಬುದನ್ನು ಗಮನಿಸಬೇಕಾಗುತ್ತದೆ.

ಆಕೆ ಆಯಾ ಕ್ಷಣಕ್ಕೆ ಉಸುರಿದ ಸಮಯೋಚಿತವಾದ ವಚನಗಳು ಜನರನ್ನು ಪ್ರಭಾವಿಸಿದವು. ಅಕ್ಕನ ವಿಷಯದಲ್ಲಿ ಅವರಿಗೆ ಗೌರವಾದರಗಳು ಉಂಟಾದವು. . . . 'ಚೆನ್ನಮಲ್ಲಿಕಾರ್ಜುನಂಗೊಲಿದು ಮತಿಗೆಟ್ಟವಳ ಏನ ನುಡಿಸುವಿರಯ್ಯ' ಎನ್ನಬೇಕಾಯಿತು.

. . . . . ಮೂತ್ರವು ಬಿಂದು ಒಸರುವ ನಾಳವೆಂದು

ಕಂಗಾಣದೆ ಮುಂದುಗೆಟ್ಟು ಬಂದಿರಣ್ಣ ! ಎಂದು ನಿರ್ಭಾವುಕಳಾಗಿ

ಹೇಳಬೇಕಾಯಿತು. ಕೊನೆಗೆ,

'ಗಗನದ ಗುಂಪ ಚಂದ್ರಮ ಬಲ್ಲುದಲ್ಲದೇ
ಮೇಲಿದ್ದಾಡುವ ಹದ್ದು ಬಲ್ಲುದೆ ಅಯ್ಯ'?

ಎಂದು ಜನರ ಅಜ್ಞಾನವನ್ನು ನಿರ್ಲಿಪ್ತಳಾಗಿ ಸ್ವೀಕರಿಸಿದಳು.

' ನಿಮ್ಮ ಶರಣರ ನಿಲವ ನೀವೇ ಬಲ್ಲಿರಲ್ಲದೆ

ಈ ಕೋಣನ ಮೈಯ ಮೇಲಣ ಸೊಳ್ಳೆಗಳೆತ್ತ ಬಲ್ಲವಯ್ಯ ?' ಎಂದು ಜನಸಾಮಾನ್ಯರ, ಈ ಲೌಕಿಕ ಸಂಸಾರದಲ್ಲಿ ಮುಳುಗಿದವರ, ತಿಳುವಳಿಕೆಯ ಮಿತಿ ಅಷ್ಟೆ ಇದ್ದು ಶರಣರನ್ನು ಸಾಧಕರನ್ನು, ಭಕ್ತರನ್ನು ಅವರು ಅರ್ಥಮಾಡಿಕೊಳ್ಳರೆಂಬುದನ್ನು ಅರಿತುಕೊಂಡು ತನ್ನನ್ನು ತಾನು ಸಮಾಧಾನಿಸಿಕೊಂಡಳು.

ಫಲವಾದ ಮರನ ಕಲ್ಲಲಿ ಇಡುವರೊಂದು ಕೋಟಿ
ಫಲವಾದ ಮರನ ಇಡುವರೊಬ್ಬರ ಕಾಣೆ

ಹೀಗೆಂದುಕೊಡು ಶಾಂತಚಿತ್ತದಿಂದ ಸಂವರಿಸಿಕೊಂಡಳು ತನ್ನನ್ನು. ಇದೊಂದು ರೀತಿಯ ಲೋಕಪರೀಕ್ಷೆ ಎನಿಸಿದರೂ ಅವರು ಆಕೆಯನ್ನು ಪರೀಕ್ಷಿಸಲು ಬಂದವರಲ್ಲ. ಒಂಟಿಯಾದ ಹೆಣ್ಣು, ಅಸಹಾಯಕಳು, ಅಬಲೆ, ಅಲ್ಲದೇ ದಿಗಂಬರೆ, ಸುಲಭವಾಗಿ ಕೈಗೆ ಸಿಕ್ಕಬಲ್ಲಳು ಎಂಬ ನಿರೀಕ್ಷೆಯಲ್ಲಿ ಬಂದವರು. ಆಕೆ ಸಂಸಾರದ ಚೌಕಟ್ಟನ್ನು ದಾಟಿ ಬಂದವಳಾದ್ದರಿಂದ ನೀತಿಸಂಹಿತೆಯನ್ನು ಮೀರಿದವಳು ಎಂದು ತಿಳಿದಿತ್ತು ಜನ. ಆಕೆಯ ಮನೋಬಲವೆಷ್ಟಿತ್ತು ಎಂಬುದರ ಅರಿವು ಅವರಲ್ಲಿರಲಿಲ್ಲ. 'ಗಗನದ ಗುಂಪ ಚಂದ್ರಮ ಬಲ್ಲುದಲ್ಲದೇ' ಅಕ್ಕನ ಈ ಮಾತಿನಲ್ಲಿ ಇದು ಸ್ಪಷ್ಟವಾಗಿದೆ.

ಇದರಿಂದ ಇನ್ನೂ ಒಂದು ಸಂಗತಿ ವ್ಯಕ್ತವಾಗುತ್ತದೆ. ಅಕ್ಕನಿಗೆ ಜನಬಲವಿರಲಿಲ್ಲ. ಸಂಸಾರವನ್ನು ತ್ಯಜಿಸಿ ಒಬ್ಬ ಹೆಣ್ಣು ವಿರಾಗಿಯಾಗಬಲ್ಲಳು ಎಂಬುದನ್ನು ಲೋಕ ಒಪ್ಪಲಿಲ್ಲ. 'ಛೀ ಹೋಗಾ ಮರುಳೇ' ಎಂದು ಛೀಮಾರಿ ಹಾಕುತ್ತ ಅಂಥ ವಿಷಾರಿ ವಾತಾವರಣದಿಂದ ದೂರ ಸರಿಯುತ್ತಾ ಜನಸಾಗರವನ್ನು ಒಂಟಿಯಾಗಿ ಎದುರಿಸಿದಾಕೆ ಅಕ್ಕ.

ಲೋಕದ ಗಾಣದಲ್ಲಿ ಈ ರೀತಿಯಾಗಿ ನುರಿದುಕೊಂಡು ಹೋದ ಅಕ್ಕನಿಗೆ ಕಿನ್ನರಿ ಬೊಮ್ಮಯ್ಯ ಭೇಟಿಯಾಗುತ್ತಾನೆ. ಆತ ಅಕ್ಕನನ್ನು ಪರೀಕ್ಷಿಸಿದ ಎಂಬುದು ಸರ್ವ ಸಾಮಾನ್ಯವಾಗಿ ತಿಳಿಯಲ್ಪಡುತ್ತದೆ. ಆದರೆ ಆತ ತನ್ನ ಸಾಧನೆಯ ಇತಿಮಿತಿಗಳನ್ನು ಪರೀಕ್ಷಿಸಿಕೊಂಡ ಎನ್ನುವದು ಆ ಘಟನೆಯಲ್ಲಿ ಅಂತರ್ಗತವಾದ ಸಂಗತಿಯಾಗಿದೆ. ಅಕ್ಕನನ್ನು ಪರೀಕ್ಷಿಸುವ ನೈತಿಕ ಬಲ ಅವನಲ್ಲಿರಲಿಲ್ಲ. ಅಷ್ಟಾಗಿಯೂ ಪರೀಕ್ಷಿಸಲು ಅವನು ಯಾರು? ಇದು ಅಗತ್ಯವಾಗಿ ಕೇಳಿಕೊಳ್ಳಬೇಕಾದ ಪ್ರಶ್ನೆಯಾಗಿದೆ.

ಬೊಮ್ಮಯ್ಯ ತರುಣ ಹಾಗೂ ಸುಂದರ ಯುವಕ, ಭಕ್ತಿಮಾರ್ಗದಲ್ಲಿದ್ದವ, ಕಲ್ಯಾಣದ ನಿವಾಸಿ ಮತ್ತು ಅನುಭವ ಮಂಟಪದ ಸದಸ್ಯ. ಅವನ ಹಾಗೂ ಅಕ್ಕನ ಭೇಟಿಯಾದುದು ಕಲ್ಯಾಣದ ಹೊರವಲಯದಲ್ಲಿ, ಆಕಸ್ಮಿಕವಾಗಿ. 'ಬಂದವರ ಓಣಿ' ಎಂದು ಇಂದಿಗೂ ಕರೆಯಲ್ಪಡುವ ಸ್ಥಳದಲ್ಲಿ ಅಕ್ಕ ಹಾಗೂ ಬೋಮ್ಮಯ್ಯ ಭೇಟಿಯಾಗುತ್ತಾರೆ. ಅವರು ಪರಸ್ಪರರನ್ನು ಪರಿಚಯಿಸಿಕೊಂಡಿರುವ ಸಾಧ್ಯತೆಗೆ ಅವರ ವಚನಗಳಲ್ಲಿರುವ ಉಲ್ಲೇಖಗಳು

ಪುಷ್ಟಿ ಒದಗಿಸುತ್ತವೆ. 'ಕಿನ್ನರನಂತಪ್ಪ ಸೋದರನೆನಗೆ' –ಅಕ್ಕ. 'ಮಹಾದೇವಿಯಕ್ಕಗಳ ಕೃಪೆಯಿಂದ ಹುಲಿನೆಕ್ಕಿ ಬದುಕಿದೆನು' –ಬೊಮ್ಮಯ್ಯ.

ಅಕ್ಕನ ದಿವ್ಯ ಸೌಂದರ್ಯದಿಂದ ಬೊಮ್ಮಯ್ಯನ ಮನಸ್ಸು ಕಾಮ ಪೀಡಿತವಾಗಿ ಅಲ್ಲೋಲಕಲ್ಲೋಲವಾಗಿತ್ತು. ವಿಷಯಗಳು ನಿರ್ವಿಷಯವಾದವಿಂದು–ಬೊಮ್ಮಯ್ಯನ ಈ ಮಾತಿನಲ್ಲಿ ಇದು ವ್ಯಕ್ತವಾಗಿದೆ.

ಅಕ್ಕ ತಾನು ಚೆನ್ನಮಲ್ಲಿಕಾರ್ಜುನನ ಸತಿ ಎಂದಳು. ಅದನ್ನು, ಗಂಡು - ಬೊಮ್ಮಯ್ಯ ಇಷ್ಟು ಸುಲಭವಾಗಿ ಹೆಣ್ಣೊಬ್ಬಳ ಮಾತನ್ನು ನಂಬಲು ನಿರಾಕರಿಸಿದ. ತಾನು ಶರಣ ಆಕೆಯೂ ಶರಣೆ. ಶರಣಮಾರ್ಗದಲ್ಲಿದ್ದ ಇಬ್ಬರ ವಿವಾಹವು ಅತ್ಯಂತ ಸರಳ ವಿಧಾನವಾಗಿ ಕಂಡಿತವನಿಗೆ. ಅವರಿಬ್ಬರ ಸಾಧನೆಯ ಗುರಿ ಒಂದೇಯಾದುದರಿಂದ 'ಸಮಕೂಟದೊಳಗಿದ್ದು' ತ್ರಿಪುರಾಂತಕ ಲಿಂಗವನ್ನು ಒಲಿಸುವ ಸಾಧ್ಯತೆಯನ್ನೇ ಕುರಿತು ಚಿಂತಿಸುತ್ತ ಆಕೆಯನ್ನು, ಅಡಿಯಿಂದ ಮುಡಿಯವರೆಗೆ ವಿಷಯಾಸಕ್ತನಾಗಿ ನೋಡುತ್ತಲೇ ಇದ್ದ.

ಇಡೀ ಲೋಕವನ್ನೇ, ಜನಸಮುದಾಯವನ್ನೇ ಎದುರಿಸಿ ಕಲ್ಯಾಣದವರೆಗೆ ಒಂಟಿಯಾಗಿ ನಡೆದುಬಂದ ಅಕ್ಕನಿಗೆ ಬೊಮ್ಮಯ್ಯನನ್ನು ನಿವಾರಿಸಿಕೊಳ್ಳುವದು ಕಷ್ಟವಾಗಿರಲಿಲ್ಲ. ಅಕ್ಕ ಹೇಳುತ್ತಾಳೆ;

ಸರ್ಪನ ಬಾಯ ಕಪ್ಪೆ ನೊಣಕ್ಕೆ ಹಾರುವಂತೆ !
ಅಪ್ಯಾಯನ ಬಿಡದು !!
ಕಾಯವರ್ಪಿತವೆಂಬ ಹುಸಿಯ ನೋಡಾ !!
ನಾನು ಭಕ್ತನೆಂಬ ನಾಚಿಕೆಯ ನೋಡಾ !!
ನಾನು ಯುಕ್ತನೆಂಬ ಹೇಸಿಕೆಯ ನೋಡಾ !!
– – – – – – – –

ಬೊಮ್ಮಯ್ಯನ ಸ್ಥಿತಿ ಸರ್ಪನ ಬಾಯಲ್ಲಿರುವ ಕಪ್ಪೆಯಂತಾಗಿತ್ತು. ಶರಣ ಮಾರ್ಗದಲ್ಲಿದ್ದವ, ಪರಸ್ತ್ರೀಯಾದ ಅಕ್ಕನನ್ನು ಕಾಮದ ದೃಷ್ಟಿಯಿಂದ ಕಲುಷಿತ ಮನದಿಂದ ನೋಡಿದ. ಬಾಯಲ್ಲಿ ಭಕ್ತನೆಂದು ಹೇಳಿಕೊಳ್ಳುತ್ತಿದ್ದಾನೆ, ಅವನ ನಡವಳಿಕೆ ಅದಕ್ಕೆ ವಿರುದ್ಧವಾಗಿತ್ತು. ಅವನ ನಡೆ ಹಾಗೂ ನುಡಿಗಳಲ್ಲಿ ಸಾಮ್ಯತೆ ಇರಲಿಲ್ಲ. ತನ್ನ ತಪ್ಪಿನ ಅರಿವಾಗುತ್ತಲೇ ಆತ ಧರೆಗಿಳಿದು ಹೋದ. ಪಶ್ಚಾತ್ತಾಪದಿಂದ ನೊಂದ ಬೆಂದ. ಕ್ಷಮೆ ಯಾಚಿಸಿದ. ಒಂದು ವೇಳೆ ಆತ ಅಕ್ಕನನ್ನು ಭೌತಿಕವಾಗಿ ಸ್ಪರ್ಶಿಸಿದ್ದರೆ ಕ್ಷಮೆ ಯಾಚಿಸುವ ಮಟ್ಟದಲ್ಲಿಯೂ ಆತ ಇರುತ್ತಿರಲಿಲ್ಲ. 'ನುಡಿದಂತೆ ನಡೆ' ಇದು ಅಕ್ಕನ ಧರ್ಮವಾಗಿತ್ತು.

'ಮಹಾದೇವಿ ಅಕ್ಕಗಳ ಕೃಪೆಯಿಂದ ಹುಲಿನೆಕ್ಕಿ ಬದುಕಿದೆನು'– ಬೊಮ್ಮಯ್ಯನ ವಚನದಲ್ಲಿಯ ಈ ಸಾಲು ಆತ ಒಂದು ಅತ್ಯಂತ ಅತಂಕಕಾರೀ ಘಟನೆಯಿಂದ ಪಾರಾದನೆಂಬುದನ್ನು ಸೂಚಿಸುತ್ತದೆ. ಇಲ್ಲಿ ಬೊಮ್ಮಯ್ಯ 'ಅಕ್ಕ' ಎಂದು ಸಂಬೋಧಿಸಿದ್ದಾನೆ. ಅಕ್ಕ ಎಂದು ಅಲ್ಲಮಪ್ರಭು ಕರೆಯುವದಕ್ಕಿಂತ ಮುನ್ನವೇ ಬೊಮ್ಮಯ್ಯ ಅಕ್ಕನೆಂದ. ಅಕ್ಕ ಎಂಬುದು ಒಬ್ಬ ಸ್ತ್ರೀಯನ್ನು ಕರೆಯುವ ಗೌರವ

ಸೂಚಕ ಪದವಾಗಿದೆ. ಅಕ್ಕನೂ ಸಹಿತ ಆತನನ್ನು ಸೋದರ ಎಂದೇ ಕರೆದಳು. ಸಮಾಧಾನ ತೋರಿದಳು. ಅವನ ಮನೋಭಾವನೆಗಳಲ್ಲಿ ಯಾವದೇ ರೀತಿಯ ಬದಲಾವಣೆ ಆಗದೇ ಇದ್ದಾಗ, ಆತ ಸಂಯಮವನ್ನು ಕಳೆದುಕೊಂಡವನೆಂದು ತಿಳಿದಾಗ, ಕಾಯವರ್ಪಿತವೆಂಬ ಹುಸಿಯ ನೋಡಾ. . . . ನಾನು ಭಕ್ತನೆಂಬ ನಾಚಿಕೆಯ ನೋಡಾ– ಎಂದು ಜರಿದು, ಎಚ್ಚರಿಸಬೇಕಾಯಿತು.

ಶರಣರು ಕಾಯವನ್ನು ಶಿವನಿಗರ್ಪಿಸಿ ಶರಣಸತಿ ಲಿಂಗಪತಿಯಾದವರು. ಬೊಮ್ಮಯ್ಯ ಎಚ್ಚರಾದ. ಬೊಮ್ಮಯ್ಯನ ಭೇಟಿಗೆ ಮೊದಲು, ಉಡುತಡಿಯಿಂದ ಕಲ್ಯಾಣದವರೆಗಿನ ದಾರಿಯಲ್ಲಿ ಜನ ಅಕ್ಕನನ್ನು ಗೌರವದಿಂದ ಕಾಣದೇ ಇದ್ದಿರಬಹುದು.

'ಅಣ್ಣಾ ನಾನು ಹೆಂಗೂಸಲ್ಲ
ಅಣ್ಣಾ ನಾನು ಸೂಳೆಯಲ್ಲ
ಮತ್ತೆ ನನ್ನನ್ನು ಕಂಡು ಕಂಡು
ಯಾರೆಂದು ಬಂದಿರಣ್ಣ. . . .

ಈ ಸಾಲುಗಳು ಅಕ್ಕನ ಮನಸ್ಸಿನ ತೀವ್ರವಾದ ತಳಮಳವನ್ನು, ಜನರು ಆಕೆಯನ್ನು ಯಾವ ದೃಷ್ಟಿಯಿಂದ ನೋಡಿದರೆಂಬುದನ್ನು ನಿರ್ದೇಶಿಸುತ್ತವೆ. ಹೆಣ್ಣು ಎಂಬ ಉಪಾಧಿಯನ್ನು ಮೀರಿದ ವ್ಯಕ್ತಿ ಆಕೆ ಎಂದು ತಿಳಿದ ನಂತರ ಭಯಭಕ್ತಿಯಿಂದ ತಲೆಬಾಗಿರಬಹುದು. ಜನರು ತನ್ನನ್ನು ನೋಡಿ ಯಾವ ರೀತಿ ಪ್ರತಿಕ್ರಿಯಿಸಬಹುದೆಂಬ ಕಲ್ಪನೆ ಅಕ್ಕನಿಗಿತ್ತು. ಅದೆಲ್ಲವನ್ನು ಎದುರಿಸುವ ಮಾನಸಿಕ ತಯಾರಿಯಿಂದಲೇ ಅಕ್ಕ ನಡೆದಿದ್ದಳು. ಅಕೆಯದು ಒಂಟಿಯಾದ ಹೋರಾಟ, ಈ ಹೋರಾಟದಲ್ಲಿ ಕೇವಲ ಚೆನ್ನಮಲ್ಲಿಕಾರ್ಜುನ ಬೆಂಗಾವಲಿಗೆ ಇದ್ದ.

ಅನುಭವ ಮಂಟಪದಲ್ಲಿ ಅಲ್ಲಮಪ್ರಭುವಿನೊಂದಿಗಿನ ಸಂವಾದವನ್ನೂ ಅಕ್ಕ ನಿರೀಕ್ಷಿಸಿದ್ದಿರಬಹುದು. ಸಮಾಜದ ಚೌಕಟ್ಟನ್ನು ದಾಟಿಬಂದ ಅಕ್ಕನನ್ನು ಶರಣರು ಕೂಡಲೇ ಸ್ವೀಕರಿಸಿದ್ದರೆ ಋಣಾತ್ಮಕ ಸಂದೇಶವೊಂದನ್ನು ಕೊಟ್ಟಂತಾಗುತ್ತಿತ್ತು. ಅಕ್ಕ ವಿವಾಹಿತ ಪತಿಯನ್ನು ತ್ಯಜಿಸಿ ಬಂದವಳೆಂಬ ವಾರ್ತೆ ಹರಡಿತ್ತಾದ್ದರಿಂದ ಅದರ ಪರಾಮರ್ಶೆಯೂ, ಆಕೆ ಕೇವಲ ಶರಣೆ ಎಂದು ಲೋಕಕ್ಕೆ ತಿಳಿಸುವದೂ ಅಗತ್ಯವಾಗಿದ್ದವು. ಅದಕ್ಕಾಗಿ ಅಲ್ಲಮ ಪ್ರಭು ಆಕೆಯನ್ನು ಶರಣ ಸಮುದಾಯದೆದುರು ಒರೆದೊರೆದು ನೋಡಿದ. ವಿವಾಹಿತ ಪತಿಯನ್ನು ಬಿಡಬೇಕೆಂದು ಹೇಳುವದಿಲ್ಲ ಶರಣಧರ್ಮ. ಜೀವನದಲ್ಲಿ ಬಂದುದೆಲ್ಲವನ್ನು ಸ್ವೀಕರಿಸಬೇಕೆಂಬುದು ಶರಣರ ತತ್ತ್ವ ಅಕ್ಕ ಆ ತತ್ತ್ವದಃಕೆ ಅಕ್ಕ. ವಿವಾಹಿತ ಪತಿಯನ್ನು ಬಿಟ್ಟಳೆಂಬುದು ಸರಿಯಾದ ತರ್ಕವಲ್ಲ.

ರಾಜಸ್ಥಾನದ ಭಕ್ತ ಕವಯಿತ್ರಿಯಾದ ಮೀರಾಳ ಜೀವನದಲ್ಲಿಯ ಒಂದು ಘಟನೆಯು ಕಿನ್ನರಿ ಬೊಮ್ಮಯ್ಯನ ಪ್ರಸಂಗವನ್ನು ಬಹು ಮಟ್ಟಿಗೆ ಹೋಲುತ್ತದೆ. ಮೀರಾ ಯಾವಾಗಲೂ ಸಾಧು ಸಂತರಿಂದ ಸುತ್ತುವರಿದಿರುತ್ತಿದ್ದಳು. ಒಬ್ಬ ಸಾಧು ಅಕೆಯ ಬಳಿಗೆ ಬಂದು, 'ಮೊಸೊ ಅಂಗ ಸಂಗ ಕೀಜಿಯೊ, ಆಜ್ಞಾ ಮೊಕೊ ದಯಿ ಆಯಿ ಲಾಲ ಗಿರಧಾರಿ'.(ನನ್ನೊಂದಿಗೆ ಅಂಗಸಂಗ ಮಾಡಬೇಕು, ನನಗೆ ಗಿರಧರಲಾಲನ

ಆಜ್ಞೆಯಾಗಿದೆ) ಎಂದ. ಗಿರಧರನ ಆಜ್ಞೆ ಮೀರಾಳಿಗೆ ಸಿರಸಾಮಾನ್ಯ. ನಿರಾಕರಿಸುವಂತಿಲ್ಲ. ಮೀರಾ ಸಾಧುವಿಗೆ ಊಟೋಪಚಾರ ಮಾಡಿಸಿದಳು. ನಂತರ ಸಂತ ಸಮಾಜದ ಎದುರಿಗೆ ಪಲ್ಲಂಗವನ್ನು ಹಾಕಿಸಿದಳು.

'ಸಂಕ ಅಬ ಕೌನಕು ನಿಸಂಕ ರಸ ಪೀಜಿಯೆ' (ಶಂಕೆ ಬೇಡ ನಿಶ್ಯಂಕೆಯಿಂದ ಸ್ವೀಕರಿಸು) ಸಾಧುವಿಗೆ ಹೇಳಿದಳು. ಇಂತಹ ಸಂದರ್ಭವನ್ನು ಆತ ನಿರೀಕ್ಷಿಸಿರಲಿಲ್ಲ. ಸಾಧುವಿನ ಮುಖ ವಿವರ್ಣವಾಯಿತು. ಮೀರಾಳ ಕಾಲಿಗೆ ಬಿದ್ದು ಕ್ಷಮೆ ಕೇಳಿದ. ತನಗೆ ಭಕ್ತಿಯ ಉಪದೇಶವನ್ನು ಮಾಡಬೇಕೆಂದು ಬೇಡಿಕೊಂಡ.

ಮೀರಾಳಿಗೆ ಸಾಧುಜನರ, ಸಾಮಾನ್ಯರ ಬೆಂಬಲವಿದ್ದುದು ಸ್ಪಷ್ಟವಾಗುತ್ತದೆ. ಇಂಥ ಘಟನೆ ನಡೆದುದರ ಬಗ್ಗೆ ಮೀರಾಳ ಭಜನೆಗಳಲ್ಲಿ ಯಾವದೇ ಆಧಾರ ಸಿಗುವದಿಲ್ಲ. ಈ ಪ್ರಸಂಗದಿಂದ ಕೆಲವು ಸಂಗತಿಗಳು ತಿಳಿದುಬರುತ್ತವೆ. ಎಲ್ಲ ಸಾಧುಗಳು ಸಜ್ಜನರಿರುವದಿಲ್ಲ. ಸಿದ್ಧಿಯನ್ನು ಸಾಧಿಸಿಕೊಂಡವರಿರುವದಿಲ್ಲ. ಮೀರಾ ಅರಸು ಪರಿವಾರದೊಂದಿಗೆ ತನ್ನ ಲೌಕಿಕ ಸಂಬಂಧವನ್ನು ಇಟ್ಟುಕೊಂಡಿರದ ತರುಣಿ ಹಾಗೂ ವಿಧವೆ. ಈ ಪ್ರಸಂಗದಲ್ಲಿ ಸೋಲಬಹುದು ಎಂಬ ವಿಚಾರ ಆ ಸಾಧುವಿನಲ್ಲಿ ಇದ್ದಿರಬೇಕು. ಯಾಕೆಂದರೆ ತಾನೂ ಸಂತ, ಮೀರಾಳೂ ಸಂತಳು ಅಲ್ಲದೇ ಗಿರಧರನಾಜ್ಞೆ. ಸಾಧು ಅಂಗಸಂಗ ಬಯಸಿದರೆ ಬೊಮ್ಮಯ್ಯ ಮದುವೆಯ ಮಾತಾಡಿದ. ಮೀರಾ ಭಕ್ತರ ಗುಂಪಿನಲ್ಲಿದ್ದರೆ ಅಕ್ಕ ಒಂಟಿಯಾಗಿ ದಾರಿಯಲ್ಲಿದ್ದಳು. ಕಿನ್ನರಿಬೊಮ್ಮಯ್ಯ ಒಬ್ಬ ಸಾಧಕನಿದ್ದ, ಈತ ಕುಟಿಲ ವೇಷದ ಸಾಧು ಎಂದೇ ವರ್ಣಿಸಲ್ಪಟ್ಟಿದ್ದಾನೆ. ಮೀರಾ ವಿಚಲಿತಳಾಗಲಿಲ್ಲ ಅವನ ಬೇಡಿಕೆಯು ಅವನಿಗೇ ನಾಚಿಕೆಯಾಗುವಂತಹ ಸನ್ನಿವೇಶ ನಿರ್ಮಾಣ ಮಾಡಿದಳು. ಅಕ್ಕ ಆತನ ಸಾಧನೆಗೆ ವ್ಯತಿರಿಕ್ತವಾದ ನಡವಳಿಕೆಯನ್ನು ಅವನಿಗೆ ತೋರಿಸುತ್ತ ಅವನು ಪಶ್ಚಾತ್ತಾಪಪಡುವಂತೆ ಮಾಡಿದಳು.

ಲೋಕ ಪ್ರವಾಹದ ವಿರುದ್ಧ ಗತಿಯಲ್ಲಿ ಸಾಗಿದ ಅವರು ಲೋಕವು ತಮ್ಮ ವೈಯಕ್ತಿಕ ಸ್ವಾತಂತ್ರ್ಯವನ್ನು ಒಪ್ಪಿಕೊಳ್ಳುತ್ತದೆ ಎಂದು ನಿರೀಕ್ಷಿಸಿರಲೇ ಇಲ್ಲ. ಹೋರಾಟವು ಅವರ ಜೀವನದ ಪ್ರಮುಖವಾದ ಒಂದು ಭಾಗವಾಗಿತ್ತು. ಲೋಕದೊಂದಿಗೆ ಸಂಘರ್ಷ ಮಾಡುತ್ತಲೆ ತಮ್ಮ ಗುರಿಯನ್ನು ಮುಟ್ಟಿದ ಅವರು ಜಗದ್ವಂದ್ಯರಾಗಿದ್ದಾರೆ

## ಟಿ.ಪಿ. ಕೈಲಾಸಂರವರ ಪ್ರಥಮ ನಾಟಕ "ಟೊಳ್ಳು-ಗಟ್ಟಿ"

ಪುಸ್ತಕಕ್ಕೆ Preface ಬರೆದ C.R. Reddy
Appreciation ಬರೆದ Mr. James H. Cousins

**ಡಾ॥ ಬಿ. ನಂಜುಂಡ ಸ್ವಾಮಿ**

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ನಾಟಕಕಾರರಾದ ಟಿ.ಪಿ. ಕೈಲಾಸಂರವರಿಗೆ ವಿಶೇಷವಾದ ಸ್ಥಾನ. ಅವರ ಬಗ್ಗೆ ನಾಲ್ಕಾರು ಪುಸ್ತಕಗಳು, ಹತ್ತಾರು ಲೇಖನಗಳು ಬಂದಿವೆ. ಕೈಲಾಸಂ ಬದುಕಿದ್ದಾಗಲೆ ದಂತಕಥೆಯಾಗಿದ್ದರು. ಅವರು ತಾವೇ ಸ್ವಂತ ಕುಳಿತು ಬರೆದವರಲ್ಲ, ತಮ್ಮ ಶಿಷ್ಯಂದಿರಿಗೆ, ಅಭಿಮಾನಿಗಳಿಗೆ ಬಾಯಲ್ಲಿ ಹೇಳಿ ಬರೆಸಿದ್ದು. ಅವರ ಪ್ರಥಮ ಮುದ್ರಿತ ನಾಟಕ "ಟೊಳ್ಳು-ಗಟ್ಟಿ". ೧೯೨೨ರಲ್ಲಿ ಮುದ್ರಣವಾದ ಪ್ರತಿ ಬೆಂಗಳೂರಿನ ರಸ್ತೆಬದಿಯ ಹಳೆಯ ಪುಸ್ತಕದ ಅಂಗಡಿಯಲ್ಲಿ ಲಭ್ಯವಾಯಿತು. ಅದರ ಮುಖಪುಟ, ಮುಂದಿನ ಎರಡು ಪುಟಗಳು, ಹಿಂಭಾಗದ ಮೂರು ಪುಟಗಳು ನಷ್ಟವಾಗಿದ್ದವು. ಕುತೂಹಲದಿಂದ ಹರಕು ಮುರಕು ಪುಸ್ತಕವನ್ನು ಕೊಂಡು ಕೊಂಡೆ.

ಪ್ರಥಮ ಮುದ್ರಣದ ಟೊಳ್ಳು-ಗಟ್ಟಿಯ ಪುಸ್ತಕದ ಮರಾಳೆ ಮೇಲೆ ಈ ಮಾಹಿತಿಯನ್ನು ಬರೆದುಕೊಂಡಿದ್ದೇನೆ. ಯಾವ ಪುಸ್ತಕದಿಂದ ಬರೆದೆ ಎಂಬುದನ್ನು ದಾಖಲಿಸಲು ಮರೆತುಬಿಟ್ಟೆ. ಆ ಮಾಹಿತಿಯನ್ನು ಯಥಾವತ್ತಾಗಿ ಕೊಟ್ಟಿದ್ದೇನೆ. "ಸರ್ವೆಂಟ್ಸ್ ಆಫ್ ಇಂಡಿಯಾ" ಸೊಸೈಟಿಯ ಪಿ. ಕೋದಂಡರಾಯರ ಪ್ರೇರಣೆಯಿಂದ, ಪ್ರಯತ್ನದಿಂದ "ಟೊಳ್ಳು-ಗಟ್ಟಿ" ಮೊದಲು ಪ್ರಕಟವಾಯಿತೆಂದು ಕೇಳಿದ್ದೇನೆ. ಇದನ್ನು ಮೊದಲು (೧೯೨೨) ಮುದ್ರಿಸಿ ಪ್ರಕಟಿಸಿದವರು ಬಿ. ಶ್ರೀನಿವಾಸ್ ಅಯ್ಯಂಗಾರ್ ಇದೇ ಕೈಲಾಸಂ ಅವರ ಮೊದಲ ನಾಟಕದ ಮೊದಲ ಮುದ್ರಣ. ೧೯೨೭ ರಲ್ಲಿ ಬೆಂಗಳೂರು ಪ್ರೆಸ್ಸಿನವರು ಇದರ ಎರಡನೆಯ ಮುದ್ರಣವನ್ನು ೧೯೪೪ ರಲ್ಲಿ ಮಾಧವ ಸನ್ಸ್ ಇದರ ಮೂರನೆಯ ಮುದ್ರಣವನ್ನು ತಂದರು ಎಂದಿದೆ.

ಜಿ.ಪಿ. ರಾಜರತ್ನಂರವರು ಬರೆದ "ಕೈಲಾಸಂ ನೆನಪು" ಪುಸ್ತಕದ ೩೨ನೇ ಪುಟದಲ್ಲಿ ಈ ಮಾಹಿತಿ ಇದೆ. "೧೯೨೩ ರಲ್ಲಿ, ಅವರ ಚೊಚ್ಚಲು ಮಗುವಾದ "ಟೊಳ್ಳು-ಗಟ್ಟಿ"ಯನ್ನು ಶ್ರೀ ಪಿ. ಕೋದಂಡರಾಯರು 'ಅಮೆಚೂರ್ ಅಸೋಸಿಯೇಷನ್' ಪರವಾಗಿ ಪ್ರಕಟಿಸಿದಾಗ ಅದಕ್ಕೆ ಅವರು ಕೊಟ್ಟ 'get-up' ಇನ್ನೂ ಈ ಹೊತ್ತಿಗೂ ಅವರ ಈಚಿನ ಪುಸ್ತಕಗಳಿಗೆ ಕೊಡಲಾಗಿಲ್ಲವಲ್ಲಾ ಎಂದಿದ್ದಾರೆ.

ಶ್ರೀ ಕೋದಂಡರಾಯರ ಹೆಸರು ಎತ್ತಿದ ಇದೇ ಸಂದರ್ಭದಲ್ಲಿ ಇನ್ನೂ ಒಂದು ಸಂಗತಿ ನೆನಪಾಗುತ್ತದೆ. 1945 ರಲ್ಲಿ ಕೈಲಾಸಂ ಕೃತಿಗಳ ವಿಮರ್ಶೆ 'ಹಿಂದೂ' ಪತ್ರಿಕೆಯಲ್ಲಿ ಪ್ರಕಟವಾಯಿತು. ಅದನ್ನು ಓದಿದೆ. ಸಂತೋಷವಾಯಿತು ಎಂದು ಶ್ರೀ ಕೋದಂಡರಾಯರು ಕೈಲಾಸಂಗೆ ಒಂದು ಕಾಗದ ಬರೆದರು. ಆ ಕಾಗದದ ಒಂದು ಅಂಚಿನಲ್ಲಿ ಕೈಲಾಸಂ ಹೀಗೆ ಬರೆದಿದ್ದಾರೆ.

This was the selfless soul that published Tollu-Gatti in 1923 at his own cost! An andhra too!

10-2-1945 Kailasam

Bangalore City

ನನಗೆ ಲಭ್ಯವಾದ ಮೊದಲ ಮುದ್ರಣದ "ಟೊಳ್ಳು-ಗಟ್ಟಿ" ಪುಸ್ತಕ ಸಂಪೂರ್ಣವಾಗಿ ಇದ್ದಿದ್ದರೆ, ಪ್ರಕಟಿತ ವರ್ಷ ೧೯೨೨, ೧೯೨೩ ಎಂಬುದನ್ನು ಖಚಿತವಾಗಿ ಹೇಳಬಹುದಾಗಿತ್ತು. ಬೆಂಗಳೂರಿನ ಹಳೆಯ ಗ್ರಂಥಾಲಯಗಳಲ್ಲಿ ಟೊಳ್ಳು-ಗಟ್ಟಿ ಪ್ರಥಮ ಮುದ್ರಣದ ಪುಸ್ತಕ ಇರಬಹುದು ನನ್ನ ಅವಲೋಕನೆಗೆ ಲಭ್ಯವಾಗಿಲ್ಲ.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ವತಿಯಿಂದ ೧೯೮೦ರಲ್ಲಿ ಸಮಗ್ರ "ಕೈಲಾಸಂ ಕೃತಿಗಳು" ಮುದ್ರಣವಾಗಿದೆ ೧೨೫೫+೮೩೬ ಪುಟಗಳ ಪುಸ್ತಕ. ಪ್ರಧಾನ ಸಂಪಾದಕರಾದ ಡಾ. ಹೆಚ್. ತಿಪ್ಪೇರುದ್ರಸ್ವಾಮಿ ಅವರು ಮುನ್ನುಡಿಯಲ್ಲಿ ಈ ಮಾತುಗಳನ್ನು ಬರೆದಿದ್ದಾರೆ. ಕೈಲಾಸಂ ಅವರ ಅನೇಕ ಕೃತಿಗಳೂ ದುರ್ಲಭವಾಗಿದ್ದುದನ್ನು ಗಮನಿಸಿ, ಅವರ ಶತಮಾನೋತ್ಸವದ ನೆನಪಿನಲ್ಲಿ ಅವರ ಕೃತಿಗಳ ಒಂದು ಸಮಗ್ರ ಸಂಪುಟವನ್ನು ಹೊರತರಬೇಕೆಂದು ೧೯೮೩ರಲ್ಲಿಯೇ ಅಧ್ಯಯನ ಸಂಸ್ಥೆ ಆಲೋಚಿಸಿತ್ತು. ಕೈಲಾಸಂ ಅವರು ಜೀವಂತವಾಗಿದ್ದ ಅವಧಿಯಲ್ಲಿ ಹೊರಬಂದಿದ್ದ ಹದಿನೇಳು ಕನ್ನಡ ಮತ್ತು ನಾಲ್ಕು ಇಂಗ್ಲೀಷ್ ನಾಟಕಗಳನ್ನು ಇದರಲ್ಲಿ ಅಳವಡಿಸಿಬೇಕೆಂದು ತೀರ್ಮಾನಿಸಲಾಯಿತು. ಹಲವಾರು ಕಾರಣಗಳಿಂದ ಕೈಲಾಸಂ ಅವರು ತೀರಿಕೊಂಡ ತರುವಾಯ ಅವರ ಹೆಸರಿನಲ್ಲಿ ಹೊರಬಂದ, ಅವರ ಕಲ್ಪನೆಗಳನ್ನು ಆಧರಿಸಿದ್ದೆಂದು ಹೇಳಲಾದ ಕೃತಿಗಳನ್ನು ಕೈಬಿಡಬೇಕೆಂದೂ ತೀರ್ಮಾನಿಸಲಾಯಿತು.

ಕೈಲಾಸಂ ಅವರ ನಾಟಕಗಳ ಜೊತೆಗೆ ಅವರ ಕಥೆಗಳು ಮತ್ತು ಕವಿತೆಗಳನ್ನು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ (೧೯೪೫) ಅವರು ಮಾಡಿದ ಅಧ್ಯಕ್ಷ ಭಾಷಣವನ್ನು ಮತ್ತು ಆ ಸಂದರ್ಭದಲ್ಲಿ ಅವರು ಮದರಾಸು ಆಕಾಶವಾಣಿಯಿಂದ ಮಾಡಿದ ಭಾಷಣವನ್ನು ಈ ಸಂಪುಟದಲ್ಲಿ ಸೇರಿಸಲಾಗಿದೆ, ಮತ್ತು ದಿ. ತಾರನಾಥ ಮತ್ತು ದಿ. ಪಿ. ಕೋದಂಡರಾವ್ ಅವರು ಕ್ರಮಶಃ 'ಹೋಂ ರೊಲ್' ಮತ್ತು ಖಣಣಟಜ ಐಚಿಥಿ ಚಿಟಿಜ ಕಟಚಿಥಿ ಕೃತಿಗಳಿಗೆ ಬರೆದಿದ್ದ 'ಕಾಣಿಕೆ' ರೂಪದ ಮುನ್ನುಡಿಗಳನ್ನು ಅನುಬಂಧ ರೂಪವಾಗಿ ಕೊಡಲಾಗಿದೆ. ಒಟ್ಟಿನಲ್ಲಿ ಇದು ಕೈಲಾಸಂ ಅವರ ಕೃತಿಗಳ ಅಧಿಕೃತ ಆವೃತ್ತಿಯಾಗಿ ಉಳಿಯಲಿದೆ ಎಂದು ಹೇಳಬಹುದು ಎಂದಿದ್ದಾರೆ.

ಈ ಮೇಲಿನ ಮಾತಿನಿಂದ ಮೈಸೂರು ವಿಶ್ವವಿದ್ಯಾನಿಲಯದ ವಿದ್ವಾಂಸರಿಗೆ "ಟೊಳ್ಳು-ಗಟ್ಟಿ" 1922 ರಲ್ಲಿ ಮುದ್ರಣವಾದ ಮೊದಲ ಮುದ್ರಣದ ಪ್ರತಿ ದೊರೆತಿಲ್ಲ. ದೊರೆತಿದ್ದರೆ ಖಂಡಿತ ಶ್ರೀ ಸಿ.ಆರ್. ರೆಡ್ಡಿಯವರ ಕಡಿಜಜಿಚಿಛಿಜ ಕನ್ನಡ ಬಲ್ಲ ಆಂಗ್ಲ ವಿದ್ವಾಂಸ ಒಡಿ. ಎಚಿಟಛಿ ಊ. ಅಂಣಾಟಿ ಬರೆದ 'ಂಠಿಠಿಡಿಜಛಿಚಿಣಟಿ' ಮತ್ತು ಟೊಳ್ಳು-ಗಟ್ಟಿ ಮುದ್ರಣಕ್ಕೆ ತಯಾರು ಮಾಡಿದ ಕೈಲಾಸಂ ಅವರ ನಿಕಟವರ್ತಿ ಬರೆದ ಒಂದು ಪುಟದ ಮುನ್ನುಡಿಯನ್ನು ಡಾ. ಹೆಚ್. ತಿಪ್ಪೇರುದ್ರಸ್ವಾಮಿ ಅವರು 1987ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾದ ಪುಸ್ತಕದಲ್ಲಿ ನೀಡುತ್ತಾ ಇದ್ದರು.

ಕನ್ನಡ ಸಾಹಿತ್ಯ ಪರಿಷತ್ತಿನಿಂದ ೨೦೦೮ ರಲ್ಲಿ ಪ್ರಕಟವಾಗಿರುವ "ಟಿ.ಪಿ. ಕೈಲಾಸಂ ಅವರ ಸಾಮಾಜಿಕ ನಾಟಕಗಳು" ಪುಸ್ತಕ ಡಾ. ಆರ್. ಮೋಹನ್‌ಕುಮಾರ್‌ರವರು ಉಸ್ಮಾನೀಯ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ. ಈ ಪುಸ್ತಕದಲ್ಲಿ ಕೈಲಾಸಂ ಅವರ ಮೊದಲ ಮುದ್ರಿತ ನಾಟಕದಲ್ಲಿ ಇರುವ ಮುನ್ನುಡಿ ಕಡಿಜಜಿಚಿಛಿಜ ಮತ್ತು 'ಂಠಿಠಿಡಿಜಛಿಚಿಣಟಿ' ಬಗ್ಗೆ ಯಾವ ವಿಧವಾದ ಮಾಹಿತಿ ಇಲ್ಲ. ಡಾ. ಆರ್. ಮೋಹನ್‌ಕುಮಾರ್ ಮಹಾಪ್ರಬಂಧ ಬರೆಯುವಾಗ ಅವರಿಗೂ ೧೯೨೨ ರಲ್ಲಿ ಮುದ್ರಣವಾದ "ಟೊಳ್ಳು-ಗಟ್ಟಿ" ನಾಟಕದ ಪುಸ್ತಕ ಸಿಕ್ಕಿಲ್ಲ. ಅವರನ್ನು ನೇರವಾಗಿ ಮಾತನಾಡಿಸಬೇಕು ಎಂದು ಪ್ರಯತ್ನಪಟ್ಟಾಗ ಅವರು ದಿವಂಗತರಾದ ವಿಷಯ ತಿಳಿಯಿತು. "ಟೊಳ್ಳು-ಗಟ್ಟಿ ಅಥವಾ ಮಕ್ಕಳಿಸ್ಕೂಲ್ ಮನೇಲಲ್ವೇ" ನಾಟಕ ಮುದ್ರಣವಾದಾಗ ಯುವಕರು ನಾಲ್ಕಾರು ಬಾರಿ ಓದಿ ಅಭ್ಯಾಸ ಮಾಡಿ ತಮ್ಮ ಸ್ನೇಹಿತರ ಮುಂದೆ ನಾಟಕದ ಮಾತುಗಳನ್ನು ಹೇಳುತ್ತಾ ರಂಜಿಸುತ್ತಿದ್ದರಂತೆ.

೧೯೨೨ ರಲ್ಲಿ ಮುದ್ರಣವಾದ ಟೊಳ್ಳು-ಗಟ್ಟಿ ಮುದ್ರಿತ ನಾಟಕದ ಐದನೇ ಪುಟದಲ್ಲಿ ಈ ಮಾತುಗಳು ಸುಬ್ಬೂ ಬಾಯಲ್ಲಿ ಬರುತ್ತೆ. "ಯೇನೋ ಮಹಾನಾಟ್ಕಾನ ಬರೆದ್ಬಿಟ್ಟನಂತೆ... ನಾನು! ಯಶಸ್ಸು! ಅಂತಸ್ತು!... ಪೋಣಿಸ್ಕೊಂಡು ಬಂದ್ಬಿಟ್ವಂತೆ... ನನ್ಗೆ!... ಕಾಳಿದಾಸ... ಕೈಲಾಸ... ಕರಿಬಸಪ್ಪ... ಕೃಷ್ಣಮಾಚಾರ್ಲು ಪಂಗಡಕ್ಕೆ ಸೇರಿಬಿಟ್ಟೆನಂತೆ...ನಾನು!

ಇಲ್ಲಿ ಕೈಲಾಸಂ ಹೇಳಿರುವುದು ಕಾಳಿದಾಸ ಅಂದರೆ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು ಕೈಲಾಸ ಅಂದರೆ ಟಿ.ಪಿ. ಕೈಲಾಸಂ ಕರಿಬಸಪ್ಪ ಅಂದರೆ ಮಹಾರಾಜ ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್‌ರವರು 'ಕರ್ನಾಟಕ ಭಾಷಾರತ್ನಂ' ಎಂದು ಬಿರುದು ಕೊಟ್ಟ ಆಸ್ಥಾನ ಮಹಾವಿದ್ವಾನ್ ಪಿ.ಆರ್. ಕರಿಬಸವಶಾಸ್ತ್ರಿಗಳು, ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದರು. ಅಂದಿನ ದಿನಮಾನದಲ್ಲಿ ಅವರನ್ನು ಕನ್ನಡ ಮುನಿಷಿ ಎಂದು ಕರೆಯುತ್ತಾ ಇದ್ದರು. ಕೃಷ್ಣಮಾಚಾರ್ಲು ಇವರು ಬಳ್ಳಾರಿ ನಗರದಲ್ಲಿ ನೆಲೆಸಿದ್ದ ವಕೀಲರು. ಇವರನ್ನು ಆಂಧ್ರ ನಾಟಕ ಪಿತಾಮಹ ಎಂದು ಕರೆಯುತ್ತಾರೆ. ಇವರು ಧರ್ಮಾವರಂನವರಾಗಿದ್ದರಿಂದ ಜನ ಇವರನ್ನು ಧರ್ಮಾವರಂ ಕೃಷ್ಣಮಾಚಾರ್ಲು ಅಥವಾ ಕೃಷ್ಣಮಾಚಾರ್ಯ ಎಂದು ಕರೆಯುತ್ತಾ ಇದ್ದರು.

ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು ಆಧುನಿಕ ರಂಗಭೂಮಿಗೆ ಅವರು ಸಲ್ಲಿಸಿದ ಸೇವೆ ಬಗ್ಗೆ ನಮಗೆಲ್ಲ ಮಾಹಿತಿ ಇದೆ. ನೂತನ ಶೈಲಿಯ ನಾಟಕಕ್ಕೆ ಕೈಲಾಸಂರವರು ಅಂದಿನ ದಿನಮಾನಕ್ಕೆ ಆಗಲೇ ಪ್ರಸಿದ್ಧರಾಗಿದ್ದರು. ಪಿ.ಆರ್. ಕರಿಬಸವಶಾಸ್ತ್ರಿಗಳು ವ್ಯಾಕರಣ, ಛಂದಸ್ಸು, ಅಲಂಕಾರ, ವಿದ್ವತ್ತಿಗೆ ಪ್ರಸಿದ್ಧರಾದವರು. ಇವರ ಶಿಷ್ಯರಾಗಿ ಪ್ರಸಿದ್ಧ ನಾಟಕಕಾರರಾದ 'ಸಂಸ' ಕನ್ನಡ ಸಾಹಿತ್ಯದ ಸಂಪೂರ್ಣ ಜ್ಞಾನ ಪಡೆದು ಅದ್ಭುತವಾದ ಸಾಧನೆ ಮಾಡಿದ್ದು ನಮಗೆಲ್ಲಾ ಗೊತ್ತಿರುವಂತಹದು. ಹೀಗೆ ಸಮಕಾಲೀನ ಎಲ್ಲಾ ವಿಷಯಗಳನ್ನು ತಿಳಿದವರು ಟಿ.ಪಿ. ಕೈಲಾಸಂ ಅವರ ಸಾಹಿತ್ಯವನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದರೆ ನಮಗೆ ಇನ್ನಷ್ಟು ವಿಷಯಗಳು ಸ್ಪಷ್ಟವಾಗುತ್ತವೆ.

ಮೈಸೂರು ಸಂಸ್ಥಾನದಲ್ಲಿ ಸಿ.ಆರ್. ರೆಡ್ಡಿಯವರಿಗೆ ವಿಶೇಷವಾದ ಸ್ಥಾನವಿತ್ತು. ಅಂದಿನ ಮಹಾರಾಜರಾಗಿದ್ದ ನಾಲ್ವಡಿ ಶ್ರೀಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್‌ರವರು ಸಿ.ಆರ್.ರೆಡ್ಡಿ ಅವರನ್ನು ಮಹಾರಾಜರು ಮೈಸೂರು ವಿಶ್ವವಿದ್ಯಾನಿಲಯ ಪ್ರಾರಂಭಿಸುವ ಮುನ್ನ ವಿದೇಶಗಳಿಗೆ ವಿಶ್ವವಿದ್ಯಾಲಯುವನ್ನು ನೋಡಿಕೊಂಡು ಬರಲು ಕಳುಹಿಸಿಕೊಟ್ಟಿದ್ದರು. ಈ ವಿಷಯ ೧೯೪೮ರಲ್ಲಿ ಮುದ್ರಿತವಾಗಿರುವ ಮೈಸೂರು ವಿಶ್ವವಿದ್ಯಾನಿಲಯದ 'ಋಟತಜಡಿ ಎಣಭುಟಜಜ ಋಂಣತಜಟುಂಡಿ' ನಲ್ಲಿ ಮಾಹಿತಿ ಇದೆ.

ಪ್ರೊ॥ ಡಿ.ಎಲ್. ನರಸಿಂಹಚಾರ್‌ರವರು ತಮ್ಮ ಪ್ರಿಯ ಶಿಷ್ಯ ಡಾ.ಎಂ. ಚಿದಾನಂದಮೂರ್ತಿರವರಿಗೆ ಮೇಲಿಂದ ಮೇಲೆ ಹೇಳುತ್ತಾ ಇದ್ದ ಮಾತು "ಮೂಲ ಪುಸ್ತಕವನ್ನು" ಮೊದಲು ನೀನು ಕಣ್ಣಿನಿಂದ ನೋಡಿ ತದ ನಂತರ ನಿನ್ನ ಅಭಿಪ್ರಾಯವನ್ನು ತಿಳಿಸು ಎಂದು. ಅಂದಿನ ಯುವ ವಿದ್ವಾಂಸರು ಟಿ.ಪಿ. ಕೈಲಾಸಂರವರ ಮೊದಲು ಮುದ್ರಣವಾದ "ಟೊಳ್ಳು-ಗಟ್ಟಿ" ಅಥವಾ ಮಕ್ಕಳಿಸ್ಕೂಲ್ ಮನೇಲಲ್ವೇ? ನಾಟಕವನ್ನು ಪರಿಶೀಲಿಸಿದ್ದರೆ ಸಿ.ಆರ್. ರೆಡ್ಡಿ ಮತ್ತು ಆಂಗ್ಲ ವಿದ್ವಾಂಸ ಜೇಮ್ಸ್ ಹೆಚ್. ಕಸಿನ್ಸ್‌ರವರ ಬರಹ ನಮಗೆ ಲಭ್ಯವಾಗುತ್ತಾ ಇತ್ತು.

ಈ ಲೇಖನ ಬರೆದದ್ದು ೨೦ ಜುಲೈ ೨೦೧೯ರಲ್ಲಿ ಡಿ.ಟಿ.ಪಿಗೆ ಕೊಟ್ಟಿದ್ದು ೨೭ ಜುಲೈ ೨೦೧೯. ಡಿ.ಟಿ.ಪಿ ಸೆಂಟರ್‌ನಲ್ಲಿ ಮೂಲ ಲೇಖನ ಕಳೆದು ಹೋದ್ದರಿಂದ ಮತ್ತೆ ಬರೆಯಬೇಕಾಯಿತು. ಮುಂದಿನವರ ಅಭ್ಯಾಸಕ್ಕಾಗಿ ಅನಾಮಿಕ ಬರೆದ ಮುನ್ನುಡಿ, ಸಿ.ಆರ್. ರೆಡ್ಡಿ ಆಂಗ್ಲಭಾಷೆಯಲ್ಲಿ ಬರೆದ Preface ಜೇಮ್ಸ್ .ಹೆಚ್ ಕಸಿನ್ಸ್ ಬರೆದ 'Appreciation' ನಾಟಕದಲ್ಲಿ ಬರುವ ಪಾತ್ರವರ್ಗ ಇಷ್ಟನ್ನು ಯಥಾವತ್ತಾಗಿ ಕೊಡಲಾಗಿದೆ. ಯುವ ವಿದ್ವಾಂಸರು ಮುದ್ರಿತ ಗ್ರಂಥಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದರೆ ಸಾಕಷ್ಟು ಹೊಸ ವಿಷಯಗಳು ಲಭ್ಯವಾಗುತ್ತವೆ.

**ಮುನ್ನುಡಿ**

ಕನ್ನಡ ಮಾತಿನಲ್ಲಿ ಕಾಲಚಿತ್ರವನ್ನೂ ಜೀವನವ್ಯಾಪಾರವನ್ನು ಇದ್ದದ್ದಿದ್ದ ಹಾಗೆ ಸ್ವಲ್ಪವೂ ವ್ಯತ್ಯಾಸವಿಲ್ಲದೆ ತೋರಿಸುವುದೇ ಈ ನಾಟಕದ ಮುಖ್ಯ ಲಕ್ಷಣ. ಆದ್ದರಿಂದ

ಈ ನಾಟಕದ ಕಥೆಯು ಸರ್ವರಿಗೂ ಸಾಮಾನ್ಯವಾದುದು. ಪಾತ್ರಗಳೆಲ್ಲರೂ ಸಾಮಾನ್ಯ ಜನರು; ಅವರಾಡುವ ಮಾತುಕಥೆಗಳು ಸಾಧಾರಣವಾಗಿರುವ ವ್ಯವಹಾರ, ವ್ಯಾಕರಣ ಬದ್ಧವಾದ ಗ್ರಾಂಥಿಕಭಾಷೆಯಲ್ಲ. ಪದ್ಯಗಳಿಗಂತೂ ಇಂತಹ ಕೃತಿಗಳಲ್ಲಿ ಅವಕಾಶವೇ ಇಲ್ಲ. ಗ್ರಂಥಕರ್ತನು ಪೂರ್ವರಂಗದಲ್ಲಿ ಹೇಳುವಂತೆ ಗ್ರಾಮಾಫೋನ್ ಮತ್ತು ತಸ್ವೀರ್ಪೆಟ್ಟಿಗೆಗಳ ಸಹಾಯದಿಂದ ಜೀವನವನ್ನು ಪ್ರತಿಬಿಂಬಿಸುವುದೇ ಇದರ ರೀತಿ. ಆದ್ದರಿಂದ ಇದರಲ್ಲಿ ವ್ಯಾವಹಾರಿಕ ಭಾಷೆಯೇ ಇರುವುದು.

ವ್ಯಾವಹಾರಿಕ ಭಾಷೆಯು ಶುದ್ಧವಲ್ಲವೆಂದು ಅನೇಕರು ತಿರಸ್ಕರಿಸುವರು. ಅದರಲ್ಲಿಯೂ ಇನ್ನೂ ಪ್ರಾಚೀನ ಶಬ್ದಗಳನ್ನುಪಯೋಗಿಸುವ ಪಂಡಿತೋತ್ತಮರಿಗೆ ಈ ರೀತಿಯು ಚನ್ನಾಗಿ ಕಾಣುವುದೇ ಇಲ್ಲ ವ್ಯಾವಹಾರಿಕ ಭಾಷೆಯ ಮಹತ್ವವು ಗ್ರಾಂಥಿಕ ಭಾಷೆಗಿರುವುದಿಲ್ಲ. ನಮ್ಮ ಭಾಷೆಯು ವೃದ್ಧಿಯಾಗುತ್ತ ಉತ್ತರೋತ್ತರ ಗದ್ಯದಲ್ಲಿ ಪ್ರಾಯಶಃ ಕೆಲವು ವ್ಯಾವಹಾರಿಕ ಪ್ರಯೋಗಗಳು ಹೆಚ್ಚಾಗಿ ಉತ್ತಮವೆನಿಸುವುವು.

ಬಾಯಿಯಲ್ಲಿ ಬರುವ ಶಬ್ದಗಳನ್ನು ಬರೆದಿಡುವುದು ಸುಲಭವಲ್ಲ, ವ್ಯಾವಹಾರಿಕ ಮಾತುಗಳನ್ನು ಉಚ್ಚರಣೆಯಲ್ಲಿ ಚಾಚೂ ಬಿಡದೆ ಬರೆದಪಕ್ಷದಲ್ಲಿ ಅದನ್ನೋದುವುದ ಸಾಧ್ಯವಾಗುವುದು. ಗ್ರಾಂಥಿಕ ರೀತಿಯಲ್ಲಿ ಬರೆದರೆ ಓದುವುದಕ್ಕೇನೋ ಅನುಕೂಲವಾಗುವುದು; ಆದರೆ ನಾಟಕದ ರುಚಿಯು ಕೆಡುವುದು. ನಮ್ಮಲ್ಲಿ- ಉಚ್ಚರಣೆಯನ್ನೇ ಅನುಸರಿಸಿ ಬರೆಯುವುದಪರೂಪ. ಹಾಗೆ ಬರೆದ ಗ್ರಂಥಗಳಿಲ್ಲ. ಇದು ಹೊಸದಾದುದರಿಂದ ಪಾಠಕರಿಗೆ ಸ್ವಲ್ಪ ಶ್ರಮವನ್ನು ಕಡಿಮೆ ಮಾಡುವುದಕ್ಕಾಗಿ ಇದರಲ್ಲಿ ಒತ್ತಕ್ಷರಗಳನ್ನು ಸ್ವಲ್ಪ ಬಿಡಿಸಿ ಸಡಿಲಿಸಿದೆ. "ನಂಗ್ಲೆಕ್ಚ್ರುಗ್ಳು ಕೇಳೋಕಷ್ಟನಿಷ್ಟ್ವಾಗಿದ್ರೂ" ಎಂಬುದು ಓದಿ ಅರ್ಥಮಾಡಿಕೊಳ್ಳುವುದಕ್ಕೆ ಕಷ್ಟ. "ನನಗೆ ಲೆಕ್ಚರುಗಳನ್ನು ಕೇಳುವುದಕ್ಕೆ" ಎಂದು ಬರೆದರೆ ಮಾತಿನ ಸ್ವಾರಸ್ಯವು ತೊಲಗಿಹೋಗುವುದು. ಆದ್ದರಿಂದ ಇದರಲ್ಲಿ ವ್ಯಾವಹಾರಿಕ ಭಾಷೆಯು ಸ್ವಲ್ಪ ಸುಲಭರೀತಿಯಲ್ಲಿ ಬರೆದಿರುತ್ತದೆ ಅಭ್ಯಾಸವು ಹೆಚ್ಚಿದಂತೆ ಇಂತಹ ಬರವಣಿಗೆಯನ್ನೋದುವುದು ಸುಲಭವಾಗುವುದು.

## PREFACE

The Indian artists, especially of the pen, are open to the reproach that they have been giving only a rehash of ancient themes, done in such a way as to spoil the simplicity and naturalness of the classical treatment, and interjecting incongruous, ugly, and jarring modern elements picked at random and thrown in without reference to context, historical properiety, or poetic harmony and beauty. This habit is so widely prevalent as to justify the inference that the imagination also along with our society and the other features of Indian culture and civilization has suffered arrested development and is no longer capable of fresh adjustments or new creations. A staleness has spread over everything; meaningless devices and novelties have come to be regarded as imaginative fights or fanciful groupings. Taste has

degenerated to less than art. Nala, Harischandra, Sakuntala of honoured, beloved, and inspiring memory are still presented but in costumes that do not fit and in companies that do not suit. There are writeres who think that if only a vulgar purohit or a corrupt policeman or a loud-mouthed lawyer is introduced into these themes of sublime grace and charm, a hit has been scored and originality perpetrated. The whole field of contemporary life lies spread before us awaiting artistic culture : but the capacity to deal with it, to bring out the humour and pathos, the tragedy and comedy that are in it, is not so wide-spread as one would have thought from the abundance of so-called literary publications.

Cultural as well as physical vitality seems to depend on some amount of cross breeding; and the crossing of environments has always been a potent cause of creative evolution. The poets who have used the stuff of modern life as the raw material of art are mostly men who have been touched by western influences. True, there is an eternal element in all life-the common thread that runs through the ages and binds them into the garland of the Absolute. But the individual and concrete, through which alone art interprets the eternal, is temporal in its character and if this is neglected, poetry becomes a sort of philosophy, especially if it is not sufficiently charged and illumined by mystic emotion; and this is precisely what has happened to a deplorable degree in India. That grasp of the real, the concrete and individual is what distinguished our ancestors of the Vedic and Epic periods, and what distinguished the Westerners, the Japanese, and other progressive peoples of to-day. Progress is achieved by recognizing and rectifying facts; and not by hanging on, as with the grasp of death rigour, to the neck of the Eternal. Well, it is as a result of the contact between East and West, felt in themselves, that poets like Tagore have been able to invest our life and longings with the radiance of poetry, and to endow idealism with the arresting attraction of the real and fascination of the flesh.

My friend, Mr. Kailasam, the author of "Tollu-gatti" (Hollow and Solid) is a creative artist, though of a different order. He has less of the imagination of the nineteenth century than of the critical realism and rationalism of the eighteenth. As a humourist and satirist, he has few equals. In the Kannada country, I suppose, he occupies a unique position : he is a solitary with none to keep him company, except as audience.

Doubtless Telugu literature has shown a richer and more

various activity. Veeresalingam, discovered by a slow process of self-development-he is about the one exception to the rule of western contact mentioned above-the better way and truer; and he has been followed by a number of writers with remarkable success. The response to the new music of Tagore has been deep and spontaneous. Mr. Royaprolu Subba Rao, Mr. Abburi Ramakrishna Rao and others are not mere imitators of Tagore but independent creators after his spirit. Social satire and social reform have been the favourite passion of the Andhras. No reformer or progressive can afford to ignore the facts of contemporary life. And Telugu literature has thus been a living theme and influence, and not a peg on which the glorious garments of our ancient Rishis and other dwellers of sanctified forests are washed and coloured in muddy streams of thetoric and hung up again for exhibition as novelties.

But the Kannada country has so far not participated in the new life. It does not possess administrative unity; and the influences, secular and sacred that dominate it are mostly of the puranic order and complexion. "Tollu-gatti" is almost the first symptom of the stirring of a new life in it, a rejuvenation of its ancient heart.

And what a wonderful satire it is? Telugu satire chose the easier field of our social absurdities and sanctified inhumanities for its operations. Subtler far than well-recognized social evils, less familiar and more difficult is the objective of Mr. Kailasam-an exposure of that over-valued commodity of the matrimonial market, the Educated Boy, and, let me add, by implication, the Educated Girl. I have never seen portraits more faithful and convincing than those of the personae in this drama; and after sitting through the performance one does not know whether to laugh or cry. If he had been a mere moralist he would have made you cry perhaps; but being an artist he evokes as complex feelings as nature herself. The contrast effects reflected by the two brothers are aesthetically exquisite and morally revolting-touches worthy of Balzac himself. The clever-at-books brother, lauded and petted for passing examinations; commanding a high premium in the matrimonial stock exchange; the darling of the father and the envy of the neighbours; physically weak; a coward both morally and physically, in the scale of humanity, of no weight or worth; yet possessing high value in the debased currency of the Hindu society of to-day; leading a life of gross selfishness and all the while fancying that was the higher life modelled after the pattern of noble duty, his very conscience perverted; and as against him the dull brother, abused

by everybody because he does not pass examinations; yet a man, with a tender heart, generous impulses, strength, courage, the very embodiment of the idela of education a sound mind in a sound body; and above these and the vulgar father, also too true to type, and shedding a tender light an all, the pathetic figure of the sick mother- these and other pictures get transfixed in your feellings and memory on even a first acquaintance. Truth is not established by repetition: love springs at first sight : for in the realm of pure nature and art the first is not the casual : it is the essential and there is never a second.

Greater than any writer I have known in South India is Mr. Kailsam in dramatic technique. It is perhaps no exaggeration to say that geniuses like Veeresalingam an Appa Rao did not possess the right technique in a measure worth taking into account. Mr. Kailasam's execution is faultless, almost perfect. He writes for the stage, and not for the library; he writes as an actor to actors, and not as a scholar to readers.

Here is a diamond of the first quality and cut in the best style. Fortunate is the Kannada country that it has such a jewel to wear!

I honour and admire Mr. Kailsam for the present he has made to the literature of his Motherland. The appreciation expressed here is far less than what is felt in my heart; but he knows the insufficiency of tongue and pen to portray the emotions.

Chittoor, C.R. REDDY

An Appreciation by Mr. James H. Cousins

------- ------

But what I regard as a most significant event was the presentation of "TOLLU-GATTI" (Hollwo and Solid) in the Kanarese language. In this play we have an excellent example of drama built out of daily life, and built so expertly that, while the play is self-contained as regards motive and structure, it is a piece of ripping satire on the artificial importance attached to the winning of a University Degree. The "Educated" son is a prig (hollow), the "failed" son is useful (solid) and a standby in an emergency. The author very skilfully makes the defects and qualities of his two student characters purely personal; we are not left with the generalization that all graduates are hollow and all failures solid. But through the juxtaposing of these two characters the author makes his irony converge upon the father, whose pampering of the successful son and persecuting the failure arises

out of his distorted standard of human values. Seeing this play and the keen enjoyment of the audience. One felt hopeful for the future of Indian Drama. When the Drama begins to criticise life, it is not far from the salutary work of criticising itself, and self-criticism means the beginning of new life."

ಪಾತ್ರಗಳು

| | | |
|---|---|---|
| ಹಿರಿಯಣ್ಣಯ್ಯ | : | ಕಸಬಾ ಹೋಬಳಿ ಹೆಡ್‌ಮುನುಷಿ |
| ರಾಮಾಶಾಸ್ತ್ರಿ | : | ರೀಡಿಂಗ್ ರೂಮ್ ರೈಟರು |
| ಪುಟ್ಟು | : | ಹಿರಿಯಣ್ಣಯ್ಯನ ಹಿರೀಮಗ |
| ಮಾಧು | : | " ಕಿರೀಮಗ |
| ಭಾಗೀರಥಮ್ಮ | : | " ಪತ್ನಿ |
| ನಾಗಮ್ಮ | : | " ತಂಗಿ (ವಿತಂತು) |
| ಪಾತು | : | " ಹಿರೀಸೊಸೆ |
| ಸಾತು | : | " ಕಿರೀಸೊಸೆ |

ರೀಡಿಂಗ್ ರೂಮ್ ಮೆಂಬರುಗಳು, ನೆರೆಹೊರೆಯವರು ಕೂಲಿ, ಕೂಸು

# ಕಾಣುತ್ತಾ ಕಾಣಿಸುವ 'ಜನ ಗಣ ಮನ'

ಡಾ.ಎಚ್. ಶಶಿಕಲಾ

'ಶೋನಾರ್ ಬಾಂಗ್ಲಾ' ಮತ್ತು 'ಕಳಿಂಗ' ರಾಜ್ಯಗಳ ಕುರಿತಾದ 'ಜನ ಗಣ ಮನ' ಪ್ರವಾಸ ಕಥನವು ಓದುಗರ ಮುಂದೆ ಮಂಡಿಸುವ ಕ್ರಮದಲ್ಲಿಯೇ ಒಂದು ಹೊಸತನವನ್ನು ತೆರೆದಿಡುತ್ತದೆ. ೧೯೬೮ರ ಅವಧಿಯಲ್ಲಿ ಶ್ರೀ ಹೆಚ್.ಎಸ್. ರಾಘವೇಂದ್ರ ರಾವ್ ಅವರು ಕೈಗೊಂಡ ಎರಡು ರಾಜ್ಯಗಳ ಪ್ರವಾಸವು ಅಲ್ಲಿನ ಬದುಕಿನ ಒಳಹೊರಗನ್ನು ತೆರೆದಿಡುವ ಪ್ರವಾಸವೂ ಆಗಿದೆ.

ಲೇಖಕರು ಇಡೀ ಪುಸ್ತಕವನ್ನು ಮೂರು ಭಾಗವಾಗಿ ವಿಂಗಡಿಸಿಕೊಂಡಿದ್ದಾರೆ. ಬಂಗಾಳದ ರವೀಂದ್ರರ ಜನ ಗಣ ಮನ ರಾಷ್ಟ್ರಗೀತೆಯು ಇಲ್ಲಿ ಭಾರತದ ಪ್ರವಾಸದ ಮೂಲಕ ಕೈಗೊಂಡ ಭಾರತ ಗಣರಾಜ್ಯದ ಜನರ ಮನವನ್ನು ಹಿಡಿಯುವುದಾಗಿದೆ. ೧೯೬೮ರ ಕಾಲದ ಒಂದು ತುಣುಕನ್ನು ಭಾಷೆಯಲ್ಲಿ ಅಚ್ಚುಹೊತ್ತಿದಂತೆ ದಾಖಲಿಸುತ್ತಾ ಹೋದ ಕ್ರಮದಲ್ಲಿ, ಅವು ದಾಖಲೆಗಳಾಗಿಲ್ಲ; ಬದಲಾಗಿ ಅತ್ಯಂತ ಕಲಾತ್ಮಕವಾಗಿ ವಿವಿಧ ಕೋನಗಳಿಂದ ತೆರೆದ ಫೋಟೋಗ್ರಫಿಯಂತೆ ಕಾಣುತ್ತದೆ. ಇದರಿಂದ ಜಿ.ಎಸ್.ಶಿವರುದ್ರಪ್ಪ ಹೇಳುವಂತೆ, 'ಒಂದು ರಸಿಕತನ' ಬರಹಕ್ಕೆ ಸಹಜವಾಗಿಯೇ ಇದೆ. ಬಂಗಾಳ ಮತ್ತು ಒರಿಸ್ಸಾ ರಾಜ್ಯಗಳ ರಾಜಕೀಯ, ಸಾಹಿತ್ಯಕ ವಿದ್ಯಮಾನಗಳ ಜೊತೆಜೊತೆಯಲ್ಲಿಯೇ ಸಾಗುವ ವಿವರವು ಕಾಣುತ್ತಾ ಕಾಣುತ್ತಾ ಕಾಣಿಸುವುದಾಗಿದೆ. ಈ ಕೆಳಗಿನ ಸಾಲುಗಳನ್ನು ಗಮನಿಸಿ:

" ಬಂಗಾಳಿಗಳು ತಕ್ಷಣ ತೋಚಿದ್ದನ್ನು ಮಾಡುವವರು. ಬಹಳ ಭಾವುಕರು. ಒಮ್ಮೆ ನಿಮಗೆ ಅವರ ನಿಜವಾದ ಪರಿಚಯುವಾದರೆ ನೀವು ಅವರನ್ನು ಪ್ರೀತಿಸತೊಡಗುತ್ತೀರಿ. ಅವರೂ ಅಷ್ಟೇ. ಪ್ರೀತಿ ತುಂಬಿದ ಜನ. ಅದರಲ್ಲೂ ಅವರ ಪ್ರೀತಿ ಬಾಳಿಕೆ ಬರುವಂತಥದು. ಅವರ ಇನ್ನೊಂದು ವಿಶಿಷ್ಟತೆಯೆಂದರೆ ತಮ್ಮ ಭಾಷೆಯ ಬಗ್ಗೆ ಅವರಿಗಿರುವ ಪ್ರೀತಿ. ಪ್ರಾಯಶ: ಇಡೀ ದೇಶದಲ್ಲೇ ಇಂಥ ಸ್ವಭಾಷಾಪ್ರೇಮ ಕಾಣಿಸುವುದಿಲ್ಲ. ನಿಮಗೆ ಬಂಗಾಳಿ ಬಂದರೆ ಮುಗಿಯಿತು. ಅವರ ಮನೆ ಮನಗಳ ಎಲ್ಲ ಬಾಗಿಲುಗಳೂ ನಿಮಗಾಗಿ ತೆರೆಯುತ್ತವೆ."

ಇದು ವಿಷಯದ ಮಂಡನೆಯ ಕ್ರಮವೋ ವಿಷಯ ಗ್ರಹಿಕೆಯ ವೈಶಿಷ್ಟ್ಯತೆಯೋ ಎಂಬುದನ್ನು ಯೋಚನೆಗೆ ಹಚ್ಚುವಂತೆ ಮಾಡುತ್ತದೆ. ಸೃಜನಶೀಲತೆ ಎನ್ನುವುದು

ಎಂದೂ ಲೋಕವನ್ನು ತನ್ನೊಳಗೆ ತೆಗೆದುಕೊಳ್ಳುವ ಗ್ರಹಿಕೆಯಲ್ಲಿಯೇ ಇರುವಂತಹದ್ದು ಎಂದು ನಂಬುವ ನನಗೆ, ಈ ಕೃತಿಯು 'ಲೋಕಗ್ರಹಿಕೆ' ಮತ್ತು 'ಬರವಣಿಗೆಯಲ್ಲಿನ ಲವಲವಿಕೆ' ಇವೆರಡೂ ಬೇರೆಯೇ ಆಗಿಲ್ಲ ಎಂಬುದನ್ನು ಇನ್ನಷ್ಟು ಮನದಟ್ಟು ಮಾಡಿಸುತ್ತದೆ.

ಬಂಗಾಳಿ ಭಾಷೆಯ ಸೊಗಡಿನ ಪನ್ನೀರನ್ನು ಎರಚುತ್ತಾ ಎರಚುತ್ತಾ ಬರಹ ಸಾಗುತ್ತದೆ. 'ಮೊಂಜರಿ', 'ಚೊಕ್ರಬೊರ್ತಿ', 'ರೊಶೊಗೊಲ್ಲಾ',

' ಅಗಾಮಿ ಸ್ಟೇಷನ್ ರೊಬಿಂದ್ರೊ ಶೊದನ್', 'ಚೊಂದಾ' . . . ನಾವು ನೀವು ಕೇಳಿರುವ ಬಂಗಾಳಿ ಪದಗಳ ಸವಿರುಚಿಯೊಂದಿಗೆ, ಭಾಷೆಯಲ್ಲಿಯೇ ಬಂಗಾಳದ ಅನುಭವದ ರುಚಿ ತೋರಿಸುತ್ತದೆ.

* * *

ಪ್ರವಾಸವೆಂದರೆ ನಿಜವಾದ ಅರ್ಥದಲ್ಲಿ ಅನುಭವ ಲೋಕದ ವಿಸ್ತರಣೆ. ಗೊತ್ತಿರುವುದರಿಂದ ಗೊತ್ತಿಲ್ಲದ್ದನ್ನು ಗೊತ್ತು ಮಾಡಿಕೊಳ್ಳುವಿಕೆ. ಇನ್ನೊಂದು ಕ್ರಮದಲ್ಲಿ ಹೇಳುವುದಾದರೆ, ಇದುವರೆಗಿನ ತನ್ನ ತಿಳುವಳಿಕೆಯನ್ನು ಪ್ರವಾಸವೆಂಬ ವರ್ತಮಾನದಲ್ಲಿಟ್ಟು ಬಗೆಯುವ ಬಗೆ. ಎಂಬತ್ತರ ದಶಕದಲ್ಲಿದ್ದ 'ಕೆಂಪು ಬಂಗಾಳ'ದ ಒಳಗು ಹೊರಗನ್ನು ಅರಿಯುವ, ತಾತ್ವಿಕವಾಗಿದ್ದದ್ದನ್ನು ಅನುಭವದ ಒರೆಗಲ್ಲಿನಲ್ಲಿ ಉಜ್ಜಿನೋಡುವ, 'ಕೆಂಪಿ'ನ ವಸ್ತುಸ್ಥಿತಿಯನ್ನು ಬದುಕಿನ ಸಂದರ್ಭದಲ್ಲಿ ಕಂಡುಕೊಳ್ಳುವುದು ಈ ಬರಹದಲ್ಲಿ ಬಹಳ ಮುಖ್ಯವಾಗಿದೆ. ಹೆಚ್.ಎಸ್.ಆರ್. ಅವರ ಮಾತುಗಳಲ್ಲೇ ನೋಡಿ:

"...ಹೂಗ್ಲಿ ನದಿಯಲ್ಲಿ ಬೇಕಾದಷ್ಟು ನೀರು ಹರಿದಿದೆ. ಅವರದೇ ಸರ್ಕಾರದ ಆಡಳಿತ ಹಲವು ವರ್ಷಗಳಿಂದ ನಡೆದಿದೆ. ನನಗೆ ತೋರುವ ಹಾಗೆ ಕಲ್ಕತ್ತಾದ ಸ್ಥಿತಿಗತಿಗಳಲ್ಲಿ ಸಾಕಷ್ಟು ಬದಲಾವಣೆ ಆಗಿದೆ. ಅದು ಜನರು ಹೇಳುವಷ್ಟು ಕೊಳಕಲ್ಲ. ಅಲ್ಲಿನ ಪೇಟೆ ಧಾರಣೆ ಖಂಡಿತವಾಗಿಯೂ ಬೆಂಗಳೂರಿನಷ್ಟು ತುಟ್ಟಿಯಲ್ಲ. ಸಾಂಸ್ಕೃತಿಕ ಜೀವನ ಮುಂಬಯಿಯಷ್ಟು ಫಿಲ್ಮಿ ಅಲ್ಲ; ಯಾಂತ್ರಿಕ ಅಲ್ಲ. ರಾಜೀವ ಗಾಂಧಿಯವರು ಅಪ್ಪಣೆ ಕೊಡಿಸಿದ ಹಾಗೆ ಅದು ಸಾಯುತ್ತಿರುವ ನಗರವಂತೂ ಖಂಡಿತ ಅಲ್ಲ. ಅಶೋಕಮಿತ್ರ ಅವರು ಹೇಳುವ ಅರಾಜಕತೆಯ ಹಿಂದೆ ಒಂದು ಜೀವಂತಿಕೆ ಇದೆ. ನಿಗೂಢತೆಯದೇ ಆದ ಚೆಲುವಿದೆ. ನಮ್ಮ ಈ ದೇಶದ ಹೃದಯವಾದ ಹಳ್ಳಿಗಳು ಈ ನಗರದ ಗಲ್ಲಿಗಲ್ಲಿಗಳಲ್ಲಿ ಬೇರು ಬಿಟ್ಟಿವೆ. ಭಾರತೀಯತೆಯ ಅಂತರಂಗದ ಸುತ್ತ ಅಲ್ಲಲ್ಲಿ ಮೆತ್ತಿಕೊಂಡಿರುವ ಪಾರ್ಕ್ ಸ್ಟ್ರೀಟ್‌ನ ಪರಂಗಿ ಹಣ್ಣುಗಳನ್ನು ಬಿಟ್ಟರೆ, ಇದೊಂದು ನಗರ ಮಾತ್ರವೇ 'ಅಪ್ಪಟ ಭಾರತೀಯ ಮಹಾನಗರ'ವಾಗಿದೆ, ನಮ್ಮ ದೇಶದ ಸಾಂಸ್ಕೃತಿಕ ಕೇಂದ್ರವಾಗಿದೆ. ನನ್ನ ಮಾತಿಗೆ ಪುರಾವೆಗಳನ್ನು ಒದಗಿಸಲೆಂದು, ಈ ನಗರದ, ಎಂದರೆ ಈ ರಾಜ್ಯದ 'ಜನ–ಗಣ–ಮನ'ಗಳ ಪಕ್ಷಿನೋಟವನ್ನು ಕೊಡುವ ಉದ್ದೇಶ ನನ್ನದು. ಇದು ಕೇವಲ ಬುದ್ಧಿಜೀವಿಗಳ ವಿಚಾರಧಾರೆಯ ನಿರೂಪಣೆಯಾಗಲೀ ಆಗಬಾರದೆಂದು ನನ್ನ ಬಯಕೆ. ಏಕೆಂದರೆ ಇದು 'ನಾನು' ನೋಡಿದ ಕಲ್ಕತ್ತಾ.."

ಇಂದು ೨೦೧೭ರಲ್ಲಿ ಬಂಗಾಳವನ್ನು, ಕಲ್ಕತ್ತಾವನ್ನು ನೋಡುವಾಗ 'ಕೆಂಪಿ'ನ ಪರಿಣಾಮವು ಬಂಗಾಳವನ್ನು ಯಾವ ಸ್ಥಿತಿಯಲ್ಲಿಟ್ಟಿತ್ತು ಎಂಬುದನ್ನು ಅರಿಯಲು ಸಾಧ್ಯಮಾಡಿಕೊಡುತ್ತದೆ. ವಸಾಹತುಶಾಹಿಗೆ ಮೊದಲು ಸ್ಪಂದಿಸಿದ ಬಂಗಾಳವು ಇಡೀ ಭಾರತದಲ್ಲಿ ಮೊದಲು ಎಚ್ಚತ್ತುಕೊಂಡ ಭಾಗವಾಗಿತ್ತು. ಭಾರತದ ಬುದ್ಧಿಜೀವಿಗಳ, ಸಂವೇದನಾಶೀಲ ಜನಗಳ, ಭಾರತಕ್ಕೆ ಮೊದಲು ನೊಬೆಲ್ ಪಾರಿತೋಷಕವನ್ನು ತಂದುಕೊಂಡ ಬಂಗಾಳವು ತನ್ನ ಸಾಂಸ್ಕೃತಿಕ ಲೋಕದಲ್ಲಿ ತೋರಿದ ಸ್ವಂತಿಕೆಯ ಬಗ್ಗೆ ಭಾರತದ ಉಳಿದ ಭಾಗಕ್ಕೆ ಸಹಜವಾಗಿಯೇ ಕುತೂಹಲ. ರಾಜಕೀಯವಾಗಿ ಎಡಪಂಥೀಯತೆಯನ್ನು ಹಲವಾರು ದಶಕಗಳ ಕಾಲ ಅಳವಡಿಸಿಕೊಂಡ ಬಂಗಾಳದ ಬೆಳವಣಿಗೆಯನ್ನು ಬದಲಾವಣೆಯನ್ನು ಕುತೂಹಲದ ಕಣ್ಣುಗಳಿಂದ ಎಂಬತ್ತರ ದಶಕದಲ್ಲಿ ಗಮನಿಸುತ್ತಿದ್ದದ್ದನ್ನು ಹೆಚ್.ಎಸ್.ಆರ್ ಅವರು ಹಿಡಿದಿರುವ ಮಾದರಿಯಂತೂ ಕರಾರುವಾಕ್ಕು. ಇಂದು ಬಂಗಾಳ ಭಾರತಕ್ಕೆ ತನ್ನನ್ನು ತೆರೆದುಕೊಂಡಿದೆ. 'ಕೆಂಪಿ'ನ ಪರಿಣಾಮವು ಇಂದು ಮನದಟ್ಟಾಗಿದೆ. ಆದರೆ ಭಾರೀ ನಿರೀಕ್ಷೆಯಿಂದ ಈಕ್ಷಿಸುತ್ತಿದ್ದ ಕಣ್ಣುಗಳಿಗೆ ಮತ್ತು ಯಾವ ಒಂದು ಪ್ರಗತಿಯ ಚಿತ್ರವನ್ನು ನಿರೀಕ್ಷಿಸುತ್ತಿದ್ದೇವೋ ಆ ಮನಸ್ಸುಗಳಿಗೆ ಪ್ರವಾಸೀ ಕಣ್ಣುಗಳು ಒದಗಿಸಿದ ಮಾಹಿತಿಯಂತೂ ಅಥೆಂಟಿಕ್! ಆರಕ್ಕೇರದ, ಮೂರಕ್ಕೆ ಇಳಿಯದ, ಭಾರತದ ಇತರ ಎಡೆಗಳಿಗಿಂತ 'ಕೆಂಪಿ'ನಿಂದಾಗಿ ತೀರಾ ಮುಂದುವರಿದ ರಾಜ್ಯವಾಗಿ ಬೆಳೆದುಬಿಡದಂತಾಗಲು ಇದ್ದ ಕಾರಣಗಳು ಇವತ್ತಿಗೆ ಅಂದರೆ ಮೂರು ದಶಕಗಳಿಗೆ ಮಿಕ್ಕು ಮೀರಿದ ಕಾಲದಲ್ಲಿ ತೋರುತ್ತಿರುವುದನ್ನು ನಮಗೆ ಸ್ಪಷ್ಟವಾಗಿ ಅಂದೇ ಗೋಚರಿಸುವಂತೆ ಮಾಡಲಾಗಿದೆ.

* * *

ಒಂದೆಡೆ ಬಂಗಾಳಿ ಸಂಸ್ಕೃತಿಯ ಪ್ರತಿನಿಧೀಕರಣದಂತಿದ್ದ ರಬೀಂದ್ರರನ್ನು ಒಂದು ಸಾಂಸ್ಕೃತಿಕ ರಾಯಭಾರಿಯಾಗಿ ಬಳಸಿಕೊಂಡ ಹಿನ್ನೆಲೆಯಲ್ಲಿನ ವಾಸ್ತವತೆಯನ್ನು ಶಿಶಿರ್ ಘೋಷರ ಪ್ರತಿಕ್ರಿಯೆಯಲ್ಲಿ ಕಾಣಬಹುದು. ಇಡೀ ಭಾರತವು ನವೋದಯ ಸಂದರ್ಭದ ಒಂದು ಐಕಾನ್ ಆಗಿ ರವೀಂದ್ರರನ್ನು ನೋಡುತ್ತಿರುವಾಗ ಅಲ್ಲಿಯವರೇ ರವೀಂದ್ರರನ್ನು ಹೇಗೆ ತಮ್ಮೊಳಗು ಮಾಡಿಕೊಂಡಿದ್ದರು ಎಂಬ ಬಗ್ಗೆ ಶಿಶಿರ್‌ರನ್ನು ಮಾತಿಗೆಳೆದ ಪ್ರವಾಸೀ ಮನಸ್ಸಿನ ಹಿನ್ನೆಲೆಯಲ್ಲಿ ಗಮನಿಸಬಹುದು. ಶಿಶಿರ್ ಅವರು "ತಾವು ಟ್ಯಾಗೋರರ ಕಟು ವಿಮರ್ಶಕ ಎಂದರು. ಕವಿಯಾಗಿ, ಸಾಹಿತಿಯಾಗಿ ಅವರೊಬ್ಬ ರೊಮ್ಯಾಂಟಿಕ್ ಆಗಿದ್ದರೆಂದರು. ಮಹಾನ್ ಪ್ರತಿಭೆಯು ಸಹಜವಾಗಿಯೇ ಕ್ಷಣಿಕ, ಚಂಚಲ ಎಂದರು". ಅದಕ್ಕಿಂತಲೂ ಹೆಚ್ಚಾಗಿ ಅವರು ರವೀಂದ್ರರನ್ನು ಕಂಡುಕೊಂಡಿರುವುದು, "ಶಾಂತಿನಿಕೇತನವನ್ನು ಕಟ್ಟಿದ ರವೀಂದ್ರರು ಒಳ್ಳೆಯ ವ್ಯವಸ್ಥಾಪಕರಾಗಿದ್ದರು, ಜಾಣರಾಗಿದ್ದರು. ಆದ್ದರಿಂದಲೇ ತನ್ನ ಹೆಸರಿನ ಪ್ರಭಾವಳಿಯ ಸುತ್ತ ಒಂದು ಪಂಥವನ್ನು ಕಟ್ಟಲು, ಜೀವಂತ ದಂತಕಥೆಯಾಗಲು ಅವರಿಗೆ ಸಾಧ್ಯವಾಯಿತು. . . ಶ್ರೀ ಅರವಿಂದರು ಯೋಗಿಯಾದರೆ, ರವೀಂದ್ರರು ತಮ್ಮ ಕನಸುಗಳನ್ನು ಕಾವ್ಯವಾಗಿಸಿದರೇ ವಿನಾ ವಾಸ್ತವವಾಗಿಸಲಿಲ್ಲ. ಅವರು 'ಮಿಥ್' ಒಂದನ್ನು

ಸೃಷ್ಟಿಸಿದರು. ಅದು ಅವರ ಸುತ್ತಲು ನಿರ್ಮಿತವಾದ ಮಿಥ್ ಆಗಿತ್ತು." ಈ ಮಾತುಗಳು ರವೀಂದ್ರರನ್ನು, ರವೀಂದ್ರರು ಯಾಕೆ ಯಾರೇ ಒಬ್ಬ ಮಹಾನ್ ಪುರುಷನನ್ನು ನೋಡಲು ಬೇಕಾದ ಒಂದು ವಿಮರ್ಶಾತ್ಮಕ ನೋಟದ ಸ್ಪಷ್ಟತೆಯನ್ನು, ಅಗತ್ಯತೆಯನ್ನು ನೀಡುತ್ತದೆ.

ಅಂತೆಯೇ ನವನೀತಾ ದೇವ್ ರವೀಂದ್ರರನ್ನು ನೋಡುವ ದೃಷ್ಟಿಕೋನದ ವಿಭಿನ್ನತೆಯನ್ನೂ ಇದರೊಡನೆಯೇ ದಾಖಲಿಸುತ್ತಾರೆ. ಬರಹಗಾರ್ತಿ ನವನೀತಾ ಅವರ ಮಾತುಗಳನ್ನು ಕೇಳಿ: " ನಾನಾದರೋ ಮೊದಲಿನಿಂದ ಅವರನ್ನು ಇಷ್ಟಪಡುತ್ತಾ ಬಂದವಳು. ನಾವು ಟ್ಯಾಗೋರರ ಹಾಗೆ ಮಾತನಾಡಲು ಕಲಿತೆವು. ಅವರ ಹಾಗೆ ಪ್ರೀತಿಸಲು ಕಲಿತೆವು. ನಮ್ಮ ಹಿಂದಿನ ಪೀಳಿಗೆಗಳವರಿಗೆ 'ದೇವರು' ಕೊಡುತ್ತಿದ್ದ ಮನಶ್ಶಾಂತಿಯನ್ನು ನಮಗೆ ರವೀಂದ್ರರ ಕವಿತೆಗಳು ಕೊಡುತ್ತವೆ. ನಮಗೆ ದು:ಖ ಬಂದಾಗ ನಾವು ಅವರ ಸಂಕಲನವೊಂದರಿಂದ ಶಕ್ತಿ ಪಡೆಯುತ್ತೇವೆ. ಹಿಂದೂಧರ್ಮದ ಬದಲಾಗಿ ಅವರು; ನಾಸ್ತಿಕತೆಯ ಬದಲಾಗಿ ಅವರು."

ಪ್ರವಾಸೀಯ ಮನಸ್ಸಿಗಿರುವ ಕಣ್ಣುಗಳು ರವೀಂದ್ರರ ಬಗ್ಗೆ ಬಂಗಾಳದ ಸಮುದಾಯದ ನಿಲುವುಗಳನ್ನು ಹೇಗೆ ತಲೆಮಾರಿನಿಂದ ತಲೆಮಾರಿಗೆ ಒಂದು ಸಾಂಸ್ಕೃತಿಕ ವ್ಯಕ್ತಿತ್ವವನ್ನು ತನ್ನ ಕಾಲದ ಅಗತ್ಯಕ್ಕೆ ತಕ್ಕಂತೆ ಮಾರ್ಪಾಡುಮಾಡಿಕೊಂಡು ತಮ್ಮೊಳಗೆ ರೂಪಿಸಿಕೊಳ್ಳುತ್ತಾ ಹೋಗುತ್ತಾರೆ ಎಂಬುದನ್ನು ಹುಡುಕುತ್ತವೆ. ಒಂದು ಭಾವುಕ ನೆಲೆಗಿಂತಲೂ ಕಣ್ಣು ಕಂಡದ್ದರ ಹಿಂದಿನದ್ದನ್ನು ಹುಡುಕುವ 'ಶೋಧಕ ಪ್ರವೃತ್ತಿ' ಮುಖ್ಯವಾದ ಒಂದು ನಿಲುವಾಗಿ ಇಲ್ಲಿಯ ಪ್ರವಾಸಿ ಕಂಡುಬರುತ್ತಾರೆ.

* * *

ಎರಡನೆಯ ಭಾಗ 'ಜನ' ಒಂದು ರೀತಿಯಲ್ಲಿ ಇಡೀ ಬಂಗಾಳದ ಸಾಂಸ್ಕೃತಿಕ ವ್ಯಕ್ತಿತ್ವಗಳನ್ನು ಪರಿಚಯಿಸುವ ಕೆಲಸ. ಬಂಗಾಳದ ವಿಭಿನ್ನ ವ್ಯಕ್ತಿತ್ವಗಳು ಒಂದು ಸಮುದಾಯವನ್ನು ಕಟ್ಟುವ ಹಿಂದಿನ ತಿಳುವಳಿಕೆಗಳನ್ನು ಹಿಡಿಯುವ ಕೆಲಸವನ್ನು ಇಲ್ಲಿಯ ಪ್ರವಾಸಿ ಮಾಡುತ್ತಾರೆ. ರಸ್ತೆಗಳಲ್ಲಿನ, ಟ್ರಾಮ್‌ಗಳಲ್ಲಿನ, ಮೆಟ್ರೋದಲ್ಲಿನ, ಗಲ್ಲಿ ಗಲ್ಲಿಗಳಲ್ಲಿನ ಜನಗಳಿಗಿಂತ ಇಂತಹ ಗಣಗಳನ್ನು ರೂಪಿಸುವ, ಅವರ ಚಿಂತನೆಯ ದಿಕ್ಕು ದೆಸೆಗಳನ್ನು ರೂಪಿಸುವ ಮನಸ್ಸುಗಳ ಮುಖ್ಯ ಕೇಂದ್ರವಾದ ಸಾಂಸ್ಕೃತಿಕ ವ್ಯಕ್ತಿತ್ವಗಳಿಗೆ 'ಜನ'ಎಂಬ ಹೆಸರನ್ನು ಸೂಚಿಸಿರುವುದು ಬಹಳ ರೂಪಕಾತ್ಮಕವಾಗಿದೆ. ಬಂಗಾಳದ ಧೀಮಂತ ವ್ಯಕ್ತಿತ್ವಗಳ ಭೇಟಿ ಹೊರಗಿನ ಭೌತಿಕ ಸ್ಥಿತಿಗತಿಗಳಿಗಿಂತ ಆಂತರಿಕವಾಗಿ ತುಡಿಯುತ್ತಿರುವ ವರ್ತಮಾನಕ್ಕೆ ಸ್ಪಂದಿಸುತ್ತಿರುವ, ಕಟ್ಟುವ ಹಂಬಲದಲ್ಲಿ ಬವ, ಇಂದು ರಾಜಕೀಯವಾಗಿ ಬದಲಾದ ವ್ಯವಸ್ಥೆಯ ಹಿಂದೆ ಇದ್ದ ಮನಸ್ಸುಗಳನ್ನು ದಾಖಲಿಸುವ ಕೆಲಸವನ್ನು ಬಹಳ ಸಮರ್ಪಕವಾಗಿ ಮಾಡಲಾಗಿದೆ. ಅದೆಷ್ಟು ಜನ, ಅದೆಷ್ಟು ವಿಭಿನ್ನ ಲೋಕಗ್ರಹಿಕೆಗಳು! ಒಂದೇ ಎರಡೆ? ಶಿಶಿರಕುಮಾರ ಘೋಷ್‌ನಿಂದ ಮೊದಲುಗೊಂಡು ಗೋಪಿನಾಥ ಮೊಹಂತಿಯವರೆಗೆ ಎಂಟು ಜನ ಧೀಮಂತ ವ್ಯಕ್ತಿತ್ವಗಳ ಚಿಂತನೆಯ ವಿಭಿನ್ನ ಧಾರೆಗಳು!

ಇಲ್ಲಿ ಗಮನಿಸಿದ ಅಂಶವೆಂದರೆ, ಕಲೆ, ಸಾಹಿತ್ಯ, ಭಾಷೆ, ಸ್ತ್ರೀವಾದಿ ನೆಲೆ,

ಬುಡಕಟ್ಟು ಜನ, ಪ್ರಾದೇಶಿಕತೆ, ಇಂಗ್ಲಿಷ್ ಭಾಷೆ, ಕಮ್ಯುನಿಸ್ಟ್ ಚಿಂತನೆ. . .ಒಂದೇ ಎರಡೇ! ಹಲವಾರು ಮಗ್ಗುಲುಗಳ ಮೂಲಕ ಬದುಕನ್ನು ಅರಿಯಲು ಯತ್ನಿಸುತ್ತಿರುವ, ತಮ್ಮ ಸ್ವತಂತ್ರ ನಿಲುವುಗಳನ್ನು ರೂಪಿಸಿಕೊಂಡಿರುವ, ರೂಪಿಸಿಕೊಳ್ಳುತ್ತಿರುವ ಮನಸ್ಸುಗಳ ಚಿತ್ರಣವನ್ನು ಸಂಭಾಷಣೆಯ ಮೂಲಕ ಒಂದೆಡೆ ಹಿಡಿಯುತ್ತಿದ್ದರೆ ಅದಕ್ಕಿಂತಲೂ ಮಿಗಿಲಾಗಿ ಈ ವ್ಯಕ್ತಿತ್ವಗಳು ಜನರೊಡನೆ ವ್ಯವಹರಿಸುವ ಬಗೆಗಳಲ್ಲಿರುವ ಮಾನವೀಯತೆಯ ನೆಲೆಗಳನ್ನು ದಿನನಿತ್ಯದ ವ್ಯವಹಾರದಲ್ಲಿ ಹಿಡಿಯುತ್ತಿರುವುದು ಕಂಡುಬರುತ್ತದೆ. ಶಿಶಿರ್ ಘೋಷ್ ಅವರು ಅಂಚೆಯವನೊಡನೆ ವರ್ತಿಸುವ ರೀತಿಯಲ್ಲಿ, ಈಗ ತಾನೆ ಪರಿಚಯವಾದವರಿಗೆ 'ನೀವು ಎಂದಾದರೂ ಬನ್ನಿ, ನನ್ನ ಮನೆ ನಿಮಗಾಗಿ ತೆರೆದಿರುತ್ತದೆ' ಎನ್ನುವ ನವನೀತಾ ದೇವ್ ಅವರ ಆತ್ಮೀಯತೆಯಲ್ಲಿ, 'ದೇಶ್' ಪತ್ರಿಕೆಯ ಕಾರ್ಯಾಲಯದಲ್ಲಿ ಪರಿಚಿತವಾದ ವಿವಿಧ ಜನರ ವರ್ತನೆಯಲ್ಲಿ, ಎಲ್ಲಕ್ಕಿಂತ, ಹೊಸಬರು ಎನ್ನುವವರನ್ನು ತಮ್ಮ ಹೃದಯಕ್ಕೆ ತೆಗೆದುಕೊಂಡು, ಸಂವಾದಕ್ಕೆ ಪೂರ್ವಪರಿಚಯದ ಹಂಗು ಇಲ್ಲವೆನ್ನುವುದು ತೋರಿಸಿಕೊಟ್ಟ ಕೆ.ಜಿ.ಸುಬ್ರಮಣ್ಯಂ ಅವರ ಪ್ರೀತಿಯ ಒರತೆಯಲ್ಲಿ, ಒರಿಸ್ಸಾದ ಬುಡಕಟ್ಟು ಜನಾಂಗದ ಬಗ್ಗೆ, ಕನ್ನಡದ ನರಸಿಂಹ ಅಲ್ಲಿ ಕಟ್ಟಿಸಿದ ಕೋನಾರ್ಕ್ ದೇವಾಲಯದ ಬಗ್ಗೆ, ಅದಕ್ಕಿಂತಲೂ ಹೆಚ್ಚಾಗಿ ಪ್ರವಾಸಿಯ ಬಂಧುವನ್ನು ತನ್ನ ಬಂಧುವೇನೋ ಎನ್ನುವಷ್ಟು ಆತ್ಮಿಯತೆಯ ಓಘದಲ್ಲಿ ಮುಳುಗಿಸುವ ಮೊಹಂತಿಯವರ ಕುಟುಂಬದವರ ಪ್ರೀತಿಯ ಝುರಿಯಲ್ಲಿ. . ..

ಹೌದು! ಸಾಹಿತ್ಯಕ್ಕಿಂತ, ಕಲೆಗಿಂತ ಬದುಕು ದೊಡ್ಡದು. ನಮ್ಮೆಲ್ಲ ಮಾತುಕತೆಗಳು ತಮ್ಮ ಬೆಲೆಯನ್ನು ಪಡೆಯುವುದು ನಾವು ನಮ್ಮ ಸರೀಕರೊಡನೆ ನಡೆಸುವ ಒಡನಾಟದಲ್ಲಿನ ಪ್ರಾಮಾಣಿಕತೆಯಲ್ಲಿ! ಇಂತಹ ಸೂಕ್ಷ್ಮತೆಯನ್ನು ಇಲ್ಲಿನ ಪ್ರವಾಸಿ ಗಮನಿಸುವುದು ಕಲೆಗಾರರ ನಡೆವಳಿಕೆಯ ಮೂಲಕ ಹೊರಹೊಮ್ಮುವ ಕಲೆಯನ್ನು ಬದುಕಿನೊಳಗೆ ರೂಢಿಸಿಕೊಂಡಿರುವುದನ್ನು ಗಮನಿಸುತ್ತಾ. . . . ಸಾಹಿತಿಗಳ ವ್ಯಕ್ತಿತ್ವದ ಅಥೆಂಟಿಸಿಟಿಯನ್ನು ಹುಡುಕುವುದರ ಮೂಲಕ.

* * *

ಪರಿಚಿತ ಲೋಕದ ಮೂಲಕ ಅಪರಿಚಿತ ಜಗತ್ತನ್ನು ತೆರೆದಿಡುವ ಪರಿ ಅತ್ಯಂತ ಕೌಶಲ್ಯಪೂರ್ಣವಾಗಿ ಅರಳಿದೆ. ಸಾಹಿತ್ಯಲೋಕದ ಪರಿಚಿತ ಆವರಣವನ್ನು ತನ್ನ ವಿವರಣೆಗಾಗಿ ಬಳಸಿಕೊಳ್ಳುವ ಬಗೆ ಓದುಗನಿಗೂ ಸಹ ತನ್ನ ಸಾಹಿತ್ಯದ ಪರಿಚಿತ ಲೋಕದೊಡನೆ ಅಲೆಯುತ್ತಾ ಅಲೆದಾಡುತ್ತಾ ಸಾಗುವಂತೆ ಮಾಡುತ್ತದೆ. 'ಹಸಿದ ಮಾರಿಯ ಮಂದೆಯಲಿ ಕುರಿ ನುಸುಳಿದಂತಾದೆನು' ಎನ್ನುವ ಕುಮಾರವ್ಯಾಸನ ಸಾಲುಗಳಾಗಲಿ, 'ನೀನ್ಯಾಕೋ ನಿನ್ನ ಹಂಗ್ಯಾಕೋ' ಎನ್ನುವ ಕೀರ್ತನೆಯಾಗಲಿ, 'ಅಕಾಡೆಮಿಯಲಿ ಇಲಿಯಿದೆ' ಎನ್ನುವ ನುಡಿಗಟ್ಟಾಗಲಿ ಸಂದರ್ಭಕ್ಕೆ ತಕ್ಕಂತೆ ಸಲೀಸಾಗಿ ಸುಲಲಿತವಾಗಿ ಹರಿಯುವ ಭಾಷೆಯ ಲಾಲಿತ್ಯವು ಇನ್ನೊಂದೆಡೆಯಿಂದ ಕನ್ನಡ ಭಾಷೆ ಹಾಗೂ ಸಾಹಿತ್ಯದೊಡನೆ ನಡೆಸಿದ ಪ್ರಯಾಣವೂ ಆಗಿದೆ. ದೃಶ್ಯಗಳನ್ನು ನಾಟಕೀಯವಾಗಿ ಕಣ್ ಮುಂದೆ ಚಿತ್ರಿಸುವ ಬಗೆ, ಪದ್ಯಗಳನ್ನು ಸಾಲುಗಳ ಉದ್ಗಾರದ ಮೂಲಕ

ಲೇಖಕನ ಪರಿಚಯ, ಕಳಿಂಗ ಯಾನೆ ಒರಿಸ್ಸಾದ ಚರಿತ್ರೆಯ ಮೂಲಕ ವರ್ತಮಾನದ ಸ್ಥಿತಿಯ ವಿವರಣೆ .. . . ಇವೆಲ್ಲವೂ ಪ್ರವಾಸದ ಬರವಣಿಗೆಯನ್ನು ಹೇಗೆ ಸೃಜನಾತ್ಮಕವಾಗಿ ಮಾಡಬಹುದು ಎಂಬುದಕ್ಕೆ ಉದಾಹರಣೆಯಾಗಿ ನಿಂತಿದೆ.

ಜೊತೆಗಾರರನ್ನು ಗೇಲಿ ಮಾಡುತ್ತಾ ಅವರ ಕ್ರಿಯೆ ಪ್ರತಿಕ್ರಿಯೆಗಳನ್ನು ವಿವರಿಸುತ್ತಾ ಸಾಗುವ ಬರಹವು ತನ್ನ ಜೊತೆಗಾರರನ್ನು ಜೊತೆಗೆ ಒಯ್ಯುವ ಕಲೆಯನ್ನು ಸಿದ್ಧಿಸಿಕೊಂಡಿದೆ. ಇದು ಇನ್ನೊಂದೆಡೆ ಬದುಕಿನ ಪ್ರವಾಸವನ್ನು ಸುಗಮವಾಗಿ ಕೊಂಡೊಯ್ಯುವ ಬರಹಗಾರನ ಬದುಕಿನ ದೃಷ್ಟಿಯೂ ಆಗಿದೆ. ಊರು ಊರುಗಳನ್ನು ಸುತ್ತುವ, ಅರಿಯುವ ಬಗೆಯು ತನ್ನ ಜೊತೆಗಾರರನ್ನು ಒಳಗೊಂಡೇ ಇರುವುದರಿಂದಾಗಿಯೇ ಅದಕ್ಕೊಂದು ಮಾನವೀಯ ಕಳಕಳಿಯೂ ಹೊಯ್‌ಕಯ್ ಆಗಿ ಸೇರಿಕೊಂಡಿದೆ.

ಒಟ್ಟಿನಲ್ಲಿ ಮೂರು ವಿಭಾಗಗಳು ಒಂದಕ್ಕೊಂದು ಪೂರಕವಾಗಿ ಒದಗಿ ಬಂದು, ಜನ, ಗಣ, ಮನದ ಸಾಂಸ್ಕೃತಿಕ ಲೋಕವನ್ನು ಆವರಿಸಿಕೊಳ್ಳುವಂತೆ ಮಾಡಿದೆ. ಮೂರಕ್ಕೂ ಮಿಕ್ಕಿ ಮೀರಿದ ದಶಕಗಳಾಚೆಯೂ ಓದುಗನನ್ನು ಚುಂಬಕದಂತೆ ಸೆಳೆಯುವ ಶಕ್ತಿ ಈ ಪ್ರವಾಸ ಕಥನಕ್ಕಿದೆ.

* * *

# ವಚನ ಸಾಹಿತ್ಯದ ಬಹುಪಟ್ಯೀಯ ಗುಣ

ಬಸವರಾಜ ಕೋಡಗುಂಟಿ

ಸಾವಿರಾರು ವರುಶಗಳ ಕಾಲ ಉಳಿಯುವ ಬರವಣಿಗೆ ಸಾದನಗಳು ಇಲ್ಲದ ಕಾಲದಲ್ಲಿ ಬಂದ ಜಗತ್ತಿನ ಯಾವುದೆ ಬಾಶೆಯ ಹಳೆಯ ಸಾಹಿತ್ಯ ಸಹಜವಾಗಿ ಪ್ರತಿಯಾಗುವ ಪ್ರಕ್ರಿಯೆಯಲ್ಲಿಯೆ ಉಳಿದುಬರಬೇಕು. ಪ್ರತಿ ಮಾಡುವ ಸಂದರ್ಬದಲ್ಲಿ ಹಲವಾರು ಬಗೆಯ ಬದಲಾವಣೆಗಳು ಆಗುತ್ತವೆ (ಕಲಬುರ್ಗಿ. ೨೦೧೫). ಹೀಗೆ ಹಳೆಯ ಸಾಹಿತ್ಯದ ಪಟ್ಯವು ಬದಲಾವಣೆಗೆ ಪಕ್ಕಾಗುತ್ತದೆ. ಸಾಹಿತ್ಯ ಪಟ್ಯವೊಂದಕ್ಕೆ ಒಂದು ಹಸ್ತಪ್ರತಿ ಸಿಕ್ಕಾಗ ಲಿಪಿಕ ಮತ್ತು ಇತರೆ ಸಣ್ಣ ಸಮಸ್ಯೆಗಳು ಇರಬಹುದು. ಆದರೆ ಒಂದಕ್ಕಿಂತ ಹೆಚ್ಚಿನ ಹಸ್ತಪ್ರತಿಗಳು ದೊರೆತರೆ ಸಮಸ್ಯೆ ತುಸು ದೊಡ್ಡದಾಗುತ್ತದೆ. ಹಸ್ತಪ್ರತಿಗಳ ಸಂಕೆ ದೊಡ್ಡ ಪ್ರಮಾಣದಲ್ಲಿ ಇದ್ದರೆ ಈ ಸಮಸ್ಯೆ ಇನ್ನೂ ದೊಡ್ಡದಾಗಿರುತ್ತದೆ. ಈ ಹಸ್ತಪ್ರತಿಗಳ (ಕಾಲ, ಪ್ರದೇಶ, ಸಮಾಜ, ಮತ ಮೊದಲಾದ) ಹಿನ್ನೆಲೆಗಳು ಬಿನ್ನವಾಗಿದ್ದರೆ ಸಮಸ್ಯೆ ಮತ್ತೂ ಬಿಗಡಾಯಿಸುತ್ತದೆ. ಈ ಹಸ್ತಪ್ರತಿಗಳ ಪ್ರತಿಮಾಡುವ ಪ್ರಕ್ರಿಯೆಯಲ್ಲಿ ಪಟ್ಯವನ್ನು ಕಾಲ, ಪ್ರದೇಶ, ಸಮಾಜ, ಮತ ಮೊದಲಾದವಕ್ಕೆ ಹೊಂದಿಸುವ ವ್ಯವಸ್ತಿತ ಪ್ರಯತ್ನಗಳು ನಡೆದಿದ್ದರೆ ಸಮಸ್ಯೆ ಬಯಾನಕವಾಗಿ ಇರುತ್ತದೆ. ಇಂತಾ ಸಂದರ್ಬದಲ್ಲಿ ಇರುವ ಆಕರ/ಹಸ್ತಪ್ರತಿಗಳನ್ನು ಬಳಸಿಕೊಂಡು ಹಳೆಯ ಸಾಹಿತ್ಯವನ್ನು ಮತ್ತೆ ಕಟ್ಟುವ ಪ್ರಯತ್ನವನ್ನು ಮಾಡಲಾಗುತ್ತದೆ. ಈ ಪ್ರಯತ್ನಗಳ ನಡುವೆ ನಿರ್ಮಾಣಗೊಂಡ ಸಾಹಿತ್ಯವನ್ನು 'ಕಟ್ಟಿದಪಟ್ಯ' ಇಲ್ಲವೆ 'ನಿರ್ಮಿತಪಟ್ಯ' ಎಂದು ಕರೆಯಬಹುದು. ಕನ್ನಡದಲ್ಲಿ ಆದುನಿಕ ಕಾಲದಲ್ಲಿ ಈ ಎಲ್ಲ ಬಗೆಯ ಸಮಸ್ಯೆಗಳನ್ನು ಎದುರಿಸಿ ಕಟ್ಟಿಕೊಂಡಿರುವ ಸಾಹಿತ್ಯ ಸಾಕಶ್ಟಿದೆ. ಆದರೆ ಎಲ್ಲ ಸಾಹಿತ್ಯ ಹೀಗೆ ಸಮಾನ ಮುಕ್ತಬದಲಾವಣೆ ಗುಣವನ್ನು ಹೊಂದಿರುವುದಿಲ್ಲ. ಪ್ರತಿಯೊಂದು ಸಾಹಿತ್ಯ ಪಟ್ಯ ಹಾದುಬಂದ ಮತ್ತು ಎದುರಿಸಿದ ಸಾಮಾಜಿಕ, ದಾರ್ಮಿಕ ಮೊದಲಾದ ಆಯಾಮಗಳು ಬಿನ್ನವಾಗಿರುತ್ತವೆ. ಅದಕ್ಕೆ ತಕ್ಕಂತೆ ಆ ಪಟ್ಯದ ಮುಕ್ತಬದಲಾವಣೆ ಗುಣ ನಿರ್ದರಿತವಾಗುತ್ತದೆ.

ಸಾಹಿತ್ಯ ಕಾಲಾಂತರದಲ್ಲಿ ನಿರಂತರ ಬದಲಾವಣೆಗೆ ಪಕ್ಕಾಗುವ ಸ್ತಿತಿಯಲ್ಲಿದ್ದರೂ ಅದನ್ನು ಕಾಯುವುದಕ್ಕೆ ತನ್ನದೆ ಆದ ಹಲವು ಸಾದನಗಳನ್ನು ಸಾಹಿತ್ಯ ಮತ್ತು ಸಮಾಜಗಳು ಕಂಡುಕೊಳ್ಳುತ್ತವೆ. ಹೀಗೆ ಸಾಹಿತ್ಯವನ್ನು ಕಾಪಿಡುವ ಸಾದನಗಳನ್ನು

'ಪಟ್ಯಕಾಪು'ಗಳೆಂದು ಕರೆಯಬಹುದು. ಈ ಪಟ್ಯಕಾಪುಗಳಲ್ಲಿ ಸಾಹಿತ್ಯಪಟ್ಯವನ್ನು ಕಾಯಬಹುದಾದ ದರ್ಮ, ಸಮಾಜ ಮೊದಲಾದ ಅಂಶಗಳನ್ನು ಹೊರಗಿನ ಪಟ್ಯಕಾಪುಗಳೆನ್ನಬಹುದು. ದರ್ಮ, ಸಮಾಜ ಕಾರಣವಾಗಿ ಹಲವು ಬಾರಿ ಪಟ್ಯಗಳನ್ನು ಬದಲಿಸಲು ಅವಕಾಶ ಇರುವುದಿಲ್ಲ. ಇದು ಜಗತ್ತಿನ ಹಲವಾರು ಹಳೆಯ ಸಾಹಿತ್ಯವನ್ನು ಪಟ್ಯಕೆಡದಂತೆ ಉಳಿಸಿಕೊಂಡು ಬಂದಿರುವ ಬಹುದೊಡ್ಡ ಕಾಪು. ಇದಕ್ಕೆದುರಾಗಿ ಬಹುಮುಕ್ಯವಾಗಿ ಸಾಹಿತ್ಯಪಟ್ಯ ತನ್ನೊಳಗೆ ರಾಚನಿಕವಾದ ಹಲವು ಪಟ್ಯಕಾಪುಗಳನ್ನು ಒಳಗೊಂಡಿರುತ್ತದೆ. ಬಾಶೆ, ಚಂದಸ್ಸು ಮೊದಲಾದವನ್ನು ಹೀಗೆ ಸಾಹಿತ್ಯಪಟ್ಯದ ಒಳಗಿನ ಪಟ್ಯಕಾಪುಗಳೆನ್ನಬಹುದು. ಇವುಗಳನ್ನು ಕ್ರಮವಾಗಿ 'ಹೊರಪಟ್ಯಕಾಪು' ಮತ್ತು ಒಳಪಟ್ಯಕಾಪು' ಎಂದು ಕರೆಯಬಹುದು.

ಈ ಪಟ್ಯಕಾಪುಗಳು ಸಾಹಿತ್ಯಪಟ್ಯವನ್ನು ಕಾಪಿಡುವುದು ನಿಜವೆ ಆದರೂ ಇವು ಯಾವುದೆ ಬದಲಾವಣೆಗೆ ಅವಕಾಶ ಕೊಡುವುದಿಲ್ಲ ಎಂದಲ್ಲ. ಸಾದ್ಯವಾದಶ್ಟು ಇವು ಕಾಪಿಡುತ್ತವೆ. ಆದರೆ ಬದಲಾವಣೆ ನಿರಂತರವಾಗಿ ನಡೆಯುತ್ತಲೆ ಇರುತ್ತದೆ. ಕಾಪಿಡುವ ಸಾದನಗಳು ಗಟ್ಟಿಯಾಗಿರುವಶ್ಟು ಸಾಹಿತ್ಯಪಟ್ಯ ಹೆಚ್ಚು ಬದಲಾಗದೆ ಉಳಿಯುವ ಅವಕಾಶವನ್ನು ಹೊಂದಿರುತ್ತದೆ ಮತ್ತು ಸಾದನಗಳು ಸಡಿಲವಾಗಿದ್ದಶ್ಟೂ ಪಟ್ಯ ಬದಲಾವಣೆ ಗುಣವನ್ನು ಹೆಚ್ಚು ಪಡೆದುಕೊಳ್ಳುತ್ತದೆ. ಕೆಲವೊಮ್ಮೆ ಕೆಲವು ನಿರ್ದಿಶ್ಟ ಸಾಹಿತ್ಯಪಟ್ಯಗಳು ನಿರಂತರ ಬದಲಾವಣೆಗೆ ತೆರೆದುಕೊಂಡಿರುತ್ತವೆ. ಹೀಗೆ ಬದಲಾವಣೆ ಗುಣ ಹೆಚ್ಚಾಗುತ್ತಾ ಹೋಗುತ್ತಿದ್ದಂತೆ ಅಲ್ಲಿ ಹಲವು ಪಟ್ಯಗಳು ಬಿನ್ನ (ಕಾಲ, ಪ್ರದೇಶ, ಸಮಾಜ, ಮತದ) ಹಸ್ತಪ್ರತಿಗಳಲ್ಲಿ ಹುಟ್ಟು ಪಡೆಯುತ್ತವೆ. ಈ ಹಲವು ಪಟ್ಯಗಳನ್ನು 'ಬಹುಪಟ್ಯ'ಗಳು ಎಂದು ಇಲ್ಲಿ ಕರೆಯಲಾಗುತ್ತಿದೆ (ಇದನ್ನು ಗ್ರಂತಸಂಪಾದನೆಯಲ್ಲಿ ಪ್ರಕ್ಶಿಪ್ತ, ಬಿನ್ನಪಾಟ ಎಂದು ಮೊದಲಾಗಿ ಕರೆಯಲಾಗುತ್ತದೆ). ಹೀಗೆ ಬಹುಪಟ್ಯಗಳು ಇರುವ ಸಾಹಿತ್ಯ ಪಟ್ಯವನ್ನು 'ಬಹುಪಟ್ಯ ಸಾಹಿತ್ಯ' ಎಂದೆ ಗುರುತಿಸಬಹುದು. ಹೀಗೆ ಬಹುಪಟ್ಯ ಪಡೆಯುವ ಅವಕಾಶವನ್ನು ಸಾಹಿತ್ಯಪಟ್ಯವೊಂದು ತನ್ನ ರಚನೆಯೊಳಗೆ ಹೊಂದಿದ್ದರೆ ಅದನ್ನು ಆ ಸಾಹಿತ್ಯ ಪಟ್ಯದ 'ಬಹುಪಟ್ಯೀಯ ಗುಣ' ಎಂದು ಕರೆಯಬಹುದು.

ಕನ್ನಡದಲ್ಲಿ ದೊಡ್ಡ ಪ್ರಮಾಣದ ಮತ್ತು ಬಿನ್ನ ಬಗೆಯ ಹಳೆಯ ಸಾಹಿತ್ಯ ದೊರೆಯುತ್ತದೆ. ಈ ಸಾಹಿತ್ಯದ ಪಟ್ಯ, ಇದರಲ್ಲಿ ಎಶ್ಟು ಪ್ರಮಾಣದ ಕಟ್ಟಿದಪಟ್ಯ/ನಿರ್ಮಿತಪಟ್ಯ ಇದೆ, ಪಟ್ಯ ಕೆಡದಂತೆ ಕಾಪಿಟ್ಟಿರುವ ಇಲ್ಲವೆ ಕಾಪಿಡುತ್ತಿರುವ ಪಟ್ಯಕಾಪುಗಳು ಯಾವುವು ಎಂಬುದನ್ನು ಈಗಿನ ಲೇಕನದಲ್ಲಿ ಚರ್ಚಿಸಲಾಗುವುದು. ಈ ಲೇಕನದ ಮುಕ್ಯ ಗಮನ ಇರುವುದು ವಚನಗಳ ಪಟ್ಯ ಎಂತಹದ್ದು ಎಂಬುದನ್ನು ಅರ್ತ ಮಾಡಿಕೊಳ್ಳುವುದು. ಅದಕ್ಕಾಗಿ ಕನ್ನಡದ ವಿವಿದ ಬಗೆಯ ಸಾಹಿತ್ಯಗಳ ಪಟ್ಯಗಳ ರಚನೆಯ ಜೊತೆಗೆ ಹೋಲಿಸಿ ವಚನಪಟ್ಯವನ್ನು ನೋಡಿದೆ. ಈಗಿನ ಲೇಕನ ಒಳಪಟ್ಯಕಾಪುಗಳನ್ನು ಕುರಿತು ಹೆಚ್ಚು ಮಾತನಾಡಿದೆ. ಹೊರಪಟ್ಯಕಾಪುಗಳಾದ ದರ್ಮ, ಸಮಾಜ ಮೊದಲಾದವನ್ನು ಕುರಿತು ವಿವಿದ ಅದ್ಯಯನಗಳು ಬೇರೆ ಬೇರೆ ಕಡೆ ಮಾತನಾಡಿವೆ. ಕನ್ನಡ ಸಾಹಿತ್ಯದ

ಒಳಪಟ್ಯಕಾಪುಗಳಲ್ಲಿ ಮುಕ್ಯವಾದ ಚಂದಸ್ಸನ್ನು ಇಲ್ಲಿ ಚರ್ಚೆಗೆ ತೆಗೆದುಕೊಂಡಿದೆ.

ಕನ್ನಡದಲ್ಲಿ ಬಿನ್ನ ಮೂಲಗಣಗಳನ್ನು ಹೊಂದಿರುವ 1) ಅಕ್ಶರ ಚಂದಸ್ಸು, 2) ಮಾತ್ರಾ ಚಂದಸ್ಸು, 3) ಅಂಶ ಚಂದಸ್ಸು ಎಂಬ ಮೂರು ಬಗೆಯ ಚಂದಸ್ಸುಗಳಿವೆ. ಕನ್ನಡ ಸಾಹಿತ್ಯವನ್ನು ಚಂದಸ್ಸು/ಲಯವನ್ನು ಆದರಿಸಿ, ಸಾಹಿತ್ಯಪಟ್ಯಗಳ ಮುಕ್ತಬದಲಾವಣೆ ಗುಣವನ್ನು ಗಮನಿಸಿ ಈ ಕೆಳಗಿನಂತೆ ತುಸು ಎಳೆದು ಗುಂಪಿಸಿದೆ. 1) ಅಕ್ಶರ ಚಂದಸ್ಸು (ವ್ರುತ್ತಗಳು), 2) ಮಾತ್ರಾ ಚಂದಸ್ಸು (ಕಂದ, ರಗಳೆ, ಶಟ್ಪದಿ ಮೊ.), 3) ಅಂಶ ಚಂದಸ್ಸು (ಸಾಂಗತ್ಯ), 4) ರಾಗ–ತಾಳ (ಕೀರ್ತನೆ) 5) ಗದ್ಯ – 5.1 ಕತೆ, 5.2 ವಚನ. ಇವುಗಳ ಬಹುಪಟ್ಯೀಯ ಗುಣ ಕ್ರಮಾನುಗತವಾಗಿ ಬೆಳೆಯುತ್ತಾ ವಚನಗಳಲ್ಲಿ ದೊಡ್ಡಪ್ರಮಾಣದ ಬಹುಪಟ್ಯೀಯ ಗುಣ ಕಂಡುಬರುತ್ತದೆ. ಇದನ್ನು ಉದಾಹರಣೆಗಳೊಂದಿಗೆ ಇಲ್ಲಿ ಚರ್ಚಿಸಿದೆ. ಚಂದಸ್ಸು/ಲಯ ಸಾಹಿತ್ಯದ ಬಾಶೆಯನ್ನು ಕಾಪಿಡುವ ಬಹು ಮಹತ್ವದ ಸಾದನ. ಸಾಹಿತ್ಯದ ನಡಿಗೆಯನ್ನು ಚಂದಸ್ಸು ತೋರಿಸುತ್ತದೆ ಮಾತ್ರವಲ್ಲದೆ ಅದು ನಿರ್ಬಂದಿಸುತ್ತದೆ. ಸಾಹಿತ್ಯದ ನಡಿಗೆ ಸಿಕ್ಕ ಹಾಗೆ ಹರಿಯುವುದಕ್ಕೆ ಚಂದಸ್ಸು ಅವಕಾಶ ಕೊಡುವುದಿಲ್ಲ.

ಅಕ್ಶರ ಚಂದಸ್ಸು ಹೆಚ್ಚು ಬಿಗುವಿನಿಂದ ಕೂಡಿದ್ದು ಪಟ್ಯ ಬದಲಾವಣೆಗೆ ಅತ್ಯಂತ ಕಡಿಮೆ ಅವಕಾಶಗಳನ್ನು ಕೊಡುತ್ತದೆ. ಒಂದು ನಿರ್ದಿಶ್ಟ ಗಣದ ಜಾಗದಲ್ಲಿ ಆ ಗಣದ ರಚನೆಯನ್ನು ಮುರಿಯದಂತೆ ಮಾಡಬಹುದಾದ ಬದಲಾವಣೆಗೆ ಮಾತ್ರ ಅವಕಾಶ ಇದೆ. ಅಂದರೆ 'ಜಗಣ'ದ ಸ್ತಾನದಲ್ಲಿ ಜಗಣ ರಚನೆಯನ್ನೆ ತರಬೇಕು, ಬೇರೆ ಯಾವುದೆ ಅವಕಾಶ ಇಲ್ಲ. ಇಲ್ಲಿ ಉದಾಹರಣೆಗೆ ರನ್ನನ ಗದಾಯುದ್ದದ ಒಂದೆರಡು ಬಹುಪಟ್ಯಗಳನ್ನು ಕೊಟ್ಟಿದೆ.

ಮೊದಲಿಗೆ ಒಂದು ಗಣವಿನ್ಯಾಸದ ಒಳಗಿನ ಬಿನ್ನಪಟ್ಯದ ಉದಾಹರಣೆಯನ್ನು ಚರ್ಚೆಗೆ ತೆಗೆದುಕೊಂಡಿದೆ.

ಸಭರಂ।ನಮಯ।ಲಂಗಮುಂ। ಬಗೆಗೊ।ಳಲ್ ಮತ್ತೇ।ಭವಿಕ್ರೀ।ಡಿತಂ

ಕುರುಭೂ।ಭೃದ್ಭಲ1।ತೂಲಕಾ।1ಲಪವ।ನಂ ಕೌರಾ।ವ್ಯಗಂಧೇ।ಭ–ಕೇ 2.1 ಪು. 5.

ಈ ಮತ್ತೇಬವಿಕ್ರಿಡಿತ ರುತ್ತದಲ್ಲಿ ಮೂರನೆಯ ಗಣವು ರಗಣ (ಗು–ಲ–ಗು) ಇರಬೇಕು ಇದರಲ್ಲಿ ಎರಡು ಬಿನ್ನಪಾಟಗಳು ಇವೆ. ತೂಲಕಾ ಎಂಬ ಗಣದ ಜಾಗದಲ್ಲಿ ಕೂಲತಾ ಎಂಬ ಇನ್ನೊಂದು ಪಟ್ಯ ಬಳಕೆಯಾಗಿದೆ.

ಒಂದು ಗಣದ ಆಚೆಗೆ ಅಂದರೆ ಎರಡು ಗಣಗಳ ನಡುವೆ ವ್ಯಾಪಿಸಿಕೊಂಡಿರುವ ಚಂಪಕ ಮಾಲೆಯೊಂದರಲ್ಲಿ ದೊರೆಯುವ ಬಹುಪಟ್ಯಗಳನ್ನು ಇಲ್ಲಿ ಚರ್ಚಿಸಿದೆ.

ನಜಭ।ಜಜಂಜ।ರಂ ಬಗೆ।ಗೊಳುತ್ತಿ।ರೆ ಚಂಪ।ಕಮಾಲೆ।ಯೆಂದಪರ್।

ದನುಜ।ವಿರೋಧಿ। ಮಾಡಿದೊ।4[ಡಮಾ]ಗ।ದೆ [ಸಂಧಿ। ದ]ಲೆನ್ನ। ನಿನ್ನ 4ಸೈ।

2.5 ಪು. 5

| | | | |
|---|---|---|---|
| 1. | [ಡಮಾ]ಗ। | ದೆ [ಸಂಧಿ। | ದ]ಲೆನ್ನ। ನಿನ್ನ ಸೈ। |
| 2. | ।[ಡಮಾ]ಗ। | ದೆ [ಸಂಧಿ। | ದ]ಲೆನ್ನ। ನಿನ್ನ ಸೈ। |

3. ಡೆಯಾಗ।ದಸಾಂಡಿ। ಸಲೆನ। ಗಿನ್ನ ಸೈ।
4. ಡೆಯಾಗ।ದೆ ಸಾಧಿ। ಸಲೇನ। ನಿನ್ನ ಸೈ।
5. ಡೆಮಾಗ। ದೆ ಸಂಧಿ। ಯದೆನ್ನ। ನಿನ್ನ ಸೈ

ಇಲ್ಲಿ ಮಾಡಿದೊ[ಡಮಾ]ಗದೆ ಸಂ[ಸಂಧಿ ದ]ಲೆನ್ನ ಎಂಬ ಪಟ್ಯದಲ್ಲಿ ಎರಡು ಕಡೆ ಬಿನ್ನ ಪಟ್ಯಗಳು ದೊರಕಿವೆ. ಎರಡನೆಯ ಜಗಣದಲ್ಲಿನ (ಲ-ಗು-ಲ) ಮೊದಲ ಎರಡು ಅಕ್ಕರಗಳಿಗೆ ಮೂರು ಪಟ್ಯಗಳು (ಡಮಾ, ಡೆಯಾ, ಡೆಮಾ) ದೊರಕಿವೆ. ಇಲ್ಲಿ ಗಣವೊಂದರ ಅರ್ದಬಾಗ ಮಾತ್ರ ಬದಲಾಗಿದೆ. ಅದೆ ಸಾಲಿನ ಅಯ್ದು ಮತ್ತು ಆರನೆಯ ಗಣಗಳಾದ ಬಗಣ ಮತ್ತು ಜಗಣಗಳಲ್ಲಿ ವ್ಯಾಪಿಸಿಕೊಂಡಿರುವ ಬದಲಾವಣೆಯೊಂದು ದೊರೆಯುತ್ತದೆ. ಇದಕ್ಕೆ ಒಟ್ಟು ಮೂರು ಪಟ್ಯಗಳು (ಸಂಧಿ ದ, ಸಾಂಡಿ ಸ, ಸಾಧಿ ಸ, ಸಂಧಿ ಯ) ದೊರಕಿವೆ. ಅದರಂತೆಯೆ ಆರನೆಯ ಜಗಣ ಮತ್ತು ಏಳನೆಯ ರಗಣದಲ್ಲಿ ವ್ಯಾಪಿಸಿಕೊಂಡ ಬಿನ್ನ ಪಟ್ಯವೊಂದು ದೊರೆಯುತ್ತದೆ. ಇದರಲ್ಲಿಯೂ ಮೂರು ಪಟ್ಯಗಳು (ಲೆನ್ನನಿನ್ನ, ಲೇನನಿನ್ನ, ದೆನ್ನನಿನ್ನ) ದೊರಕಿವೆ. ಈ ಎಲ್ಲ ಬದಲಾವಣೆಗಳೂ ನಿರ್ದಿಶ್ಟ ಗಣದ ರಚನೆಯ ಒಳಗೆ ಬರುತ್ತಿರುವುದನ್ನು ಗಮನಿಸಬೇಕು. ಇಲ್ಲಿ ಒಂದು ಗಣದ ಒಳಗೆ ಬದಲಿಸಬಹುದಾದ ಸಾದ್ಯತೆಯಲ್ಲಿಯೆ ತುಸು ಕಶ್ಟ. ಹಾಗಾದರೆ ಹಲವು ಗಣಗಳನ್ನು, ಇಡಿಯ ಸಾಲನ್ನು ಬದಲಿಸುವುದು ಇನ್ನೂ ಕಶ್ಟ.

ಅಕ್ಶರ ಚಂದಸ್ಸಿನ ನಂತರ ಬಹುಪಟ್ಯೀಯ ಗುಣ ಇನ್ನು ತುಸು ತೆರೆದುಕೊಳ್ಳುವುದು ಮಾತ್ರಾ ಚಂದಸ್ಸಿನಲ್ಲಿ. ಕಂದ, ರಗಳೆ, ಶಟ್ಪದಿಗಳಲ್ಲಿ ಇದನ್ನು ಕಾಣಬಹುದು. ಇದಕ್ಕೆ ಕಾರಣವಿಶ್ಟೆ. ಅಕ್ಶರ ಚಂದಸ್ಸಿನಲ್ಲಿಯ ಗಣರಚನೆ ನಿಯಮ ಹೆಚ್ಚು ಜಟಿಲವಾಗಿದ್ದು ಮಾತ್ರಾ ಚಂದಸ್ಸಿನಲ್ಲಿ ಇದು ತುಸು ಸಡಿಲ. ಇಲ್ಲಿ ಅಕ್ಶರ ಯಾವುದೆ ಇದ್ದರೂ ಮಾತ್ರೆ ಲೆಕ್ಕದಲ್ಲಿ ಸರಿಹೊಂದಬೇಕು. ಗಿಡ್ಡಸ್ವರ-ಉದ್ದಸ್ವರ, ಒತ್ತಕ್ಕರ ಇವು ತುಸು ಸ್ವೇಚ್ಚೆಯಾಗಿ ಬಳಕೆ ಆಗಬಲ್ಲವು. ಇಲ್ಲಿ ರನ್ನನ ಗದಾಯುದ್ದದೊಳಗಿನ ಕಂದ, ಮತ್ತು ಲಕ್ಶ್ಮೀಶನ ಜಯ್ಮಿನಿ ಬಾರತದ ಒಂದೆರಡು ಉದಾಹರಣೆಗಳನ್ನು ಗಮನಿಸಬಹುದು.

ಕೂರಿಸಿ 1ವೀರ1ಶ್ರೀಯಂ
ಕೂರದರಂ ಕೊಂದು ಸಮರಜಯಮಂ ಮಾಡಲ್
ಕೂರಸಿಯೊಳ್ ನೆಲಸುಗೆ 2ಕಂ
ಠೀರವವಾಹನೆ ಚಳುಕ್ಯ2 ಕಂಠೀರವನಾ 1.2 ಪು. 1

ಕಂದದಲ್ಲಿ ನಾಲ್ಕು ಮಾತ್ರೆಗಳ ಮೂರು ಮತ್ತು ಅಯ್ದು ಗಣಗಳು ಮೊದಲ ಮತ್ತು ಎರಡನೆಯ ಸಾಲುಗಳಲ್ಲಿ ಕ್ರಮವಾಗಿ ಬರಬೇಕು. ಇನ್ನೆರಡು ಸಾಲುಗಳಲ್ಲಿಯೂ ಇದೆ ಕ್ರಮ. ಇಲ್ಲಿ ಉದಾಹರಿಸುತ್ತಿರುವ ಕಂದದಲ್ಲಿ ಮೊದಲ ಸಾಲಿನಲ್ಲಿ ಎರಡನೆಯ ಗಣ ವೀರ. ಇದರಲ್ಲಿ ಮೊದಲ ಅಕ್ಕರ ಗುರು ಮತ್ತು ಈ ಪದದ ಮುಂದಿರುವ ಅಕ್ಶರ ಶ್ರೀ ಒತ್ತಕ್ಕರವಾಗಿರುವುದರಿಂದ ರ ಕೂಡ ಗುರುವಾಗುತ್ತದೆ. ಹೀಗೆ ಇದು ನಾಲ್ಕು ಮಾತ್ರೆಗಳಾಗಿ ಗಣವನ್ನು ಕಟ್ಟುತ್ತದೆ. ಇದರ ಬದಲಿಗೆ ಇನ್ನೊಂದು ಹಸ್ತಪ್ರತಿಯಲ್ಲಿ

ವಿಜಯ (ಪಟ್ಯದಲ್ಲಿ ವಿಜಯನ ಎಂದು ತೋರಿಸಿದಂತೆ ಇದೆ, ಅದು ವಿಜಯ ಎಂದೆ ಇರಬೇಕು, ನ ಇನ್ನೇನನ್ನಾದರೂ ಹೇಳುವುದಕ್ಕೆ ಬಂದಿರಬಹುದು) ಎಂಬ ಮೂರು ಅಕ್ಷರಗಳಿರುವ ಆದರೆ ಮುಂದಿನ ಅಕ್ಷರ ಒತ್ತಕ್ಕರವಾಗಿರುವುದರಿಂದ ನಾಲ್ಕು ಮಾತ್ರಾ ಲೆಕ್ಕಕ್ಕೆ ಬರುವ ಪಟ್ಯ ದೊರಕಿದೆ.

ಇದೆ ಕಂದದಲ್ಲಿ ಎರಡು ಮತ್ತು ಮೂರನೆಯ ಸಾಲುಗಳಲ್ಲಿ ಇರುವ ಒಟ್ಟು ನಾಲ್ಕು ಗಣಗಳಲ್ಲಿ ವ್ಯಾಪಿಸಿಕೊಳ್ಳುವ ಬಹುಪಟ್ಯವೊಂದನ್ನು ಅವಲೋಕಿಸೋಣ.

------------------ಕಂ।

ಠೀರವ। ವಾಹನೆ। ಚಳುಕ್ಯ।

ಮೂರನೆಯ ಸಾಲಿನ ಕೊನೆಯ ಗಣ ಸುಗೆ ಕಂ ಎಂಬುದಾಗಿದೆ. ಇದರಲ್ಲಿ ಕೊನೆಯ ಅಕ್ಷರ ಗುರು. ಇದಕ್ಕೆ ಸರಿಹೊಂದಿಸಿ ಅಲ್ಲಿಂದ ಶುರುವಾಗಿ ನಾಲ್ಕನೆಯ ಸಾಲಿನ ಮೂರು ಗಣಗಳನ್ನು ವ್ಯಾಪಿಸಿಕೊಂಡ ಇನ್ನೊಂದು ಪಟ್ಯ ಹೀಗಿದೆ.

------------------ಲ।

ಕ್ಷ್ಮಾ ಚರ। ಣಂ ವೈ। ರಿಕಳಭ।

ಇಲ್ಲಿ ಬರುವ ಎಲ್ಲ ಬಹುಪಟ್ಯಗಳೂ ಗಣನಿಯಮಕ್ಕಳವಟ್ಟು ಬರುತ್ತಿರುವುದನ್ನು ಕಾಣಬಹುದು.

ಇನ್ನು ಶಟ್ಪದಿಯ ಒಂದು ಉದಾಹರಣೆಯನ್ನು ಚರ್ಚೆಗೆ ತೆಗೆದುಕೊಳ್ಳಬಹುದು. ವಾರ್ದಕ ಶಟ್ಪದಿಯಲ್ಲಿ ಇರುವ ಜಯ್ಮಿನಿ ಬಾರತದಿಂದ ಉದಾಹರಣೆಯನ್ನು ಕೊಟ್ಟಿದೆ,

ತಟ್ಟುಗೆಡದಿಹ ವಾಜಿ ವಾರಣ ವರೂಥದಿಂ
ದಿಟ್ಟಣಿಸಿ ಬಿದ್ದ ರಾಕ್ಷಸ ಮನುಜ ಕಪಿಗ7ಳಿಂ7
7ದಟ್ಟಿಡಿದಗಲಕೆ7 ಚೆಲ್ಲಿ7ದ7 ಛತ್ರ ಚಾಮರ ಪತಾಕೆಗಳ ವೆಂದೆಗಳಿಂದ
ಒಟ್ಟೊಟ್ಟಿಲಾಗಿ ಸೂಸಿದ ಪಲವು ಕೈದುಗಳ
ಬೆಟ್ಟಂಗಳಿಂ ಮಿದುಳ್ ನೆಣವಸೆ ಕರುಳ್ಗಳಿಂ
ಕಟ್ಟುಗ್ರಮಾದ ರಣರಂಗದೊಳ್ ವಾಲ್ಮೀಕಿಮುನಿ ರಾಮನಂ ಕಂಡನು
21.48. ಪು. 215–6.

ವಾರ್ದಕ ಶಟ್ಪದಿಯಲ್ಲಿ ಅಯ್ದದು ಮಾತ್ರೆಗಳ ಒಟ್ಟು ನಾಲ್ಕು ಗಣಗಳು ಮೊದಲೆರಡು ಸಾಲುಗಳಲ್ಲಿ ಮತ್ತು ಮೂರನೆಯ ಸಾಲಿನಲ್ಲಿ ಅಯ್ದು ಮಾತ್ರೆಗಳ ಆರು ಗಣಗಳು ಮತ್ತು ಮೇಲೊಂದು ಗುರು ಬರಬೇಕು. ಇಲ್ಲಿ ತೆಗೆದುಕೊಂಡಿರುವ ಪದ್ಯದಲ್ಲಿ ಮೊದಲ ಮೂರು ಸಾಲುಗಳಲ್ಲಿ ಬಹುಪಟ್ಯಗಳು ಬಂದಿದ್ದು ಅವನ್ನು ಇಲ್ಲಿ ಕೊಟ್ಟಿದೆ. ಎರಡನೆಯ ಸಾಲಿನ ಕೊನೆಯ ಗಣ ಕಪಿಗಳಿಂ ಎಂಬುದಾಗಿದೆ ಇಲ್ಲಿ ಈ ಪದದ ಕೊನೆಯ ಳಿಂ ಎಂಬ ಪದಕ್ಕೆ ಳಂ ಎಂಬ ಇನ್ನೊಂದು ಪಟ್ಯ ಇದೆ.

ಮೂರನೆಯ ಸಾಲಿನಲ್ಲಿ ಎರಡು ಗಣಗಳಲ್ಲಿ ವ್ಯಾಪಿಸಿಕೊಂಡಿರುವ ಒಂದು ಮತ್ತು ಒಂದು ಅಕ್ಕರದ ಇನ್ನೊಂದು ಬಹುಪಟ್ಯಗಳು ಇವೆ. ಆ ಸಾಲನ್ನು ಮತ್ತು ಅದಕ್ಕಿರುವ ಬಹುಪಟ್ಯಗಳನ್ನು ಇಲ್ಲಿ ಕೆಳಗೆ ಕೊಟ್ಟಿದೆ.

'ದಟ್ಟಡಿದ। ಗಲಕೆ' ಚೆ। ಲ್ಲಿದ ಛತ್ರ ಚಾಮರ ಪ।
ತಾಕೆಗಳ। ವೆಂದೆಗಳಿಂ। ದ
'ಥಟ್ಟುಡಿದ। ವಗಲಕ್ಕೆ'। ಲ್ಲಿದ ಛತ್ರ ಚಾಮರ ಪ। ತಾಕೆಗಳ।
ವೆಂದೆಗಳಿಂ। ದ
'ದಟ್ಟನಗ। ಲಕೆ' ಚೆ ಲ್ಲಿದ ಛತ್ರ ಚಾಮರ ಪ। ತಾಕೆಗಳ।
ವೆಂದೆಗಳಿಂ। ದ
'ದಟ್ಟಡಿದ। ಗಲಕೆ' ಚೆ। ಲ್ಲಿದ ಛತ್ರ ಚಾಮರ ಪ। ತಾಕೆಗಳ।
ವೆಂದೆಗಳಿಂ। ದ
'ಧಟ್ಟನಗ। ಲಕೆ' ಚೆ ಲ್ಲಿದ ಛತ್ರ ಚಾಮರ ಪ। ತಾಕೆಗಳ।
ವೆಂದೆಗಳಿಂ। ದ

ಇಲ್ಲಿ ಗಮನೀಯವಾದ ಒಂದು ಅಂಶವಿದೆ. ಇಲ್ಲಿ ದೊರೆತ ಒಟ್ಟು ಅಯ್ದು ಬಹುಪಟ್ಯಗಳಲ್ಲಿ ಮೊದಲೆರಡು ಮತ್ತು ನಾಲ್ಕನೆಯ ಪಟ್ಯಗಳಲ್ಲಿ ಚಂದಸ್ಸಿನ, ಗಣನಿಯಮದ ಪಾಲನೆ ಕಂಡುಬರುತ್ತಿದೆ. ಆದರೆ ಮೂರನೆಯ ಮತ್ತು ಅಯ್ದನೆಯ ಪಟ್ಯಗಳಲ್ಲಿ ಗಣನಿಯಮ ಪಾಲನೆ ಕಂಡುಬರುತ್ತಿಲ್ಲ. ಈ ಎರಡರಲ್ಲಿ ಸಾಲಿನ ಎರಡನೆಯ ಗಣದಾಗ ಅಯ್ದು ಮಾತ್ರೆಗಳು ಕೂಡುತ್ತಿಲ್ಲ. ಮೂರನೆಯ ಗಣದ ಮೊದಲಲ್ಲಿ ಲಗು ಇರುವುದರಿಂದ ಅದನ್ನು ಎರಡನೆಯ ಗಣಕ್ಕೆ ಎತ್ತಿಕೊಳ್ಳುವುದಕ್ಕೆ ಅವಕಾಶವಿದೆ. ಆದರೆ ಹಾಗೆ ಎತ್ತಿಕೊಂಡರೆ ಮೂರನೆಯ ಗಣದಲ್ಲಿ ಮಾತ್ರೆಗಳ ಲೆಕ್ಕ ನಾಲ್ಕು ಆಗಿ ಗಣದ ಲೆಕ್ಕ ತಪ್ಪುತ್ತದೆ. ಆದರೆ ಇದೆ ಸಾಲಿನಲ್ಲಿ ಮೂರನೆಯ ಗಣದಲ್ಲಿ ಕೂಡ ಬಹುಪಟ್ಯಗಳು ದೊರಕಿವೆ. ಎರಡು ಮತ್ತು ಮೂರನೆಯ ಗಣಗಳಲ್ಲಿ ವ್ಯಾಪಿಸಿಕೊಂಡಿರುವ ಚೆಲ್ಲಿದ ಎನ್ನುವ ಪದದ ದ ಎಂಬುದಕ್ಕೆ ರುವ ಎಂಬ ಬಹುಪಟ್ಯ ದೊರಕಿದೆ. ಇಲ್ಲಿ ದ ಎಂಬ ಒಂದು ಅಕ್ಕರದ ಬದಲಿಗೆ ರುವ ಎಂಬ ಎರಡು ಅಕ್ಕರಗಳು ಬಂದಿವೆ. ಇದನ್ನು ಕೆಳಗೆ ಈ ಬಿನ್ನ ಪಟ್ಯದೊಂದಿಗೆ ಕೊಟ್ಟಿದೆ.

ದಟ್ಟನಗ। ಲಕೆ ಚೆಲ್ಲಿ। ರುವ ಛತ್ರ ಚಾಮರ ಪ। ತಾಕೆಗಳ।
ವೆಂದೆಗಳಿಂ। ದ
ಧಟ್ಟನಗ। ಲಕೆ ಚೆಲ್ಲಿ। ರುವ ಛತ್ರ ಚಾಮರ ಪ। ತಾಕೆಗಳ।
ವೆಂದೆಗಳಿಂ। ದ

ಹೀಗೆ ಮೂರನೆಯ ಗಣದಲ್ಲಿ ಒಂದು ಲಗು ಹೆಚ್ಚಾಗಿ ಬಂದು ಲೆಕ್ಕದಲ್ಲಿ ಒಂದು ಮಾತ್ರೆ ಹೆಚ್ಚಾಯಿತು. ಮೇಲೆ ಮಾತನಾಡಿದ ಒಂದು ಲಗುವಿನ ಲೆಕ್ಕದ ಕೊರತೆ ಇಲ್ಲಿ ತುಂಬಿಕೊಂಡಿದೆ. ಅಂದರೆ ಬಹುಪಟ್ಯವನ್ನು ಬೆಳೆಸುವಾಗ ಮೊದಲೆರಡು ಗಣಗಳಲ್ಲಿ ಮಾಡಿಕೊಂಡ ಬಹುಪಟ್ಯಕ್ಕೆ ಅನುಕೂಲವಾಗುವಂತೆ ಮತ್ತು ಗಣನಿಯಮ ಪಾಲನೆಗೆ ಒಂದು ಲಗು ಮಾತ್ರೆಯನ್ನು ಇಲ್ಲಿ ಲಂಬಿಸಿದೆ ಇಲ್ಲವೆ ಇಲ್ಲಿಯ ಮಾತ್ರಾ ಲೆಕ್ಕಕ್ಕೆ ಅನುಕೂಲವಾಗುವಂತೆ ಎರಡನೆಯ ಗಣದಲ್ಲಿ ಒಂದು ಮಾತ್ರೆಯನ್ನು ಕುಗ್ಗಿಸಿದೆ. ಈ ಉದಾಹರಣೆ ಅಪರೂಪದ ಒಂದು ಸಾದ್ಯತೆಯನ್ನು ತೋರಿಸುತ್ತಿದೆ. ಅಕ್ಕರ

ಚಂದಸ್ಸಿನಲ್ಲಿ ಒಂದು ಗಣದ ಲೆಕ್ಕ ಆ ಗಣಕ್ಕೆ ಇರಲೇಬೇಕು. ಅದನ್ನು ಇನ್ನೊಂದು ಗಣದೊಂದಿಗೆ ಸರಿದೂಗಿಸಿಕೊಳ್ಳಲು ಬರುವುದಿಲ್ಲ. ಆದರೆ ಮಾತ್ರಾ ಚಂದಸ್ಸಿನಲ್ಲಿ ಈ ಅವಕಾಶ ಮುಕ್ತವಾಗಿದೆ. ಒಂದು ಗಣವನ್ನು ಕುಗ್ಗಿಸಿ ಅದರಿಂದ ಕಡಿಮೆ ಆದ ಮಾತ್ರೆಯ ಲೆಕ್ಕವನ್ನು ಇನ್ನೊಂದು ಗಣವನ್ನು ಲಂಬಿಸಿ ತುಂಬಬಹುದು: ಇಲ್ಲವೆ ಒಂದು ಗಣವನ್ನು ಲಂಬಿಸಿ ಅದರಿಂದ ಆದ ಮಾತ್ರಾ ಲೆಕ್ಕದ ಹೆಚ್ಚಳವನ್ನು ಇನ್ನೊಂದು ಗಣವನ್ನು ಕುಗ್ಗಿಸುವ ಮೂಲಕ ಸರಿಹೊಂದಿಸಿಕೊಳ್ಳಬಹುದು. ಆದ್ದರಿಂದಲೆ ಅಕ್ಶರ ಚಂದಸ್ಸು ಬಾಶೆಯನ್ನು ಬಿಗಿಯಾಗಿ ಕಾಪಿಡುವ ಸಾದನವಾದರೆ ಮಾತ್ರಾ ಚಂದಸ್ಸು ತುಸು ಹಗುರ. ಬಹುಪಟ್ಯಗಳಿಗೆ ಹೆಚ್ಚು ಸ್ವಾತಂತ್ರವನ್ನು ಇದು ಕೊಡುತ್ತದೆ.

ಇನ್ನು ಮೂರನೆಯದು ಅಂಶಚಂದಸ್ಸು. ಇಲ್ಲಿ ಅಕ್ಶರಗಳು ಮುಕ್ಯವಾಗುವುದಿಲ್ಲ, ಮಾತ್ರೆಯ ಕಟ್ಟುನಿಟ್ಟಿನ ಲೆಕ್ಕ ಇರುವುದಿಲ್ಲ ಮತ್ತು ತುಸು ಸ್ವೇಚ್ಚೆಯನ್ನು ಇದು ಹೊಂದಿರುತ್ತದೆ. ಅಂಶ ಚಂದಸ್ಸಿನಲ್ಲಿ ಗಣವನ್ನು ಕಟ್ಟುವಂತ ಮೂಲಗಟಕಗಳು ಅಂಶ. ಈ ಅಂಶಗಳಿಗೆ ಅವುಗಳ ನೆಲೆಯಲ್ಲಿ ಸ್ವಾತಂತ್ರ ಇರುತ್ತದೆ. ಒಂದು ಅಂಶದೊಳಗೆ ಒಂದು ಗುರು ಇಲ್ಲವೆ ಎರಡು ಲಗು ಹೀಗೆ ಬಿನ್ನವಾದ ರಚನೆ ಬರುವುದಕ್ಕೆ ಅವಕಾಶ ಇದೆ. ಮಾತ್ರಾಚಂದಸ್ಸಿನಲ್ಲಿ ಒಂದು ಗಣ ತೋರುವ ಸ್ವಾತಂತ್ರವನ್ನು ಅಂಶ ಚಂದಸ್ಸಿನೊಳಗೆ ಗಣದೊಳಗೆ ಬರುವ ಅಂಶಗಳು ತೋರಿಸುತ್ತವೆ. ಇದು ಅಂಶ ಚಂದಸ್ಸಿನ ಗಣವನ್ನು ಹೆಚ್ಚು ಮುಕ್ತಗೊಳಿಸುತ್ತದೆ. ಅಲ್ಲದೆ ಅಂಶಚಂದಸ್ಸಿನಲ್ಲಿ ಗಣವಿಪರ್ಯಯವು ಒಂದು ಲಕ್ಶಣ. ವಿಶ್ಣುವಿನ ಬದಲು ಬ್ರಹ್ಮ ಬರಬಹುದು, ಕೆಲವೊಮ್ಮೆ ರುದ್ರ ಬರಬಹುದು. ಹೀಗೆ ಗಣಗಳ ಬರುವಿಕೆಗೆ ಇರುವ ಈ ಸ್ವಾತಂತ್ರ್ಯ ಇನ್ನೂ ಹೆಚ್ಚಿನ ಮುಕ್ತ ಗುಣವನ್ನು ಅಂಶಚಂದಸ್ಸಿನ ಪಟ್ಯಗಳಿಗೆ ತರುತ್ತದೆ.

ಆದ್ದರಿಂದ ಮಾತ್ರಾ ಚಂದಸ್ಸಿಗಿಂತ ಹೆಚ್ಚು ಬಹುಪಟ್ಯೀಯ ಗುಣ ಅಂಶ ಚಂದಸ್ಸಿನ ಸಾಹಿತ್ಯಪಟ್ಯಗಳಿಗೆ ಬರುತ್ತದೆ. ಸಾಂಗತ್ಯವನ್ನು ಇಲ್ಲಿ ಗಮನಿಸಬಹುದು. ಇಲ್ಲಿ ಕನಕದಾಸನ ಮೋಹನತರಂಗಿಣಿ ಕ್ರುತಿಯಿಂದ ಉದಾಹರಣೆಯನ್ನು ತೆಗೆದುಕೊಂಡಿದೆ.

ಸಾಣೆಯ। ಮೇಲೆ ರಾನ್ನಗಳಿಟ್ಟು। ಮಸೆದೊಪ್ಪು।
ಗಾಣಿಸಿ। ಕುಡುವ। 3ತೇಟಿಗರು3।
ಆಣಿ ಮು।ತ್ತಿಗೆ 4ವೆ।ಗ್ಗಳಬೆಲೆ।ಗಟ್ಟುವ4
ವಾಣಿಜ।ರಿರ್ದ।ರಿಕ್ಕೆಲದಿ। 3.26. ಪು. 27.

ಇಲ್ಲಿ ಎರಡನೆಯ ಸಾಲಿನ ಕೊನೆಯ ಗಣಕ್ಕೆ ಒಟ್ಟು ಮೂರು ಬಿನ್ನಪಟ್ಯಗಳು ಇವೆ. ತೆತ್ತಿಗರು, ತೆಪ್ಪಿಗರು ಮತ್ತು ಕೋವಿಗರು. ಈ ಮೂರೂ ಅಲ್ಲಿರುವ ರುದ್ರಗಣ ನಿಯಮವನ್ನು ಪಾಲಿಸುತ್ತಿವೆ. ಮೂರನೆಯ ಸಾಲಿನಲ್ಲಿ ಮೂರು ಮತ್ತು ನಾಲ್ಕನೆಯ ಗಣಗಳನ್ನು ವ್ಯಾಪಿಸಿಕೊಂಡಿರುವ ಬಾಗಕ್ಕೆ ಎರಡು ಪಟ್ಯಗಳಿವೆ.

1. ಆಣಿ ಮುತ್ತಿಗೆ 4ವೆ।ಗ್ಗಳಬೆಲೆ।ಗಟ್ಟುವ4
2. ಆಣಿ ಮು।ತ್ತಿಗೆ 4ವೇ।ಗವೆಚ್ಚವ।ನಡರ್ಚುವ।
3. ಆಣಿ ಮು।ತ್ತಿಗೆ। 4ವೆಗಡಗ।ಳರ್ಚುವ।4

ಇಲ್ಲಿ ಹೆಚ್ಚಿನ ಬದಲಾವಣೆಗಳು ಆಗಿರುವುದನ್ನು ಕಾಣಬಹುದು. ಇಲ್ಲಿನ ಬಿನ್ನ ಪಾಟಗಳು ಗಣನಿಶ್ಚೆಯನ್ನು ಮುರಿಯುತ್ತಿರುವುದನ್ನು, ಅಂಶಚಂದಸ್ಸು ಒದಗಿಸುವ ಸ್ವಾತಂತ್ರ್ಯವನ್ನು ಚೆನ್ನಾಗಿ ಬಳಸಿಕೊಳ್ಳುವುದನ್ನು ಕಾಣಬಹುದು. ಈ ಬಹುಪಟ್ಯಗಳ ಗಣಗಳನ್ನು ಕೆಳಗೆ ಬಿಡಿಸಿ ತೋರಿಸಿದೆ.

1. ವಿ।ವಿ।ವಿ।ವಿ
2. ವಿ।ವಿ।ವಿ।ರು
3. ವಿ।ಬ್ರ।ವಿ।ವಿ

ಮೊದಲ ಸಾಲಿನಲ್ಲಿ ನಾಲ್ಕು ವಿಶ್ಣುಗಣಗಳು ಬಂದಿವೆ. ಇದನ್ನು ಸಾಂಗತ್ಯದ ಮೊದಲ ಮತ್ತು ಮೂರನೆಯ ಸಾಲುಗಳ ಸಹಜ ಗಣಲಕ್ಶಣವೆಂದು ಹೇಳಲಾಗುತ್ತದೆ. ಆದರೆ ಸಾಂಗತ್ಯದಲ್ಲಿ ಗಣವಿಪರ್ಯಯ ಸಹಜ ಇಲ್ಲವೆ ಗಣವಿಪರ್ಯಯವು ಅಂಶಚಂದಸ್ಸಿನ ಒಂದು ಲಕ್ಶಣ. ಎರಡನೆಯ ಪಟ್ಯದಲ್ಲಿ ಮೊದಲ ಪಟ್ಯದಲ್ಲಿ ಇರುವ ಸಾಲಿನ ಕೊನೆಯ ವಿಶ್ಣುಗಣದ ಬದಲಿಗೆ ರುದ್ರಗಣ ಬಂದಿದೆ. ಮೂರನೆಯ ಪಟ್ಯದಲ್ಲಿ ಎರಡನೆಯ ಗಣದಲ್ಲಿ ಬ್ರಹ್ಮ ಬಂದಿದೆ. ಈ ಸ್ವಾತಂತ್ರ ಬೇರೆ ಚಂದಸ್ಸಿನಲ್ಲಿ ಇಲ್ಲದಿರುವುದನ್ನು ಗಮನಿಸಬೇಕು.

ಇವುಗಳ ನಂತರ ಕನ್ನಡ ಸಾಹಿತ್ಯದಲ್ಲಿ ಹೆಚ್ಚು ಸ್ವತಂತ್ರವನ್ನು ಹೊಂದಿರುವಂತವು ಕೀರ್ತನೆಗಳು. ಕೀರ್ತನೆಗಳಿಗೆ ಗಣನಿಯಮಗಳಿಗಳವಟ್ಟ ಚಂದಸ್ಸು ಇಲ್ಲ. ಆದರೆ ಸಂಗೀತ ಇಲ್ಲಿ ಸಾಹಿತ್ಯದ ಬಾಶೆಯನ್ನು ಕಾಪಿಡುವ ಕೆಲಸವನ್ನು ಮಾಡುತ್ತಿದೆ. ಕೀರ್ತನೆಗಳನ್ನು ಇಂತಾ ರಾಗ, ತಾಳ ಎಂದು ನಿರ್ದಿಶ್ಟಪಡಿಸಿ ಬರೆಯಲಾಗಿದೆ. ಬದಲಾವಣೆ ಮಾಡುವುದಕ್ಕೆ ಈ ಮೇಲಿನ ಮೂರು ಪ್ರಕಾರಗಳಿಗಿಂತ ಹೆಚ್ಚು ಅವಕಾಶ ಇಲ್ಲಿ ಇದೆಯಾದರೂ ಅದು ರಾಗ-ತಾಳವನ್ನು ಮೀರುವಂತಿಲ್ಲ. ಅಶ್ಟು ಮಟ್ಟಿಗೆ ರಾಗ-ತಾಳಗಳು ಕೀರ್ತನೆಗಳ ಪಟ್ಯವನ್ನು ಕಾಯುತ್ತವೆ. ಇಲ್ಲಿ ಕೀರ್ತನೆಗಳ ಬಹುಪಟ್ಯಕ್ಕೆ ಶ್ರೀಪಾದರಾಯರ ಕೀರ್ತನೆಗಳ ಒಂದೆರಡು ಉದಾಹರಣೆಗಳನ್ನು ಕೊಟ್ಟಿದೆ.

ಕೀರ್ತನೆ: ಶ್ರೀಪಾದರಾಯ. ಇಲ್ಲಿ ಆಯ್ದುಕೊಂಡ ಕೀರ್ತನೆಯ ಮೊದಲ ನುಡಿಯನ್ನು ಅವಗಾಹಿಸಿದೆ.

5

ರಾಗ: ಕೇತಾರಗವುಳ ತಾಳ: ಆದಿತಾಳ

ಇದನಾದರು ಕೊಡದಿದ್ದರೆ ನಿನ್ನ
ಪದಕಮಲವ ನಂಬಿ ಭಜಿಸುವದೆಂತೊ ಪ
ಗ್ರಾಸ9ವಾಸ9ಗಳಿ10ಗೆ ಇಲ್ಲವೆಂದು10 11ನಿನ್ನ11
12[ಬೇಸರಿಸಿ]12 ಬೇಡ 13ಬಂದುದಿಲ್ಲ13
14ವಾಸುದೇವನೆ ನಿನ್ನ ದಾಸರ ದಾಸರ
ದಾಸರ ದಾಸ್ಯವ ಕೊಡು ಸಾಕೆಂದರೆ14 1. 5.1. ಮ. 11.

ಇಲ್ಲಿ ಚರ್ಚೆಗೆ ತೆಗೆದುಕೊಂಡಿರುವ ನಾಲ್ಕು ಸಾಲುಗಳಲ್ಲಿ ಅತಿಹೆಚ್ಚಿನ ಬಿನ್ನಪಟ್ಯಗಳು

ಕಂಡುಬರುತ್ತವೆ. ಒಟ್ಟು ಆರು ಕಡೆ ಬಿನ್ನ ಪಟ್ಯಗಳು ಇದ್ದು ಅದರಲ್ಲಿ ನಾಲ್ಕು ಕಡೆ ಪದ (9, 10, 12 ಮತ್ತು 13), ಒಂದು ಕಡೆ ಪದಪುಂಜ (10) ಮತ್ತು ಒಂದು ಕಡೆ ವಾಕ್ಯ/ಸಾಲು (14) ಬಿನ್ನವಾಗಿ ಇರುವುದನ್ನು ಕಾಣಬಹುದು. ಪ್ರತಿ ಪಟ್ಯವನ್ನು ಹೊಂದಿಸಿ ಪದ್ಯವನ್ನು ಕೊಡುವುದು ಹೆಚ್ಚು ಜಾಗವನ್ನು ಬಯಸುವ ಕಾರಣದಿಂದ ಇಲ್ಲಿನ ಬಹುಪಟ್ಯಗಳನ್ನು ಸಂಪಾದಕರು ಕೊಟ್ಟಿರುವಂತೆ ಪಟ್ಟಿಯನ್ನು ಮಾತ್ರ ಮಾಡಿದೆ.

9ವಸನ

10ಗಿಲ್ಲವೆಂದು, ಗಿಲ್ಲೆಂದು, ಲ್ಲವೆಂದು, ಗೆಯಿಲ್ಲೆಂದು,

11ನಾ ನಿನ್ನ

12ಬ್ಯಾಸರಿಸಿ, ಬೇಸತ್ತು, ಬ್ಯಾಸತ್ತು,

13ಬಂದಿಲ್ಲ, ಬಂದವನಲ್ಲ, ಬಂದದ್ದಿಲ್ಲ, ಬಂದದ್ದು ಇಲ್ಲ,

14ವಾಸುದೇವ ರಂಗವಿಠಲ ನಿನ್ನ ದಾಸರ ಸಂಗವ ಕೊಡು ಸಾಕೆಂದರೆ

ವಾಸುಕಿಶಯನ ಸರ್ವೋತ್ತಮ ನಾ ನಿನ್ನ ದಾಸರ ದಾಸ್ಯವ ಕೊಡು ಸಾಕೆಂದರೆ

ಮೇಲ್ನೋಟಕ್ಕೆ ಇಲ್ಲಿ ಕಂಡುಬರುವ ಬದಲಾವಣೆಗಳು ರಾಗ-ತಾಳದ ನಿರ್ಬಂದದೊಳಗೆ ನಡೆಯುತ್ತಿರುವುದನ್ನು ಕಾಣಬಹುದು. ಸಂಗೀತದ ಹೆಚ್ಚಿನ ಅರಿವು ಇರುವವರು ಇಲ್ಲಿ ಬಿನ್ನಪಟ್ಯಗಳನ್ನು ಇಟ್ಟುಕೊಂಡು ಹೇಗೆ ರಾಗ-ತಾಳಗಳನ್ನು ಕಾಯ್ದುಕೊಂಡು ಬರಲಾಗಿದೆ ಎಂಬುದನ್ನು ಚೆನ್ನಾಗಿ ತೋರಿಸಬಹುದು.

ಬಹುಪಟ್ಯೀಯ ಗುಣಗಳ ಸಾಹಿತ್ಯಪಟ್ಯಗಳ ಅನುಕ್ರಮದಲ್ಲಿ ಗದ್ಯ ಕೊನೆಯಲ್ಲಿ ಬರುತ್ತದೆ. ಇದರಲ್ಲಿ ಪಟ್ಯವನ್ನು ಕಾಪಿಡುವುದಕ್ಕೆ ಅದರೊಳಗೆ ಇರುವ ಕತೆ, ಕತೆಯ ವಸ್ತು, ಕತಾಹಂದರ ಮೊದಲಾದವು ಇರುತ್ತವೆ. ಕತೆಯನ್ನು ಕಾಯುವುದಕ್ಕೆ ಬಾಶೆಯ ಹೊರತು ಉಳಿದವು ಹೆಚ್ಚಾಗಿ ಹೊರಪಟ್ಯಕಾಪುಗಳಾಗಿವೆ.

ಇನ್ನು ವಚನಗಳನ್ನು ಈಗ ಮಾತಿಗೆತ್ತಿಕೊಳ್ಳಬಹುದು. ವಚನಗಳು ಚಂದಸ್ಸನ್ನು, ಸಾಹಿತ್ಯವನ್ನು ನಿರಾಕರಿಸಿದ 'ವಚನ'ಗಳು ಅಂದರೆ ಮಾತುಗಳು. ಇವನ್ನು ಸಾಹಿತ್ಯ ಎಂದು ಪರಿಗಣಿಸುವುದಾದರೆ ಸಹಜವಾಗಿ ಅವುಗಳನ್ನು ಗದ್ಯದೊಳಗೆ ಗಣಿಸಬೇಕು. ಹೆಚ್ಚಿನ ವಚನಗಳೂ ಒಂದು ಸಾಲಿನಂತೆ, ತುಸು ಉದ್ದನೆಯ ಸಾಲಿನಂತೆಯೆ ಇವೆ. ಇದರೊಳಗೆ ಏನು ಬೇಕಾದರೂ ಸೇರಿಸಬಹುದು, ಏನು ಬೇಕಾದರೂ ಕಳೆಯಬಹುದು ಮತ್ತು ಏನು ಬೇಕಾದರೂ ಬದಲಿಸಬಹುದು. ಗದ್ಯದ ಪಟ್ಯವಾದ ಕತೆಗೆ ಒದಗುವ ಕಾಪಿಡುವ ಯಾವ ಸಾದನಗಳೂ ವಚನಗಳಿಗೆ ಒದಗಲಾರವು. ವಚನಗಳು ಯಾವುದೆ ಕತೆಯನ್ನು ಹೇಳುವುದಿಲ್ಲ ಎಂಬುದೆ ಇದಕ್ಕೆ ಕಾರಣ. ಇಶ್ಟು ಮಟ್ಟಿಗೆ ಸ್ವಾಂತತ್ರ ವಚನಪಟ್ಯಗಳಿಗೆ ಮಾತ್ರ ಇದೆ. ಹಾಗಾಗಿಯೆ ವಚನಗಳು ಹೆಚ್ಚು ಪ್ರಮಾಣದ ಬಹುಪಟ್ಯಗಳೊಂದಿಗೆ ಬೆಳೆದಿವೆ. ಇದರೊಂದಿಗೆ ರಾಚನಿಕವಲ್ಲದ ಸಾಮಾಜಿಕ-ದಾರ್ಮಿಕವಾದ ಹಲವು ಕಾರಣಗಳೂ ವಚನಗಳನ್ನು ವ್ಯಾಪಕವಾಗಿ ಬಹುಪಟ್ಯೀಯವಾಗಿ ಬೆಳೆಸುವುದಕ್ಕೆ ಕಾರಣವಾಗಿವೆ.

ಮೊದಲಲ್ಲಿ ಮಾತನಾಡಿದಂತೆ ಹೊರಪಟ್ಯಕಾಪುಗಳನ್ನು ಇಲ್ಲಿ ಚರ್ಚೆಗೆ

ತೆಗೆದುಕೊಳ್ಳುವುದಿಲ್ಲ. ವಚನಗಳೂ ಒಂದು ಮತವನ್ನು ಮಾತನಾಡುತ್ತವೆ ಎಂದು ಹೇಳಲಾದರೂ ಅದರೊಳಗೆ ಹಲವು ಬಿನ್ನ ಮತಪಂತಗಳು ಸೇರಿಕೊಂಡಿರುವಂತೆ, ಬಿನ್ನ ಮತಗಳ ವಿಚಾರಗಳು ಬೆರೆತುಕೊಂಡಿರುವಂತೆ, ಶಯಿವದ ಬಿನ್ನ ಮತಗಳು ವಚನಗಳನ್ನು ಪ್ರತಿಸಿದಂತೆ ಹೀಗೆ ಹಲವು ವಾದ-ವಾಗ್ವಾದಗಳು ಇರುವುದರಿಂದ ವಚನಗಳ ಪಟ್ಯವನ್ನು ಕಾಯುವುದಕ್ಕೆ ಹೊರಪಟ್ಯಕಾಪುಗಳೂ ಹೆಚ್ಚು ಸಹಾಯಕ ಆಗುವುದಿಲ್ಲ ಎಂದೆನಿಸುತ್ತದೆ.

ಇನ್ನು ವಚನಗಳ ಈ ಬಹುಪಟ್ಯೀಯ ಗುಣವನ್ನು ಕೆಲವು ಉದಾಹರಣೆಗಳೊಂದಿಗೆ ತೋರಿಸುವುದಕ್ಕೆ ಬಸವಣ್ಣನವರ ವಚನಗಳ ಎರಡು ಪ್ರಕಟಿತ ಸಂಪಾದನೆಗಳನ್ನು (ಎಲ್. ಬಸವರಾಜು [1952] ಮತ್ತು ಎಂ.ಎಂ. ಕಲಬುರ್ಗಿ [1993]) ತೆಗೆದುಕೊಂಡಿದೆ. ಈ ಎರಡು ಸಂಪಾದನೆಗಳಲ್ಲಿ ಕಾಣಸಿಗುವ ಬಿನ್ನತೆಗಳನ್ನು ಬಾಶೆಯ ವಿವಿದ ನೆಲೆಗಳಲ್ಲಿ ಒಂದೆರಡು ಉದಾಹರಣೆಗಳನ್ನು ತೆಗೆದುಕೊಂಡು ತೋರಿಸಿದೆ. 1) ದ್ವನಿ/ದ್ವನಿಮಾ/ಅಕ್ಶರ, 2) ಪದ-ಪದರೂಪ, 3) ಪ್ರತ್ಯಯಗಳು, 4) ಪದಪುಂಜಗಳು 5) ವಾಕ್ಯ (ಸಾಲು) ಮತ್ತು 6) ಬರವಣಿಗೆ ಈ ಹಂತಗಳಲ್ಲಿನ ವ್ಯತ್ಯಾಸಗಳನ್ನು ಇಲ್ಲಿ ತೆಗೆದುಕೊಂಡಿದೆ.

| ಎಲ್. ಬಸವರಾಜು | ಎಂ.ಎಂ. ಕಲಬುರ್ಗಿ |
|---|---|
| 1) ದ್ವನಿ/ದ್ವನಿಮಾ/ಅಕ್ಶರ: | |
| ನಿರಾಕಾರವಾದಲ್ಲಿ (3.1) ಪು. 50 | ನಿರಾಕಾರಾವಾಗಿರ್ದಲ್ಲಿ (3.1) ಪು. 11 |
| ನಾಂಟ್ಯಕ್ಕೆ (3.3) ಪು. 50 | ನಾಟ್ಯಕ್ಕೆ (3.3) ಪು. 11 |
| 2) ಪದ-ಪದರೂಪ: | |
| ಕಾಡಿತ್ತು (8.4) ಪು. 52 | ಕಾಡಿಹಿತು (15.4) ಪು. 13 |
| ಕೊಂದಹುದೀ (9.6) ಪು. 52 | ಕೊಂದುದಂಯ್ಯಾ (17.6) ಪು. 12 |
| ಕೊಂಡಲ್ಲಿ (15.5) ಪು. 53 | ಕೊಂಬಲ್ಲಿ (25.4) ಪು. 13 |
| 3) ಪ್ರತ್ಯಯಗಳು: | |
| ಕೊಂದಹೆನೆಂದು (3.7) ಪು. 50 | ಕೊಂದೆಹೆನೆಂದು (3.7) ಪು. 11 |
| ನಾನಿತ್ತಲೆಳೆದರೆ (7.2) ಪು. 51 | ನಾನಿತ್ತಲೆಳೆದಡೆ (14.2) ಪು. 12 |
| 4) ಪದಪುಂಜಗಳು: | |
| ಸುಡಲೀ ಮನವೆನ್ನ (ಮುಡುಬನ) ಮಾಡಿತ್ತು ನಡೆವಲ್ಲಿ | ಸುಡಲೀ ಮನವೆನ್ನನುಡುಹನ ಮಾಡಿತ್ತು |

(26.1) ಪು. 56 (40.1) ಪು. 14

ಅನ್ಯಚಿತ್ತವಿರಿಸದಿರಯ್ಯ, ನಿಮ್ಮ ಚಿತ್ತವಿರಿಸಯ್ಯ

ಅನ್ಯಚಿತ್ತದಲ್ಲಿರಿಸದಿರಯ್ಯಾ, ನಿಮ್ಮ ಚಿತ್ತದಲ್ಲಿರಿಸಯ್ಯಾ

(30.5) ಪು. 57 (48.4) ಪು. 15

5) ವಾಕ್ಯ (ಸಾಲು):

ಇಹಲೋಕದೊಳಗೇ ಮತ್ತನಂತಲೋಕ ಈ ಲೋಕದೊಳಗೆ ಮತ್ತೆ ಅನಂತಲೋಕ

(92.2) ಪು. 71 (139.2) ಪು. 21

ನೋಡುವಂತಿರಬೇಕು ನೋಡದಂತಿರಬೇಕು ಈ ಸಾಲುಗಳು ಇಲ್ಲ

(1310) ಪು. 120

ನೋಡುವ ನೋಟದೊಳಗೆ ತಾನಿಲ್ಲದಿರಬೇಕು

(162.3–4) ಪು. 90

6) ಬರವಣಿಗೆ:

ಬೈಚಿಟ್ಟ (1.1) ಪು. 50 ಬಯ್ಚಿಟ್ಟ (1.1) ಪು. 11

ಸ್ನೇಹದಂತೆ ಇದ್ದಿತ್ತು (1.8) ಪು. 50 ಸ್ನೇಹದಂತಿದ್ದಿತ್ತು (1.4) ಪು.11

ಬೆಂದೊಡಲ (9.2) ಪು. 52 ಬೆಂದ ಒಡಲ (17.2) ಪು.12

ವಚನಗಳ ಈ ಬಹುಪಟ್ಯೇಯ ಗುಣ ಕಾರಣವಾಗಿ ವಚನಗಳ ಬಾಶೆ ಇವತ್ತಿನ ಕನ್ನಡದಂತೆ ಮತ್ತು ಇವತ್ತಿನ ಬಾಶೆಯ ವ್ಯಾಕರಣವನ್ನೆ ಹೊಂದಿರುವಂತೆ ಕಂಡುಬರುತ್ತದೆ. ಬದಲಾವಣೆಮುಕ್ತ ಗುಣದ ವಚನಗಳು ನಿರಂತರವಾಗಿ ಬದಲಾಗುತ್ತಾ ಬಂದಿವೆ. ವಚನದ ಪಟ್ಯದ ಬಗೆಗೆ ಹಲವು ವಿದ್ವಾಂಸರಲ್ಲಿ ಹಲವಾರು ಸಮಸ್ಯೆಗಳಿರುವುದಕ್ಕೂ ಈ ಗುಣ ಕಾರಣ. ಬಾಶೆ ಮಾತ್ರವಲ್ಲದೆ ಇನ್ನೂ ಹಲ ಆಯಾಮಗಳಲ್ಲಿ ವಚನಗಳ ಬಹುತ್ವವನ್ನು ವಿವಿದ ವಿದ್ವಾಂಸರು ಮಾತನಾಡುವುದನ್ನು ಗಮನಿಸಬಹುದು. ಇದಕ್ಕೆ ವಚನಗಳು ಮೂಲಬೂತವಾಗಿ ಬಹುಪಟ್ಯೇಯ ಗುಣವನ್ನು ಹೊಂದಿರುವುದೆ ಕಾರಣವಾಗಿದೆ. ಈ ಅಂಶವನ್ನು ಗಮನಿಸಿದಾಗ ವಚನಗಳನ್ನು ಅದ್ಯಯನ ಮಾಡುವ ಇನ್ನೂ ಹಲವು ಬಿನ್ನ ದಾರಿಗಳು ತೆರೆದುಕೊಳ್ಳಬಲ್ಲವು.

ಆಕರ ಗ್ರಂತಗಳು:

ಕನಕದಾಸ. ಸಂ. ಆರ್.ಸಿ. ಹಿರೇಮಟ. 1973. ಮೋಹನ ತರಂಗಿಣಿ. ಕರ್ನಾಟಕ ವಿಶ್ವವಿದ್ಯಾಲಯ, ದಾರವಾಡ.

ಕಲಬುರ್ಗಿ ಎಂ.ಎಂ. 2015 (ಮ.ಮು.). ಕನ್ನಡ ಗ್ರಂತಸಂಪಾದನ ಶಾಸ್ತ್ರ. ಸಪ್ನಾ ಬುಕ್ ಹವುಸ್, ಬೆಂಗಳೂರು.

ಬಸವಣ್ಣ. ಸಂ. ಎಲ್. ಬಸವರಾಜು. 1952 (ಮ.ಮು.2018). ಬಸವಣ್ಣನವರ ವಚನಗಳು. ಸಪ್ನ ಬುಕ್ ಹವುಸ್, ಬೆಂಗಳೂರು.

-----. ಸಂ. ಎಂ.ಎಂ. ಕಲಬುರ್ಗಿ. 1993. ಬಸವಣ್ಣನವರ ವಚನಗಳು. ಕನ್ನಡ ಮತ್ತು ಸಂಸ್ಕೃತಿ ಇಲಾಕೆ, ಬೆಂಗಳೂರು.

ರನ್ನ. ಸಂ. ತೀ.ನಂ. ಶ್ರೀಕಂಟಯ್ಯ. 1949 (ಮ.ಮು. 1995). ಗದಾಯುದ್ಧ. ಕಾವ್ಯಾಲಯ ಪ್ರಕಾಶನ, ಮಯ್ಸೂರು.

ಲಕ್ಮೀಶ. ಸಂ. ಬಿ.ಎಸ್. ಸಣ್ಣಯ್ಯ ಮತ್ತು ರಾಮೇಗವುಡ. ಜಯ್ಮಿನಿ ಬಾರತ. 1993. ಮಯ್ಸೂರು ವಿಶ್ವವಿದ್ಯಾಲಯ, ಮಯ್ಸೂರು.

ಶ್ರೀಪಾದರಾಯ. ಸಂ. ಜಿ. ವರದರಾಜರಾವ್. 1987. ಶ್ರೀಪಾದರಾಜರ ಕ್ರುತಿಗಳು. ಮಯ್ಸೂರು ವಿಶ್ವವಿದ್ಯಾಲಯ, ಮಯ್ಸೂರು.

# ಭಾಸನ ಒಂದು ಪದ್ಯ ಹಾಗೂ ಮಹಾಭಾರತ

ಸೀತಾರಾಮ ಜಾಗಿರದಾರ

ಶಾನಾಮ ನದೀ ಮನೋರಥ ಜಲಾ ತೃಷ್ಣಾತರಂಗಾಕುಲಾ ರಾಗಗ್ರಾಹವತೀ ವಿಹಗಾ ಧೈರ್ಯದ್ರುಮ ಧ್ವಂಸಿನೀ ಮೋಹಾವರ್ತ ಸುದುಸ್ತರಾತಿಹಗನಾ ಪ್ರೋತ್ತುಂಗ ಚಿಂತಾತಟೀ ಕಸ್ಯಾಃ ಪಾರಗತಾ ವಿಶುದ್ಧ ಮನಸೋ ನಂದಂತಿಯೋಗೀಶ್ವರಾ ॥೧॥

ಭರ್ತೃಹರಿಯ ವೈರಾಗ್ಯ ಶತಕದ ಈ ಪದ್ಯವನ್ನು ಓದುತ್ತಿದ್ದಾ ನನಗೆ ಆಗಾಗ ಓದುವ ರಾಮಕೃಷ್ಣಾಶ್ರಮದ ಭಗವದ್ಗೀತೆಯ ಆರಂಭದ ಭಾಗದಲ್ಲಿರುವ ಧ್ಯಾನಶ್ಲೋಕಗಳಲ್ಲಿ ಒಂದಾದ ಪದ್ಯ ನೆನಪಿಗೆ ಬಂದಿತು; ಅದು ಹೀಗಿದೆ;

ಭೀಷ್ಮದ್ರೋಣತಟಾ ಜಯದ್ರಥ ಜಲಾ ಗಾಂಧಾರನೀಲೋಪಲಾ ಶಲ್ಯಗ್ರಾಹವತಿ ಕೃಪೇಣವಹನೀ ಕರ್ಣೇನ ವೇಲಾಕುಲಾ ಅಶ್ವತ್ಥಾಮ ವಿಕರ್ಣ ಘೋರಮಕರಾ ದುರ್ಯೋಧನಾವರ್ತಿನೀ ಸೋತ್ತೀರ್ಣಾಖಲು ಪಾಂಢವೈ ರಣನದೀ ಕೈವರ್ತ್ತಕರೇಶವಃ ॥ ೨ ॥

ಶ್ರೀಕೃಷ್ಣನೇ ಅಂಬಿಗನಾಗಿರಲು, ಭೀಷ್ಮದ್ರೋಣರು ದಡವಾಗಿರುವ, ಜಯದ್ರಥನೇ ಜಲವಾಗಿರುವ, ಶಲ್ಯನೇ ಅಲ್ಲಿ ಮೊಸಳೆಯಾಗಿರಲು, ಕೃಪನು ಪ್ರಾವಾಹವಾಗಿರಲು, ಅಶ್ವತ್ಥಾಮವಿಕರ್ಣರು ಘೋರಮಕರಗಳಾಗಿರಲು, ದುರ್ಯೋಧನನೇ (ಆನದಿಯಲ್ಲಿನ) ಸುಳಿಯಾಗಿರಲು, ಆ ರಣನದಿಯನ್ನು ಖಲುಪಾಂಡವರು ದಾಟಿದರು.

೧. ಭರ್ತೃಹರಿಯ 'ಶತಕತ್ರಯ' (ಲೇ.ಎನ್.ಕೆ.ನರಸಿಂಹಮೂರ್ತಿ)ಪು.೧೩೩

೨. ಶ್ರೀಮಧ್ ಭಗವದ್ಗೀತೆ (ಲೇ.ಸ್ವಾಮಿ ಆದಿದೇವಾನಂದ) ಪು.೨

೩. ನೆಗಳು ಮತ್ತು ಮೊಸಳೆ (Alligator and Crocodile) [(೧೯೯೪) (ಧ್ಯಾನಮ್]

ಈ ಧ್ಯಾನದ ಪದ್ಯ ಮೂಲತಃ ಮಹಾಭಾರತದ ಮಂಗಳ ಶ್ಲೋಕ; ಸ್ವರ್ಗಾರೋಹಣ ಪರ್ವದಕೊನೆಯಲ್ಲಿ ಇದು ಬಂದಿದೆ; ಮುಂದಿನ ಪದ್ಯ ಗುಚ್ಛವನ್ನು ನೋಡಿ; ಡಾ.ಎ.ಆರ್.ಕೃ. ಅವರ ವಚನ ಭಾರತ)

ಸ್ವರ್ಗಾರೋಹಣಪರ್ವ ಮುಗಿಯಿತು

ಶ್ರೀ ರಸ್ತು

ಮಹಾಭಾರತವೂ ಮುಗಿಯಿತು

ಓಂ ಶಾಂತಿಃ ಶಾಂತಿಃ ಶಾಂತಿಃ
ಮಂಗಳ
ನಾರಾಯಣ ನಮಸ್ಕೃತ್ಯ ನರಂ ಚೈವ ನರೋತ್ತಮಮಂ
ದೇವಿ ಸರಸ್ವತೀ ವ್ಯಾಸಂ ತತೋ ಜಯಮುದೀರಿಯೇತ್ ॥
ಮಹತ್ವಾದ್ಭಾರವತ್ವಾಚ್ಚ ಮಹಾಭಾರತಮುಚ್ಯತೇ ॥
ಅಷ್ಟಾದಶ ಪುರಾಣಾನಿ ಧರ್ಮಶಾಸ್ತ್ರಾಣಿ ಸರ್ವಶಃ ।
ವೇದಾಸ್ಸಾಂಗಾಸ್ತಥೈಕತ್ರ ಭಾರತಂ ಚೈಕತಃ ಸ್ಥಿತಂ ॥
ಧರ್ಮೇಚಾರ್ಥೇ ಚ ಕಾಮೇ ಚ ಮೋಕ್ಷ ಚ ಭರತರ್ಷಭ ।
ಯದಿಹಾಸ್ತಿ ತದನತ್ರ ಯನ್ನೇಹಾಸ್ತಿ ನ ಕುತ್ರಚಿತ್ ॥
ಊರ್ಧ್ವಬಾಹುರ್ವಿರೌಮ್ಯೇಷ ನ ಚ ಕಶ್ಚಿಚ್ಛೃಣೋತಿ ಮೇ ।
ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ॥
ಯಥಾ ಸಮುದ್ರೋ ಭಗವಾನ್ ಯಥಾ ಹಿ ಹಿಮವಾನ್ ಗಿರಿಃ ।
ಖ್ಯಾತಾವುಭೌ ರತ್ನ ನಿಧೀ ತಥಾ ಭಾರತಮುಚ್ಯತೇ ॥
ಭೀಷ್ಮ ದ್ರೋಣತಟಾ ಜಯದ್ರಥಜಲಾ ಗಾಂಧಾರನೀಲೋಪಲಾ
ಶಲ್ಯಗ್ರಾಹವತೀ ಕೃಪೇಣ ವಹನೀ ಕರ್ಣೇನ ವೇಲಾಕುಲಾ ।
ಅಶ್ವತ್ಥಾಮನಿಕರ್ಣಘೋರಮಕರಾ ದುರೋಧನವರ್ತಿನೀ
ಸೋತ್ತೀರ್ಣಾ ಖಲು ಪಾಂಡವೈ ರಣನದೀ ಕೈವರ್ತಕಃ ಕೇಶವಃ ॥

ರತ್ನೋದಾರ ಚತುಸ್ಸಮುದ್ರರಶನಾಂ ಭುಕ್ತ್ವಾ ಭುವಂ ಕೌರವೋ
ಭಗ್ನೋರುಃ ಪತಿತಃ ಸ ನಿಷ್ಟ ರಿಜನೋ ಜೀವನ್ನ್ವಕೈರ್ಭಕ್ಷಿತಃ ।
ಗೋಪ್ಯೈರ್ವಿಶ್ವಜಯೀ ಜಿತಃ ಸ ವಿಜಯಃ ಕಕ್ಷೈಃ ಕ್ಷಿತಾ ವೃಷ್ಣಯಃ
ತಸ್ಮಾತ್ಸರ್ವಮಿದಂ ವಿಚಾರ್ಯ ಸುಚಿರ ಶಾಂತ್ಯೈ ಮನೋ ದೀಯತಾಂ ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಯಂ ಕ್ಷೋಭರಹಿತೋ ಬ್ರಾಹ್ಮಣಾಸ್ಸಂತು ನಿರ್ಭಯಾ ॥
ಅಪುತ್ರಾಃ ಪುತ್ರಿಣಸ್ಸಂತು ಪುತ್ರಿಣಸ್ಸಂತು ಪೌತ್ರಿಣಃ ।
ಅಧನಾಸ್ಸಧನಾಸ್ಸಂತು ಜೀವಂತು ಶರದಾ ಶತಂ ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಸ್ಸ್ವಭಾವಾತ್ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥
ಭದ್ರಂ ಶುಭಂ ಮಂಗಳಂ

ಡಾ.ಕೆ.ಕೃಷ್ಣಮೂರ್ತಿ ಅವರ " ಸಂಸ್ಕೃತ ಕಾವ್ಯ" ಕೃತಿಯಲ್ಲಿ 'ಬೀಷ್ಮದ್ರೋಣತಟೌ' ಎಂಬ ಸಣ್ಣ ಪಾಠ ಭೇದವಿದೆ.

ಭಾಸಕವಿ "ಊರುಭಂಗಮ್" ಏಕಾಂಕ ರೂಪಕದ ನಾಂದೀಪದ್ಯದಲ್ಲಿ ಇದನ್ನೇ ಇನಿತು ಅಲ್ಲಿ ಇಲ್ಲಿ ಬದಲಿಸಿ ಹೊಸ ಪದ್ಯವಾಗಿಸಿದ್ದಾನೆ :-

ಭೀಷ್ಮದ್ರೋಣತಟಾಂ ಜಯದ್ರಥಜಲಾ ಗಾಂಧಾರ ರಾಜಹ್ರದಾಂ
ಕರ್ಣದ್ರೌಣಿಕೃಪೋರ್ಮಿನಕ್ರಮಕರಾಂ ದುರ್ಯೋಧನಸ್ರೋತಸಂ
ತೀರ್ಣಶತ್ರುನದೀಂ ಶರಾಸಿ ಸಿಕತಾಂ ಯೇನಪ್ಲವೇನಾರ್ಜುನಃ
ಶತ್ರೂಣಾಂ ತರಣೇಷು ವಃ ಸ ಭಗವಾನಸ್ತು ಪ್ಲವಃ ಕೇಶವಃ ॥

೪. ವಚನಭಾರತ (ಲೇ.ಡಾ.ಎ.ಆರ್.ಕೃಷ್ಣಶಾಸ್ತ್ರೀ) ಪು.೩೭೩-೩೭೪, ಏಳನೆಯ ಮುದ್ರಣ ೧೯೪೯

೫. ಸಂಸ್ಕೃತ ಕಾವ್ಯ (ಲೇ.ಡಾ.ಕೆ.ಕೃಷ್ಣಮೂರ್ತಿ) ಪು.೧೫೧ (೧೯೫೮)

೬. ಭಾಸನ 'ಊರುಭಂಗಮ್'

[ಭೀಷ್ಮದ್ರೋಣರೇ ದಡ, ಜಯದ್ರಥನೇ ಜಲ, ಗಾಂಧಾರರಾಜ (ಶಕುನಿ) ಮಡು, ಕರ್ಣ ಅಶ್ವತ್ಥಾಮ ಹಾಗೂ ಕೃಪರೇ ಅಲೆ, ನಕ್ರ ಹಾಗೂ ಮಕರ; ದುರ್ಯೋಧನನೇ ಪ್ರವಾಹ (ಸ್ರೋತಸ್); ಶಕಅಸಿ ಎಂಬ ಮುರಿದುಬಿದ್ದ ಆಯುಧಗಳೇ ಆ ಶತ್ರುವೆಂಬ ನದಿಯ ದಡದಲ್ಲಿ ಬಿದ್ದಿರುವ ಮಳಲಿನಕಣಗಳು ಆಗಿರಲು ಆಶತ್ರುನದಿಯನ್ನು ಅರ್ಜುನನೆಂಬ ಅಂಬಿಗನು ಕೃಷ್ಣನೆಂಬ ಹರಿಗೋಲನ್ನು ಏರಿ ದಾಟಿದನು. ಆ(ಹರಿಗೋಲಾದ) ಭಗವಾನ್ ಕೃಷ್ಣನು ನಮ್ಮನ್ನು ರಕ್ಷಿಸಲಿ - ಸಂಸಾರಸಾಗರವನ್ನು ದಾಟಿಸಲಿ].

ಭಾಸಕವಿಯಪದ್ಯ ವ್ಯಾಸರ ಪದ್ಯದ ಛಾಯೆ - ಇನ್ನೊಂದು ರೀತಿಯ ಪ್ರಸ್ತುತರೂಪ ಎಂದು ಓದುಗರಿಗೆ ಭಾಸವಾಗದಿರದು, ಮತ್ತೆ ಆರಂಭದಲ್ಲಿ ಉಲ್ಲೇಖಿಸಿದ ಭರ್ತೃಹರಿಯ ಪದ್ಯ ಕೂಡ ಅದೇ ಭಾವವನ್ನು ಇನ್ನೊಂದು ರೀತಿಯಲ್ಲಿ ಹೇಳಿದ ರೂಪ -

ಭರ್ತೃಹರಿಯ ಪ್ರಕಾರ :-

ಆಶೆ ಎಂಬುದೇ ಮಹಾನದಿ; ಅಲ್ಲಿ ಮನೋರಥ ಎಂಬುದೇ ಜಲ; ತೃಷ್ಣೆಗಳೇ (ಪಡೆಯಬೇಕೆನ್ನುವ ಬಯಕೆಗಳೇ) ತರಂಗಮಾಲೆ; ಕಾಗ (ಅನುರಾಗ)ವೇ ಮೊಸಳೆ; ವಿತರ್ಕಗಳೇ ಅಲ್ಲಿ ಹಾರಾಡುವ ಹಕ್ಕಿಗಳು; ಧೈರ್ಯವೆಂಬುದೇ ಅಲ್ಲಿ ಮುರಿದು ಕಿತ್ತು ಹರಿದುಹೋಗುವ ಮರ; ಮೋಡವೆಂಬುದೇ ಆನದಿಯಲ್ಲಿನ ಮಹಾ ಸುಳಿ; ಪೋತ್ತುಂಗ ಚಿಂತೆಗಳೇ ಆನದಿಯ ತಟಗಳು. ಇಂತಹ ದುಸ್ತರದ ನದಿಯನ್ನು ಯಾರು ತಾನೇ ದಾಟಬಲ್ಲರು?

ಈ ನದಿಯಲ್ಲಿ ಯಾರೂ ನಿಂತಲ್ಲಿ ನಿಲ್ಲಲಾರರು! ಸಾಮಾನ್ಯವಾಗಿ ದುರಾಶೆಗಳನ್ನು ಮೀರಲು ಆಗುವುದಿಲ್ಲ. ಹೀಗೆಂದ ಮಾತ್ರಕ್ಕೆ ಇವುಗಳನ್ನು ತುಳಿದು ನಿಂತವರು ಯಾರು ಇಲ್ಲವೆಂದಲ್ಲ. ವಿಶುದ್ಧ ಮನಸ್ಸಿನ ಯೋಗಿಗಳು ಆಶಾ

ಆಕಾಶಗಂಗೆಯನ್ನು ದಾಟಿ ನಿಂತಿದ್ದಾರೆ – ಯೋಗಿಗಳು ನಿಲ್ಲಬಲ್ಲರು ಎಂದಿದ್ದಾನೆ. ಆತ ಸಂಕಲ್ಪ, ಸಾಧನೆ ಹಾಗೂ ಅದಕ್ಕೆ ಬೇಕಾದ ರೀತಿಯ ಸಾಧನೆಯನ್ನು ಯಾರು ಮಾಡುತ್ತಾರೊ ಅವರೇ ಸಾಧಕರು, ಯೋಗಿಗಳು ಸಫಲತೆಯಿಂದ ಪರೋಪಕಾರಿಗಳು. ವ್ಯಾಸರ ಕೃಷ್ಣನೂ ವಿಶ್ವರೂಪವನ್ನೇ ತೀರಬಲ್ಲ ಸಿದ್ಧ; ಪುರುಷೋತ್ತಮ.

ಭಾಸನ ಕಾಲ ಕಾಳಿದಾಸನಿಗಿಂತ ಹಿಂದಿನದು. ಕಾಳಿದಾಸನು ಕ್ರಿ.ಶ. ೬೩೪ಕ್ಕಿಂತ ಮುಂಚೆ ಇದ್ದನೆಂಬುದು ಗೊತ್ತಾದದ್ದು ಬಾದಾಮಿಯ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಪುಲಕೇಶಿ (೬೧೦–೬೪೨ ಎ.ಡಿ) ರಾಜನ ಆಪ್ತನಾದ (ಮಿಜ ಖಟ್ಮಿಜಜಡಿ) ರವಿಕೀರ್ತಿಯು ಕಟ್ಟಿಸಿದ ಜಿನಾಲಯದಲ್ಲಿ ಆತನೇ ಬರೆದು ಸ್ಥಾಪಿಸಿರುವ ಶಾಸನದಿಂದ.

೭ (೧) ಇಠಿ.ಖಟಿಜ.ಗಿ೦ಟ.ಗಿಖ & (ಌ) ಖ೦.ಗಿ೦ಟ.ಗಿ ಇತ್ಯಾದಿ

ಯೇನಾಯೋಜಿನ ವೇಶ್ಮ
ಸ್ಥಿರಮರ್ತ್ಥವಿಧೌ ವಿವೇಕಿನಾ ಜಿನವೇಷ್ಮ
ಸ್ಸವಿಜುತಾಂರವಿಕೀರ್ತ್ತಿಃ
ಕವಿತಾಶ್ರಿತಕಾಳಿದಾಸ ಭಾರವಿ ಕೀರ್ತ್ತಿಃ ॥

ಈ ಶಾಸನವು ಒಂದು ಅತ್ಯಂತ ಅದ್ಭುತವಾದ ಸಂಗತಿಯನ್ನು ಒಳಗೊಂಡಿದೆ.

ಸತ್ಯಾಶ್ರಯ ಚಕ್ರವರ್ತಿ (ಇಮ್ಮಡಿ ಪುಲಕೇಶಿ) ಚಿಕ್ಕಪ್ಪನಿಂದ ಸಾಮ್ರಜ್ಯದ ಆಡಳಿತವನ್ನು ಯುದ್ಧಭೂಮಿಯಲ್ಲಿ ಗೆದ್ದುಕೊಂಡು ಪಟ್ಟಾಭಿಷಕ್ತನಾಗಿ ಸ್ವಲ್ಪ ಕಾಲದಲ್ಲಿಯೆ ದಿಗ್ವಿಜಯ ಹೊರಟು (ಅಶ್ವಮೇಧದ ಅಶ್ವದ ಹಿಂದೆ ರಕ್ಷಿಸುತ್ತ) ಅನೇಕ ರಾಜರನ್ನು (ಅಪ್ಪಯ್ಯ ಗೋವಿಂದ, ಕದಂಬ, ಗಂಗ, ಮೌರ್ಯ್ಯ, ಕಲಿಂಗ, ಲಾಟ, ಮಾಳವ, ಗೂರ್ಜ್ಜರ, ಹರ್ಷ, ಕೋಸಲ ದೇಶಾಧೀಶ, ಕಾಂಚೇಶ, ಚೋಳಕೇರಳಪಾಂಡ್ಯ) ಸೋಲಿಸಿ, ಅವರ ಸಂಪತ್ತನ್ನು ಕರಿ ತುರಗಗಳನ್ನು ಕಿತ್ತುಕೊಂಡು ಉತ್ಸಾಹಭರಿತನಾಗಿ ವಾತಾಪಿನಗರಕ್ಕೆ ಬಂದು ದೇವದ್ವಿಜರನ್ನು ಅಲ್ಲಲ್ಲಿ ಪೂಜಿಸಿದ ಮತ್ತು ಆ ನೀರಪರಿಖಾನಗರದಿಂದ ರಾಜ್ಯವನ್ನು ಆಳಲು ಉಪಕ್ರಮಿಸಿದನು. ಸಾಮ್ರಾಜ್ಯ ಸುಖಸಂತೋಷಗಳು ನೆಲೆಸಿ ಪ್ರಜೆಗಳು ನೆಮ್ಮದಿಯಿಂದ ಇರಲು, ಭಾರತ ಆಹವ (ಮಹಾಭಾರತಯುದ್ಧ) ಮುಗಿದು ಮೂರು ಸಾವಿರದ ಏಳುನೂರಾ ಮೂವತ್ತೈದನೆಯ ವರ್ಷ (೩೭೩೫) ಗತಿಸಿರಲು ಅದೇ ಕಲಿಕಾಲವೂ (ಕಲಿಯುಗ ಗತವರ್ಷವೂ) ಆಗಿರಲು ಮತ್ತೆ ಆಗ ಅದು ಶಕಸ್ವಪ್ನಕಾಲ ಹಣನೆಯಲ್ಲಿ ೫೫೬ನೆಯ ವರ್ಷವೂ ಆಗಿರಲು ಆಗ ಅರಸನ (ಸತ್ಯಾಶ್ರಯನ) ಆಪ್ತನಾದ, ಭಾರವಿ ಹಾಗೂ ಕಾಳಿದಾಸರ ಸಮ ಪ್ರತಿಭೆಯುಳ್ಳ ರವಿಕೀರ್ತಿಯು ಜಿನೇಂದ್ರ ಭವನ (ಜಿನಾಲಯ) ಕಟ್ಟಿಸಿ ಕಾವ್ಯಮಯವಾದ ಈ ಶಾಸನವನ್ನು ಬರೆದು ಸ್ಥಾಪಿಸಿದನು.

೮. ಅದೇ ಶಾಸನ (೧ಭುಜ)

ಶಾಸನ ಪಾಠ

ಪಂಕ್ತಿ :

೧೬ ಸತ್ಯಾಶ್ರಯೇಶಾಸತಿ ॥ ತ್ರಿಂಶತ್ಸು ತ್ರಿಸಹಸೇಷು
ಭಾರತಾದಾಹವಾದಿತಃ[।*] ಸಪ್ತಾಬ್ಧಶತ
ಯುಕ್ತೇಷು ಸತೇಷ್ವಬ್ಧೇಷುಪಞ್ಚಸು
[॥*]ಪಞ್ಚಾಶತ್ಸುಕಲೌಕಾಲೇ
ಷಟ್ಸು ಪಞ್ಚಶತಾಸುಚ[।*] ಸಮಾಸು
ಸಮತೀತಾಸು ಶತಾನಾಮಪಿ
ಭೂಭುಜಾಮ್ ॥

ಆರಂಭದಲ್ಲಿ ಮ್ಯಾಕ್ಡೊನಲ್ಡ್ ಮೊದಲಾದ ಪಾಶ್ಚಾತ್ಯಾವಿದ್ವಾಂಸರಿಗೆ ಭಾಗತದಲ್ಲಿ 'ಮಹಾಭಾರತ' ಕೃತಿಯ ಕಾಲದ ಕುರಿತು ಇಂತಹದೊಂದು ಪರಂಪರೆ ಇದೆ ಎಂದೇ ಗೋತ್ತಿದ್ದಿಲ್ಲ. ತಮ್ಮಕಾಲದಲ್ಲಿ ಅಷ್ಟು ಇಷ್ಟು ಮೇಲ್ಮೇಲೆಯೆ ಗೋತ್ತಿದ್ದ ಸಂಗತಿಗಳನ್ನು ಆಧರಿಸಿ ಇತಿಹಾಸವನ್ನು ಬರೆದರು, ಆ ಮಹಾನುಭಾವರ ಪುಸ್ತಕಗಳು ಮುಂದೆ ಬಂದ ಎಲ್ಲಾ ವಿದ್ವಾಂಸರಿಗೆ ಒಂದು ಮಾದರಿಯಾದವು; ಆಧಾರಸ್ತಂಭವಾದವು. ಅಂತೆಯೆ ಅವರ ಕೃತಿಗಳಲ್ಲಿನ ಊಹಾಪೋಹಗಳು ಇಂದಿಗೂ ನಮಗೆ ನುಸುಳಿ ಬಂದ ಮೊಸಳೆಗಳಾಗಿವೆ; ಮಹಾಭಾರತದ ಕಾಲ ಇನ್ನೂ ಅನಿಸ್ಚಿತವಾಗಿದೆ! ಕೆಲವರಿಗೆ ೧ ೪ ಸಾವಿರ ವರ್ಷ(೧೫೦೦) ಆದರೆ ಕೆಲವರಿಗೆ ೨ ೧/೨ಸಾವಿರ ವರ್ಷಗಳು(೨೫೦೦). ಮತ್ತೆ ಭಾಸನ ಕಾಲ ಕ್ರಿ.ಪೂ.೫-೬ರಿಂದ ಕ್ರಿ.ಶ. ಮೂರನೆಯ ಶತಮಾನದವರೆಗೆ ವ್ಯಾಪಿಸಿ ನಿಂತಿದೆ. ಭಾಸನ ನಾಟಕಗಳಿಗೆ ಗುಣಾಢ್ಯನ ಬೃಹತ್ಕಥೆ ಮೂಲ ಆಕರಗಳಲ್ಲಿ ಒಂದೆಂದು ಭಾವಿಸಲಾಗುತ್ತದೆ. ಭಾಸಬುದ್ಧನ ಸಮಕಾಲೀನ ವ್ಯಕ್ತಿ ಎಂದೂ ಕೆಲವರು ಭಾವಿಸುತ್ತಾರೆ. ಮೂಲವಿಕಾಗ್ನಿಮಿತ್ರ ನಾಟಕದಲ್ಲಿ ಕಾಳಿದಾಸ ಭಾಸಕವಿಯನ್ನು ಸ್ಮರಿಸಿದ್ದಾನೆ. ಆದುದರಿಂದ ಆತ ಕಾಳಿದಾಸ ಕವಿಗಿಂತ ಪೂರ್ವದಲ್ಲಿ ಇದ್ದನು. ಭಾಸನ ಕೃತಿಗಳನ್ನು ನಾಲ್ಕು ಪಂಗಡಗಳಲ್ಲಿ ವಿಂಗಡಿಸಬಹುದು:

೧. ಬೃಹತ್ಕಥೆಯ ಆಧಾರದ ಮೇಲೆ ರಚಿತವಾದವು;

(ಅ) ಸ್ವಪ್ನವಾಸವದತ್ತ (ಆ) ಪ್ರತಿಷಜ್ಞಾಯೌಗಂಧರಾಯಣ (ಇ) ಅವಿಮಾರಕ ಹಾಗೂ (ಈ) ಚಾರುದತ್ತ

೨. ರಾಮಾಯಣದ ಆಧಾರದ ಮೇಲೆ ಬರೆದವು;

(ಅ) ಅಭಿಷೇಕ ನಾಟಕ (ಆ) ಪ್ರತಿಮಾನಾಟಕ (ಇ) ಯಜ್ಞ ಫಲ

೩. ಭಾಗವತದ ಆಧಾರದ ಮೇಲಿ ರಚಿಸಿದ್ದು;

ಬಾಲಚರಿತ

೪. ಮಹಾಭಾರತದ ಆಧಾರದ ಮೇಲೆ ರಚಿಸಿದವು;

(ಅ) ಪಂಚತಂತ್ರ (ಆ) ಮಧ್ಯಮವ್ಯಾಯೋಗ (ಇ) ದೂತವಾಕ್ಯ

(ಈ) ದೂತಘಟೋತ್ಕಚ (ಉ) ಕರ್ಣಭಾರ ಹಾಗೂ (ಊ) ಊರುಭಂಗ

ಈ ಆರರ ಜೊತೆಗೆ 'ಮಕುಟತಾಡಿತಕ' ಎಂಬ ಒಂದು ನಾಟಕವನ್ನು ಭಾಸನು ಬರೆದಿದ್ದನೆಂದು ಪದ್ಯವೊಂದನ್ನು ದಿ.ಪ್ರೋ.ಡಿ.ಎಲ್.ಎನ್. ಉಪನ್ಯಾಸವೊಂದರಲ್ಲಿ

ತಿಳಿಸಿದುದು ನನಗೆ ಇಂದಿಗೂ ಜ್ಞಾಪಕದಲ್ಲಿದೆ. ಕವಿಚಕ್ರವರ್ತಿ ರನ್ನ ಭಾಸನ 'ಊರುಭಂಗ' 'ಮಕುಟತಾಡಿತಕ' 'ಭಟ್ಟನಾರಾಯಣನವೇಣೀಸಂಹಾರ' ಎಲ್ಲವುಗಳನ್ನೂ ಸಿಂಹಾವಲೋಕನ ದೃಷ್ಟಿಯಲ್ಲಿ ಸಮ್ಮಿಳಿಸಿದ್ಧಾನೆ. ಕ್ರಿ.ಶ. ೧೯೩೭ರ ಜೂನ್ ೮ರಂದು ದಿ॥ಪ್ರೊ.ಬಿ.ಎಂ.ಶ್ರೀ ಅವರು ದಿ॥ಡಾ.ಎ.ಆರ್.ಕೃಷ್ಣಶಾಸ್ತ್ರೀಗಳ 'ಸಂಸ್ಕೃತ ನಾಟಕ' ಕೃತಿಯ ಮೊದಲಮುದ್ರಣಕ್ಕೆ ಮುನ್ನುಡಿ ಬರೆದಿದ್ಧಾರೆ. ಆಕೃತಿಯಲ್ಲಿ ಕೃಷ್ಣಶಾಸ್ತ್ರಿಗಳು ಅಡಿಟಿಪ್ಪಣಿಯಲ್ಲಿ:-

ಕರ್ಣಭಾರಕ್ಕೆ ಕವಚದಾನ ಕುಂಡಲಾಹರಣ ಎಂಬ ಹೆಸರುಗಳೂ, ಊರುಭಂಗಕ್ಕೆ ಗದಾಯುದ್ಧವೆಂಬ ಹೆಸರೂ, ಅಭಿಷೇಕ ನಾಟಕಕ್ಕೆ ರಾಮಾಭಿಶೋಕವೆಂಬ ಹೆಸರೂ, ಪ್ರತಿಮಾನಾಟಕಕ್ಕೆ ಪ್ರತಿಮಾರಾಮ ಪ್ರತಿಮಾದಶರಥ ಎಂಬ ಹೆಸರುಗಳೂ ದೊರೆಯುತ್ತವೆಯೆಂದು ರಾಮಕೃಷ್ಣ ಕವಿಗಳು ಹೇಳುತ್ತಾರೆ.

ಎ.೦.ಊ.ಖ., ಗಿ೦ಟ.ಖಖಖ ೯

ಕವಿರನ್ನನು 'ಸಾಹಸಭೀಮ ವಿಜಯಂ' :-

ಕಾವ್ಯಕ್ಕೆ ಇಟ್ಟ ಒಂದು ಹೆಸರೂ ಗದಾಯುದ್ಧಂ ಎಂದೇ ಇದೆ ನೋಡಿ:

ಕೃತಿನೆಗವ್ಧಿಗದಾಯುದ್ಧಂ
ಕೃತಿಶೀಶಂ ಚಕ್ರವರ್ತಿ ಸಾಹಸಭೀಮಂ ।
ಕೃತಿಯಂ ವಿರಚಿಸಿದನಲಂ
ಕೃತಿಯಂ ಕವಿರತ್ನನೆಂದೊಡೇವಣ್ಣಿಪುದೋ ॥ ೧೦ (೫-೩೨)

೯. ಸಂಸ್ಕೃತನಾಟಕ (ಲೇ.ಪ್ರೊ. ಎಂ.ಆರ್.ಕೃ) ಪು.೨೦ (ದ್ವಿತೀಯ ಮುದ್ರಣ)

೧೦. ಸಾಹಸಭೀಮವಿಜಯಂ (ಲೇ.ಬಿ.ಎಸ್.ಎಸ್. & ರಾಗೌ) ಆ.೧ –ಪದ್ಯಗಳು

೩೧, ೩೨, ೩೩, ೪೫ ಇತ್ಯಾದಿ.

ಮತ್ತೆ -

ಸತ್ಯಪ್ರತಿಜ್ಞೆನೆಕುರು
ಪತ್ಯೂರು ಕಿರೀಟಭಂಗಮಂ ಪಡೆದು ಜಗತ್
ಸ್ತುತ್ಯ ಕೃತಕೃತ್ಯನೆನಿಸದೆ
ಸತ್ಯಾಶ್ರಯವೆಸರ್ಗ್ಗೆ ಮುಯ್ಯನಾಂಪನೆ ಭೀಮಂ ॥
ಊರುಗಳನುಡಿವೆನೊದೆವೆಂ
ಕೌರವ ಪರಿವೃಢನ ಮಕುಟಮಂ ವೇಣೀಸಂ
ಹಾರಂ ಮಾಡುವೆನದಬೀಂ
ಭಾರಮದಿನಿತಲ್ಲದೆನ್ನ ಪರಿಭವಭಾವಂ ॥

(೫-೬೪ & ೭೦) ಇಲ್ಲಿ ಸಹಜಾರ್ಥ ಒಂದಾದರೆ ಪ್ರತೀಯಮಾನವಾಗುವ ಇನ್ನೊಂದು ಅರ್ಥ ಇದೆಯೆಂದು ಹೇಳಿದರೆ ತಪ್ಪಾಗದು. ಅದೇ ಭಾಸ, ಭಟ್ಟನಾರಾಯಣರ ನೆನಪು; ಅಲ್ಲಿನ ಸಂಗತಿಗಳ ಹರಹು ಮತ್ತು ರನ್ನನ ಹೊಸತಿರುವು:

ಗದಾಯುದ್ಧ ಪ್ರಪಂಚ.

ಭಾಸ ಕವಿಗಿಂತ ಹೆಚ್ಚಾಗಿ ಭಾರತ ರಚನೆ - ಭಾರತ ಯುದ್ಧ - ಕಾಲಗಣನೆ ಕಣ್ಣಮುಂದೆ ನಿಲ್ಲುತ್ತದೆ;

| ಕ್ರಿ. ಶ | ಶಾಲಿ(ಸಾತ)ವಾಹನಶಕ | ಕಲಿಯುಗ ಶಕ |
| --- | --- | --- |
| ೨೦೧೯ | ೧೯೪೧ | ೫೧೨೦ |
| +೩೧೦೧ | + ೭೮ | - ೨೦೧೯ |
| ೫೧೨೦ | ೨೦೧೯ | ೩೧೦೧ |

ಮಹಾಭಾರತ ರಚನೆ ಆಗಿ, ಆಯುದ್ಧ ಮುಗಿದು ಈಗ ಏನಿಲ್ಲವೆಂದರೂ ೫೦೦೦ ವರ್ಷ ಆಗಿ ಹೋಗಿದೆ. ಭಾರತೀಯ ಸಂಸ್ಕೃತಿಯ ಇತಿಹಾಸವನ್ನು ಬರೆಯುವವರು ಇದನ್ನು ಗಮನಿಸಬೇಕು. ಮತ್ತೆ ಭಗವದ್ಗೀತೆಯ ಚರಿತ್ರೆಯೂ ಅಷ್ಟೇ ಪುರಾತನ - ಐದುಸಾವಿರವರ್ಷ

# ಬಸವಣ್ಣನವರ ಮಂಗಳವೇಡೆ

ಡಾ. ವೀರಣ್ಣ ದಂಡೆ, ಡಾ. ಜಯಶ್ರೀ ದಂಡೆ

ಸೋಲಾಪುರ ಜಿಲ್ಲೆಯ ತಾಲೂಕು ಸ್ಥಳವಾದ ಮಂಗಳವೇಡೆ ನಗರವು ಸೋಲಾಪುರದಿಂದ ಪಶ್ಚಿಮಕ್ಕೆ ೫೦ ಕಿ.ಮೀ. ದೂರದಲ್ಲಿದೆ. ಈ ಗ್ರಾಮದಲ್ಲಿ ಮೂಲತಃ ಮಂಗಳದೇವಿ ದೇವಾಲಯವಿತ್ತೆಂದೂ ಅದಕ್ಕಾಗಿ ಈ ಗ್ರಾಮಕ್ಕೆ ಮಂಗಳವೇಡೆ ಎನ್ನುವ ಹೆಸರು ಬಂದಿತೆಂದೂ ಹೇಳಲಾಗುತ್ತದೆ. ವಾಡಿ/ಡೆ ಎಂದರೆ ಕಾಲನಿ, ವಾಸಸ್ಥಾನ ಎಂದು ಅರ್ಥವಾಗುತ್ತದೆ. ಮಂಗಳಾದೇವಿಯ ವಾಡೆ(ಡಿ) ಮಂಗಳವೇಡೆ> ಮಂಗಳವಾಡೆ> ಮಂಗಳವಾಡಿ ಎಂಬ ಹೆಸರು ಬಂದಿರಬಹುದು.

ಮಂಗಳವೇಡೆ ಬಸವಣ್ಣ ಮತ್ತು ಬಿಜ್ಜಳರಿಗೆ ಸಂಬಂಧಿಸಿದ ಐತಿಹಾಸಿಕ ಗ್ರಾಮ. ಕಲಚುರಿ ಮನೆತನದವರು ಇಲ್ಲಿಂದಲೇ ತಮ್ಮ ಆಡಳಿತವನ್ನು ಪ್ರಾರಂಭಿಸಿ, ಕಲ್ಯಾಣ ಚಾಲುಕ್ಯರ ಸಾಮಂತರಾಗಿ, ಬಂಧುಗಳಾಗಿ, ಕೊನೆಗೆ ಬಿಜ್ಜಳನಿಂದಾಗಿ ಕಲ್ಯಾಣದ ಆಡಳಿತಕ್ಕೇರಿದ್ದರು.

ಮಂಗಳವೇಡೆಯ ಮಣ್ಣಿನ ಗುಣವೆಂದು ತೋರುತ್ತದೆ; ಇಲ್ಲಿ ಬಸವಣ್ಣನವರಿಂದ ಪ್ರಾರಂಭಿಸಿ ಅನೇಕ ಜನ ಸಂತರು ಆಗಿಹೋಗಿದ್ದಾರೆ. ಪ್ರಸಿದ್ಧ ದಾಮೋಜಿ ಪಂತ, ಚೌಕಾಮೇಳ ಮೊದಲಾದ ಸಂತರು, ಸಂತರ ಗುಂಪುಗಳು ಆಗಿಹೋದ ಪ್ರದೇಶ ಇದಾಗಿದೆ.

ಈಗ ಈ ಗ್ರಾಮ ಹಾಳುಬಿದ್ದ ಕೊಂಪೆಯಂತಾಗಿದೆ. ಲಿಂಗಾಯತರ ಸು. ೨೦೦ ಮನೆಗಳಿವೆ. ಆದರೆ ಅವರೂ ಬಸವಣ್ಣನವರ ಬಗ್ಗೆ ಸರಿಯಾಗಿ ತಿಳಿದುಕೊಂಡಿಲ್ಲ. ಇತ್ತೀಚೆಗೆ ಭಾಲ್ಕಿಯ ಡಾ. ಬಸವಲಿಂಗ ಪಟ್ಟದ್ದೇವರ ಸಂಪರ್ಕದಿಂದಾಗಿ, ಶರಣರಿಗೆ ಸಂಬಂಧಿಸಿದ ಅನೇಕ ಕೃತಿಗಳು ಮರಾಠಿಯಲ್ಲಿ ಭಾಷಾಂತರಗೊಂಡುದರಿಂದಾಗಿ ಇಲ್ಲಿಯ ಆಸಕ್ತರಿಗೆ ಶರಣರ ಬಗೆಗೆ ಒಂದಿಷ್ಟು ಮಾಹಿತಿ ದೊರೆಯುವಂತಾಗಿದೆ.

ಮಂಗಳವೇಡೆಯಲ್ಲಿ ಒಂದು ಸಣ್ಣ ಪುರಾತನ ಕೋಟೆ ಇದೆ. ಬಸವಣ್ಣ ಬಿಜ್ಜಳರು ಆಳಿದ ಕೋಟೆ ಇದಾಗಿದೆ ಎಂದು ತೋರುತ್ತದೆ. ಈ ಕೋಟೆಯ ಮುಂದೆ ಸ್ವಲ್ಪದೂರದಲ್ಲಿರುವ ಗೈಬೀಪೀರ ದರ್ಗಾದ ಅಂಗಳದಲ್ಲಿ ಅರಮನೆ ಇತ್ತೆಂಬ ಬಗ್ಗೆ ಮೌಖಿಕ ಮಾಹಿತಿ ದೊರೆಯುತ್ತದೆ. ಆ ಸ್ಥಳದಲ್ಲಿ ಈಗಲೂ ಉಳಿದುಕೊಂಡಿರುವ ಆ ಕಾಲದ ಕಟ್ಟಡಗಳ ಅವಶೇಷಗಳನ್ನು ಗುರುತಿಸಬಹುದಾಗಿದೆ. ಕೋಟೆ ಮಗ್ಗುಲಲ್ಲಿಯೇ ಸುಮಾರು ೨೦ ಅಡಿಗಳ ಅಂತರದಲ್ಲಿಯೇ ರೇವಣಸಿದ್ಧರ

ದೇವಾಲಯವೊಂದಿರುವುದು ಗಮನಾರ್ಹ ಸಂಗತಿ ಎನಿಸುತ್ತದೆ. ಕ್ಷೀಣಾವಸ್ಥೆಯಲ್ಲಿರುವ ಶಂಕರಲಿಂಗದೇವಾಲಯ, ಕನ್ನಡೇಶ್ವರ ಮಹಾದೇವ ದೇವಾಲಯ, ರೇವಣಸಿದ್ಧರು ಮಂಗಳವೇಡೆಯಲ್ಲಿ ನಿರ್ಮಿಸಿದ ಕೆರೆ (ಕೃಷ್ಣಕೆರೆ?), ಪುರಾತನ ಕಟ್ಟಡಗಳಿಗೆ ಬಳಸಿದ ಕಲ್ಲುಗಳು ಮಂಗಳವೇಡೆಯ ತುಂಬಾ ಅಲ್ಲಲ್ಲಿ ಕಂಡುಬರುತ್ತವೆ. ಇಲ್ಲಿಂದ ೧೫ ಕಿ.ಮೀ. ದೂರದಲ್ಲಿ ರೇವಣಸಿದ್ಧರು ನಿರ್ಮಿಸಿದ್ದು ಎಂದು ಹೇಳುವ ಸಿದ್ದನಕೆರೆ ಮತ್ತು ದೇವಾಲಯಗಳಿವೆ. ಮಂಗಳವೇಡೆಯಿಂದ ಸೋಲಾಪುರ ರಸ್ತೆಯಲ್ಲಿ ೧೫ ಕಿ.ಮೀ. ದೂರದಲ್ಲಿ ಮಾಸನಶ ಮಾಸನೂರು ಗ್ರಾಮವಿದೆ. ಇಲ್ಲಿ ರೇವಣಸಿದ್ಧರಿಗೆ ಸಂಬಂಧಿಸಿದ ಸೋಮೇಶ್ವರ ದೇವಾಲಯವಿದೆ. ಇಲ್ಲಿಯೇ ರೇವಣಸಿದ್ಧರು ಸುರಗಿ(ಖಡ್ಗ) ಪವಾಡವನ್ನು ಗೈದರೆಂದು ಹೇಳಲಾಗುತ್ತದೆ. ಇವೆಲ್ಲ ಮಂಗಳವೇಡೆ ಭಾಗದ ಐತಿಹಾಸಿಕತೆಯನ್ನು ಸಾರುತ್ತಿವೆ.

ಮಂಗಳವೇಡೆ ಇಂದು ಸಂಪೂರ್ಣವಾಗಿ ಮರಾಠಿ ಭಾಷೆಯ ವಾತಾವರಣದಲ್ಲಿದೆ. ಪ್ರಾರಂಭದಲ್ಲಿ ಮಂಗಳವೇಡೆ ಸೊಲ್ಲಾಪುರ ಜಿಲ್ಲೆಯ ಪಂಡರಾಪುರ ತಾಲೂಕಿನಲ್ಲಿತ್ತು. ಈಗ ಮಂಗಳವೇಡೆಯೇ ತಾಲೂಕು ಸ್ಥಳವಾಗಿದೆ. ಒಂದು ಕಾಲದಲ್ಲಿ ಸೊಲ್ಲಾಪುರ, ಸಾಂಗ್ಲಿ, ವಿಜಾಪೂರ ಜಿಲ್ಲೆಯ ಕೆಲಭಾಗಗಳನ್ನು ಒಳಗೊಂಡ ಪ್ರದೇಶಕ್ಕೆ 'ತರಿಕಾಡು ನಾಡು' ಎಂದು ಕರೆಯಲಾಗುತ್ತಿತ್ತು. ಆದರೆ ವಿಜಾಪೂರ ಹೊರತುಪಡಿಸಿ ಸಾಂಗ್ಲಿ ಸೊಲ್ಲಾಪೂರಗಳು ಈಗ ಮಹಾರಾಷ್ಟ್ರಕ್ಕೆ ಸೇರಿ ಹೋಗಿವೆ

ಕಲ್ಯಾಣದಲ್ಲಿ ಚಾಲುಕ್ಯ ದೊರೆಗಳು ಪ್ರಬಲರಾಗಿದ್ದಾಗ, ಮಂಗಳವೇಡೆಯ ಆಡಳಿತವನ್ನು ನೋಡಿಕೊಂಡು ಹೋಗುವುದಕ್ಕಾಗಿ ಕಲಚುರಿ ವಂಶದವರನ್ನು ಸಾಮಂತ (ಮಾಂಡಲಿಕ) ದೊರೆಗಳನ್ನಾಗಿ ನೇಮಿಸುತ್ತ ಹೋದ ಇತಿಹಾಸವಿದೆ. ಕಲಚುರಿ ರಾಜರ ಮಕ್ಕಳಾದ ಅಮ್ಮರಸ (ಅಮ್ಮುಗಿ), ಸಂಕಮ, ಜೋಗಮರು; ಜೋಗಮರ ಮಗ ಪೆರ್ಮಾಡಿ, ಪೆರ್ಮಾಡಿ ಮಗ ೨ನೇ ಬಿಜ್ಜಳ, ಬಿಜ್ಜಳನ ಮಗನಾದ ಸೋಯಿ(ವಿ)ದೇವ ಇವರೆಲ್ಲ ಆಡಳಿತ ಮಾಡಿದ ಇತಿಹಾಸವಿದೆ.

ಕಲಚುರಿ ವಂಶದ ೨ನೇ ಬಿಜ್ಜಳ ಮಹತ್ವಕಾಂಕ್ಷಿ ದೊರೆ. ಸಾಮಂತನಾಗಿದ್ದರೂ ಸ್ವತಂತ್ರರಾಜನಂತೆ ಆಳ್ವಿಕೆ ಮಾಡಿದವನು. ಇವನು ಮಂಗಳವೇಡೆಯ ಸಾಮಂತ ದೊರೆಯಾಗಿದ್ದಾಗ ಬಸವಣ್ಣನ ಸೋದರಮಾವಂದಿರಾದ ಬಲದೇವರು ಮಂತ್ರಿಯಾಗಿಯೂ ಸಿದ್ಧರಸರು ದಣ್ಣಾಯಕರಾಗಿಯೂ ಕರಣಶಾಲೆಯ ಮುಖ್ಯಸ್ಥರಾಗಿಯೂ ಸೇವೆ ಸಲ್ಲಿಸುತ್ತಿದ್ದರು ಎಂದು ತಿಳಿದುಬರುತ್ತದೆ. ಇದೇ ಮಂಗಳವೇಡೆಗೆ ಬಂದ ಬಸವಣ್ಣನವರೂ ಕರಣಿಕರಾಗಿ ಕೆಲಸಕ್ಕೆ ಸೇರಿಕೊಂಡರು. ಬಹುಶಃ ಇಲ್ಲಿ ಬೆಳೆದ ಬಿಜ್ಜಳ ಮತ್ತು ಬಸವಣ್ಣನವರ ಆತ್ಮೀಯತೆಯಿಂದಾಗಿಯೇ ನಂತರ ಬಸವಣ್ಣನವರು ಬಸವಕಲ್ಯಾಣಕ್ಕೆ ಹೋದಂತೆ ತೋರುತ್ತದೆ.

ಮಂಗಳವೇಡೆಯ ಮಣ್ಣಿನ ಕೋಟೆ :

ಮಂಗಳವೇಡೆಯಲ್ಲಿ ಇಂದು ಬಸವಣ್ಣನವರಿಗೆ ಸಂಬಂಧಿಸಿದ್ದು ಎಂದು ಖಚಿತವಾಗಿ ಹೇಳುವ ಯಾವ ಸ್ಮಾರಕಗಳೂ ಉಳಿದಿಲ್ಲ. ಅಲ್ಲಿ ಒಂದು ಹಳೆಯ

ಕೋಟೆ ಇದೆ. ಬಹಳ ವರ್ಷಗಳವರೆಗೆ ಅಲ್ಲಿ ತಹಶೀಲ ಕಛೇರಿ ಇತ್ತು. ಈಗ ಸ್ಥಳಾಂತರಗೊಂಡಿದೆ. ೧೩ನೇ ಶತಮಾನದ ನಂತರ ಬೀದರ ನಗರವನ್ನು ಆಳುತ್ತಿದ್ದ ಅಧಿಕಾರಿಗಳು, ಮಂಗಳವೇಡೆಯಲ್ಲಿದ್ದ ಕೆಲ ಜೈನ ಬಸದಿಗಳನ್ನು ತೆಗೆದುಹಾಕಿ, ಅಲ್ಲಿಯ ವಸ್ತುಗಳನ್ನು ಕೋಟೆಗೆ ಬಳಸಿದರೆಂದು ತಿಳಿದುಬರುತ್ತದೆ. ಹೊಸ ಕೋಟೆ ಕಟ್ಟಿದರೇ? ಅಥವಾ ಇದ್ದ ಕೋಟೆಯನ್ನು ದುರಸ್ತಿ ಮಾಡಿದರೇ? ಎಂಬುದು ಸ್ಪಷ್ಟವಾಗಿಲ್ಲ. ಈ ಬಗೆಗೆ ಸರಿಯಾದ ಮಾಹಿತಿಗಳು ಸರ್ಕಾರಿ ದಾಖಲೆಗಳಲ್ಲೂ ಉಳಿದುಬಂದಿಲ್ಲ.

ಈ ಕೋಟೆ ತೀರ ಚಿಕ್ಕದು. ಮಂಗಳವೇಡೆ ಮಾಂಡಲಿಕರ ಮುಖ್ಯಸ್ಥಳ ಮಾತ್ರ ಆಗಿತ್ತು ಎಂಬುದನ್ನು ಗಮನಿಸಬೇಕು. ಇದರ ಉತ್ತರದ ಗೋಡೆ ೧೨೪೫ ಅಡಿ ಉದ್ದವಾಗಿದೆ. ಪೂರ್ವದ ಭಾಗ ೧೨೦೦ ಅಡಿ, ದಕ್ಷಿಣದ ಭಾಗ ೧೧೦೦ ಅಡಿ, ಪಶ್ಚಿಮದ ಭಾಗ ೯೨೦ ಅಡಿ ಮಾತ್ರ ಇದೆ. ಇದನ್ನು ಗಮನಿಸಿದರೆ ಇದರ ಎಲ್ಲ ಭಾಗಗಳು ಒಂದೊಂದು ನಮೂನೆಯ ಅಳತೆಯನ್ನು ಹೊಂದಿವೆ. ೩೫ ಅಡಿ ಎತ್ತರದ ಗೋಡೆಗಳು ೧೩ ಅಡಿ ಅಗಲವಾಗಿವೆ ಎಂದು ದಾಖಲೆಗಳಲ್ಲಿ ನಮೂದಾಗಿರುವುದು ಕಂಡುಬರುತ್ತದೆ.

ಕೋಟೆಯನ್ನು ಪರಿಶೀಲಿಸಿದರೆ ಅದು ಮೊದಲು ಮಣ್ಣಿನ ಕೋಟೆಯೇ ಆಗಿದ್ದಂತೆ ತೋರುತ್ತದೆ. ನಂತರ ಗೋಡೆಯ ಸುತ್ತಲೂ ಒಳಮಗ್ಗಲು ಮತ್ತು ಹೊರಮಗ್ಗಲು ಎರಡೂ ಕಡೆ ಕಲ್ಲಿನಿಂದ ಥರಗಳನ್ನು ಏರಿಸಿದ್ದು ಸ್ಪಷ್ಟವಾಗಿ ಗೋಚರಿಸುತ್ತದೆ. ನಾಲ್ಕೂ ಮೂಲೆಗಳಲ್ಲಿರುವ ಕೋಟೆಯ ಹೂಡೆಗಳಿಗೆ ಸುತ್ತಲೂ ಪೇರಿಸಿದ ಕಲ್ಲಿನ ಥರಗಳು ಬಿದ್ದುಹೋಗಿದ್ದು, ನಾಲ್ಕೂ ಹೂಡೆಗಳ ಮೇಲಿನ ಅರ್ಧಭಾಗಗಳು ತೆರೆದುಕೊಂಡಿವೆ. ಇಲ್ಲಿ ಒಳಗಿರುವ ಮಣ್ಣಿನ ಗುಡ್ಡೆ ಸ್ಪಷ್ಟವಾಗಿ ಕಾಣುತ್ತದೆ. ಇದಲ್ಲದೆ ಕೆಲವು ಕಡೆ ಉಚ್ಚಿಬಿದ್ದ ಕಲ್ಲುಗಳಿಂದ ಗೋಡೆಗಳ ಒಳಗಿನ ಭಾಗಗಳೂ ಗೋಚರಿಸುತ್ತವೆ. ಎಲ್ಲೆಲ್ಲಿ ಕಲ್ಲುಗಳು ಉಚ್ಚಿಬಿದ್ದಿವೆಯೋ ಅಲ್ಲೆಲ್ಲ ಒಳಗಿನ ಮಣ್ಣು ಸ್ಪಷ್ಟವಾಗಿ ಗೋಚರಿಸುತ್ತದೆ. ಇದರಿಂದ ಈ ಕೋಟೆ ಮೂಲದಲ್ಲಿ ಮಣ್ಣಿನಿಂದಲೇ ನಿರ್ಮಾಣವಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

ಕೋಟೆಯ ಈ ಎಲ್ಲ ಲಕ್ಷಣಗಳನ್ನು ಗಮನಿಸಿದರೆ, ಮೂಲತಃ ಮಣ್ಣಿನ ಕೋಟೆ ಹಳೆಯದಾಗಿದ್ದು, ಅದನ್ನು ನಂತರದವರು ೧೩ನೇ ಶತಮಾನದಲ್ಲಿ ಕಲ್ಲಿನ ಥರ ಹೊಂದಿಸಿ ದುರಸ್ತಿಗೊಳಿಸಿರಬೇಕೆನಿಸುತ್ತದೆ. ಆದುದರಿಂದ ಕಲಚುರಿ ಮಾಂಡಲಿಕ ವಂಶಸ್ಥರು ಆಡಳಿತ ನಡೆಸಿದ್ದು ಈ ಮಣ್ಣಿನ ಕೋಟೆಯಿಂದಲೇ ಇರಬೇಕು. ಹೀಗಾಗಿ ಬಸವಣ್ಣನವರು ಮೊದಲು ಕರಣಿಕರಾಗಿ ಸೇರಿಕೊಂಡು ಕೆಲಸ ಮಾಡಿದ ಸ್ಥಳ ಇದಾಗಿದೆ ಎನಿಸುತ್ತದೆ. ಸಧ್ಯಕ್ಕೆ ಇಷ್ಟನ್ನು ಇಟ್ಟುಕೊಳ್ಳಲು ಅಡ್ಡಿಯಿಲ್ಲ. ಈ ಬಗೆಗೆ ಹೆಚ್ಚಿನ ಶೋಧಗಳು ನಡೆಯಬೇಕು.

**ಮಂಗಳಾದೇವಿ ದೇವಾಲಯ/ಗೈಬೀಪೀರ ದರ್ಗಾ :**

ಕೋಟೆಯ ಎದುರಿಗೆ ಸ್ವಲ್ಪದೂರದಲ್ಲಿ, ಬಲಮಗ್ಗಲು ಒಂದು ದರ್ಗಾ ಇದ್ದು, ಅದನ್ನು ಗೈಬೀಪೀರ ದರ್ಗಾ ಎಂದು ಕರೆಯುತ್ತಾರೆ. ಅದು ಹಿಂದೂ

ಕಟ್ಟಡವಾಗಿದ್ದಿತು ಎಂದು ಅರಿಯಲು ಅಲ್ಲಿ ಇಂದಿಗೂ ಕೆಲವು ಕುರುಹುಗಳು ಕಾಣಸಿಗುತ್ತವೆ. ಪೂರ್ವಕ್ಕೆ ಇದ್ದಿರಬಹುದಾದ ದ್ವಾರದ ಕೆಲ ಭಾಗಗಳು ಉಳಿದಿದ್ದು, ಅವು ಮುಸ್ಲೀಮ ರಚನೆಗಳಾಗಿಲ್ಲ. ದರ್ಗಾದ ಅಂಗಳದಲ್ಲೂ ಕೆಲ ಕಲ್ಲಿನ ಕಂಬದ ಭಾಗಗಳು ಬಿದ್ದಿವೆ. ಇದನ್ನು ಗಮನಿಸಿದರೆ, ಇದು ಮೂಲ ದರ್ಗಾದ ಸ್ಥಳವಲ್ಲ ಎಂಬುದು ಸ್ಪಷ್ಟವಾಗುತ್ತದೆ. ಮಜೇರಿ ಇರುವ ದರ್ಗಾದ ಬುರುಜ (ಗುಮ್ಮಟ) ನಂತರ ರಚನೆಯಾಗಿದ್ದು, ಒಳಗಡೆ ಪರಿಶೀಲಿಸಿದರೆ ಒಂದು ದೊಡ್ಡ ಕೋಣೆಯ ಮಾಳಿಗೆಯ ಭಾಗವನ್ನು ತೆಗೆದುಹಾಕಿ ಬುರುಜ ನಿರ್ಮಾಣ ಮಾಡಿರಬೇಕೆನಿಸುತ್ತದೆ. ಈ ದರ್ಗಾದ ಅಂಗಳ ವಿಸ್ತಾರವಾಗಿದ್ದು, ಅಂಗಳದಲ್ಲಿ ಪೂರ್ವಕ್ಕೆ ಮುಖಮಾಡಿ ಒಂದು ತೆರೆದ ಚಾವಡಿ ಇದೆ.

ಗೈಬಿಪೀರ ದರ್ಗಾಕ್ಕೆ ಮುಸ್ಲೀಮರಂತೆ ಹಿಂದೂಗಳೂ ನಡೆದುಕೊಳ್ಳುತ್ತಾರೆ. ದರ್ಗಾದ ಪಂಚಕಮೀಟಿ ಒಂದಿದ್ದು, ಅದರಲ್ಲಿ ಎಲ್ಲ ಜಾತಿ ಜನಾಂಗದವರಿದ್ದಾರೆ. ಮತ್ತು ಪಂಚಕಮಿಟಿಯ ಮುಖ್ಯಸ್ಥರು ಲಿಂಗಾಯತ, ಮರಾಠಾ ಈ ಜನಾಂಗದವರೇ ಇರುತ್ತಾರೆಂದು ತಿಳಿದುಬರುತ್ತದೆ. ಉರುಸ ನಡೆಸಲು ಇರುವ ಒಂದು ಸಮಿತಿಯ ಅಧ್ಯಕ್ಷರಂತೂ ಯಾವಾಗಲೂ ಹಿಂದೂಗಳೇ ಇರುತ್ತಾರಂತೆ. ಇದು ಈ ಊರಿನ, ಈ ದರ್ಗಾದ ವಿಶೇಷತೆಯನ್ನು ಹೇಳುತ್ತದೆ.

ನಾವು ಗಮನಿಸಿದಂತೆ, ಎಲ್ಲೆಲ್ಲಿ ಶರಣರ ದೇವಾಲಯಗಳನ್ನು ವಶಪಡಿಸಿಕೊಂಡು, ಅವುಗಳನ್ನು ಮುಸ್ಲೀಮ ಸಂಸ್ಕೃತಿಗೆ ಅಳವಡಿಸುವ ಪ್ರಯತ್ನಗಳು ನಡೆದಿವೆಯೋ ಅಂಥಲ್ಲಿ ಮಾತ್ರ ಲಿಂಗಾಯತ ಮತ್ತು ಇತರರಿಗೆ ಈ ಬಗೆಯ ಪ್ರವೇಶ, ಕೆಲವು ಚಾಜಗಳು ಇರುವುದನ್ನು ಕಾಣುತ್ತೇವೆ. ಬಸವಕಲ್ಯಾಣ ತಾಲೂಕಿನ ನಾರಾಯಣಪುರದ ಒಕ್ಕಲಿಗ ಮುದ್ದಯ್ಯ-ಮೃತ್ಯುಂಜಯ(ಮರ್ತುಜಾ), ಸಕಲೇಶ ಮಾದರಸ (ಸಕಾಸ ಪೀರ), ಬೀದರಿನ ಹತ್ತಿರದ ಅಷ್ಟೂರಿನ ಅಲ್ಲಮನ ಹೆಸರಿನ ಮಂದಿರ (ಅಹಮದ್ ಶಹಾವಲಿ ದರ್ಗಾ), ಫಿರೋಜಾಬಾದ ಮಡಿವಾಳ ಮಾಚಿದೇವರ ಗುರು ಕಲಿದೇವರ ಮಠ (ಫಲಿತುರ್ ರಹೆಮಾನ್ ದರ್ಗಾ)- ಈ ಗುಡಿಗಳೂ ದರ್ಗಾಗಳಾಗಿ ಪರಿವರ್ತನೆ ಹೊಂದಿದ್ದು ಅಲ್ಲಿ ಲಿಂಗಾಯತ ಹಾಗೂ ಮುಸ್ಲೀಮ ಎರಡೂ ಸಮಾಜದವರು ಪೂಜೆಯ ಅವಕಾಶ ಹೊಂದಿದ್ದಾರೆ. ಈ ದೇವಾಲಯಗಳಿಗೆ ಸಂಬಂಧಿಸಿದ ವಿಶೇಷ ಉತ್ಸವಗಳಲ್ಲಿ ಲಿಂಗಾಯತರಿಗೆ ಕೆಲ ಚಾಜಗಳಿರುವುದನ್ನೂ ಕಾಣಬಹುದಾಗಿದೆ.

ಶುದ್ಧ ಮುಸ್ಲೀಮ ದರ್ಗಾಗಳಿದ್ದಲ್ಲಿ ಬೇರೆ ಜನಾಂಗದವರಿಗೆ ಯಾವುದೇ ಅಧಿಕಾರ, ಚಾಜ, ಭಾಗಿದಾರಿಕೆ ಇರುವುದು ನಮ್ಮ ಗಮನಕ್ಕೆ ಬಂದಿಲ್ಲ. ಹೀಗಾಗಿ ಗೈಬೀಪೀರ ದರ್ಗಾ ಅದು ಮೊದಲು ಹಿಂದೂ ವಿಶೇಷವಾಗಿ ಶೈವ ಸಂಸ್ಕೃತಿಗೆ ಸಂಬಂಧಿಸಿದ ಸ್ಥಳವೇ ಆಗಿದ್ದು, ನಂತರ ಮುಸ್ಲೀಮ ಆಳ್ವಿಕೆಯಲ್ಲಿ ಅದನ್ನು ವಶಪಡಿಸಿಕೊಂಡು, ದರ್ಗಾ ಆಗಿ ಪರಿವರ್ತನೆ ಮಾಡಿದರೂ ಜನಾಂಗೀಯ ಸೌಹಾರ್ದತೆಗಾಗಿ ಅಲ್ಲಿಯ ಆಚರಣೆಗಳಲ್ಲಿ ಹಿಂದೂಗಳಿಗೆ ಚಾಜ ಕೊಟ್ಟಿರುವಂತೆ ತೋರುತ್ತದೆ. ಸ್ಥಳೀಯರು ಹೇಳುವಂತೆ ಈ ದರ್ಗಾ ಮೂಲದಲ್ಲಿ ಮಂಗಳಾದೇವಿ ಗುಡಿ ಆಗಿತ್ತಂತೆ.

**ಅರಮನೆಯ ಪಳೆಯುಳಿಕೆಗಳು :**

ಗೈಬೀಪೀರ ದರ್ಗಾದ ಅಂಗಳದಿಂದ ಪೂರ್ವಕ್ಕೆ ಇಳಿದು ಬರಲು ಒಂದು ಬಾಗಿಲಿದೆ. ಬಾಗಿಲಿನ ಎರಡೂ ಮಗ್ಗಲೂ ಮತ್ತೆ ಎರಡು ಭಾಗಗಳಿವೆ. ಇಲ್ಲೆಲ್ಲ ಹಳೆಯ ಕಟ್ಟಡದ ಗುರುತುಗಳು ಉಳಿದುಕೊಂಡಿವೆ. ಈ ಬಾಗಿಲಿನ ಎದುರಿಗೆ ವಿಸ್ತಾರವಾದ ಅಂಗಳವಿದೆ. ಅಂಗಳದ ಕೊನೆಯಲ್ಲಿ ಮನೆಗಳಿದ್ದು, ಅಲ್ಲಿ ಒಂದು ಹಳೆಯ ಗೋಡೆ ಉಳಿದಿರುವುದು ಗೋಚರಿಸುತ್ತದೆ. ಇದನ್ನು ಗಮನಿಸಿದರೆ, ಈ ವಿಸ್ತಾರವಾದ ಅಂಗಳದಲ್ಲಿ ಆಡಳಿತಗಾರರು ವಾಸಿಸುವ ಮನೆ ಇದ್ದ ಸಾಧ್ಯತೆ ಇದೆ. ಅರಮನೆಯ ಅಂಗಳದಲ್ಲಿ ಅರಸರ ಆರಾಧ್ಯದೈವದ ಗುಡಿಗಳಿರುವುದು ಸಹಜ. ಹೀಗಾಗಿ ಅರಮನೆಯ ಅಂಗಳದಲ್ಲಿ ಮಂಗಳಾದೇವಿ ಗುಡಿ ಇತ್ತೆಂದು ಹೇಳಲು ಅವಕಾಶವಿದೆ. ಇದರಿಂದಾಗಿ ಈ ಸ್ಥಳದಲ್ಲಿ ಬಸವಣ್ಣನವರು ಅಡ್ಡಾಡಿದ ಸಾಧ್ಯತೆ ಸ್ಪಷ್ಟವಾಗಿದೆ.

**ದೇವಸ್ಥಾನಗಳು :**

ಬಿಜ್ಜಳನು ಆಳಿದ ಕೋಟೆಯ ಎರಡೂ ಬದಿಗಳಲ್ಲಿ ದೇವಾಲಯಗಳ ಕಟ್ಟಡಗಳಿವೆ. ಕೋಟೆಗೆ ಹತ್ತಿಕೊಂಡು, ಕೋಟೆಯ ಮುಖ್ಯದ್ವಾರಕ್ಕೆ ಸಮನಾಗಿ ಬಲಗಡೆ ಪುರಾತನವಾದ ರೇವಣಸಿದ್ಧೇಶ್ವರ ದೇವಸ್ಥಾನವಿದೆ. ಕೋಟೆ ಮತ್ತು ರೇವಣಸಿದ್ದೇಶ್ವರ ಮಂದಿರದ ನಡುವೆ ಬಹಳವೆಂದರೆ ಇಪ್ಪತ್ತು ಇಪ್ಪತ್ತೈದು ಅಡಿ ಅಗಲದ ಒಂದು ರಸ್ತೆ ಮಾತ್ರ ಇದೆ. ಹಿಂದೆ ಎಂಟನೇ ಶತಮಾನಕ್ಕೆ ಸೇರಿದ್ದೆಂದು ಹೇಳುವ ಕಾಶೀವಿಶ್ವನಾಥನ ಗುಡಿ ಇದೆ. ಈ ಮಂದಿರದ ಮುಂದೆ ದೊಡ್ಡ ಬಾವಿ ಇದೆ. ಇದು ಸುಂದರವಾದ ಕಟ್ಟಡ ಹೊಂದಿತ್ತು ಎನ್ನುತ್ತಾರೆ. ಈಗ ಸಂಪೂರ್ಣವಾಗಿ ಹಾಳಾಗಿ ಹೋಗಿದೆ.

ಕೋಟೆಯ ಉತ್ತರದ ಮಗ್ಗಲು, ಕಂದಕ ಇತ್ತೆಂದು ಹೇಳುವ ಸ್ಥಳಕ್ಕೆ ಹೊಂದಿಕೊಂಡು ಒಂದು ಶಂಕರಲಿಂಗ ದೇವಾಲಯವಿದೆ. ಅಲ್ಲಿಂದ ಇನ್ನೂ ಸ್ವಲ್ಪ ಮುಂದಕ್ಕೆ ಬಂದರೆ, ಕೋಟೆಯ ಪೂರ್ವದಿಕ್ಕಿನಲ್ಲಿಯೇ ಗ್ರಾಮದ ಕೊನೆಯಲ್ಲಿ, 'ಕಲ್ಯಾಣೇಶ್ವರ ಮಹಾದೇವ' ಎಂದು ಕರೆಯುವ ಒಂದು ದೇವಾಲಯವಿದೆ. ಪಾತರಕೆರೆ ಇರುವುದು ಈ ದೇವಾಲಯದ ಮುಂದೆ, ಪೂರ್ವದಿಕ್ಕಿನಲ್ಲಿಯೆ. ಈ ದೇವಾಲಯ ಇರುವ ದಿಬ್ಬದ ಮೇಲೆಯೇ ದೇವಾಲಯದ ಬೆನ್ನಗೋಡೆಗೆ ಆನಿಸಿ, ಮುಸ್ಲೀಮ ಮಜೇರಿಗಳು ಕಂಡುಬರುತ್ತವೆ. ಮುಸ್ಲೀಮರು ಈ ಮಜೇರಿಗಳನ್ನು 'ಕಲ್ಯಾಣ ಸಾಹೇಬ' ಎಂದು ಕರೆಯುತ್ತಾರೆ. ಅಲ್ಲಿಯ ಗೋಡೆಯ ಮೇಲೆ 'ಕಲ್ಯಾಣಪ್ರಭು ದೇವಾಸ್ಥಾನ, ದರ್ಗಾ' ಎಂದು ಬರೆದಿರುವುದು ಕಂಡುಬರುತ್ತದೆ.

**ಲಿಂಗಾಯತ ಮಠ :**

ಮಂಗಳವೇಡೆಯಲ್ಲಿ ಸು. ೨೦೦ ಲಿಂಗಾಯತರ ಮನೆಗಳಿವೆ. ಸುತ್ತಲಿನ ಗ್ರಾಮಗಳಲ್ಲೂ ಲಿಂಗಾಯತರಿದ್ದಾರೆಂದು ತಿಳಿದುಬರುತ್ತದೆ. ಸಿದ್ದನಕೆರೆ ಗ್ರಾಮದಲ್ಲಿ ಇರುವ ೫೦ ಮನೆಗಳೂ ಲಿಂಗಾಯತರ ಮನೆಗಳಾಗಿವೆ. ಇವರೆಲ್ಲ ಸಮೀಪದ

ಬಿಜಾಪೂರ ಜಿಲ್ಲೆಯಿಂದ ಕನ್ಯೆಯರನ್ನು ತಮ್ಮ ಗಂಡುಮಕ್ಕಳಿಗೆ ತಂದುಕೊಂಡು ಸಂಬಂಧ ಬೆಳೆಸುವ ಪದ್ಧತಿಯನ್ನು ಇವತ್ತಿಗೂ ಪಾಲಿಸಿಕೊಂಡು ಬರುತ್ತಿದ್ದಾರೆಂದು ತಿಳಿದುಬರುತ್ತದೆ. ಹೀಗಾಗಿ ಇವರ ಮನೆತನಗಳಲ್ಲಿ ಕನ್ನಡ ಭಾಷೆ ಇನ್ನೂ ಬಳಕೆಯಲ್ಲಿದೆ.

ಸೋಲಾಪುರದಿಂದ ಮಂಗಳವೇಡೆ ಪ್ರವೇಶಿಸುತ್ತಲೇ ಇರುವ ಬೋರಾಳನಾಕಾದ ಬಲಮಗ್ಗಲು ಒಂದು ಪುರಾತನವಾದ ಕಟ್ಟಡವಿದೆ. ಇದನ್ನು ಲಿಂಗಾಯತ ಮಠ ಎಂದು ಕರೆಯುತ್ತಾರೆ. ಕಟ್ಟಡ ದುರಸ್ತಿಯಾಗಿದೆ. ಬಳಕೆ ಇಲ್ಲದ್ದಕ್ಕಾಗಿ ಒಳಮಗ್ಗಲು ಸಂಪೂರ್ಣವಾಗಿ ಹಾಳಾಗಿದೆ. ಈ ಮಠದ ಅಂಗಳವನ್ನು ಮುಸ್ಲೀಮರು ಸ್ಮಶಾನ ಮಾಡಿಕೊಂಡಿದ್ದಾರೆ. ನಾವು ಈ ಮಠ ನೋಡಲು ಹೋದಾಗ ಮುಸ್ಲೀಮರು ಒಂದು ಹೆಣವನ್ನು ದಫನ್ ಮಾಡಿ ಹೊರಬರುತ್ತಿದ್ದರು. ನಾವು ಒಳಗೆ ಹೋಗಬೇಕೆಂದಾಗ ಸ್ಮಶಾನದ ಆವರಣಕ್ಕೆ ಬಾಗಿಲು ಹಾಕಿ ಕೀಲಿ ಹಾಕುತ್ತಿದ್ದರು. ನಮ್ಮ ಜೊತೆಗೆ ಬಂದಿದ್ದ ಯುವಕ ಇಂದ್ರಜೀತ ಘುಳೆ ಮಂಗಳವೇಡೆಯಲ್ಲಿ ಎಲ್ಲರೊಂದಿಗೆ ಬೆರೆತು ಇರುವವರು. ಜನಪ್ರಿಯ ಕವಿ ಕೂಡ. ಹೀಗಾಗಿ ಆತ ಕೀಲಿ ಕೈ ಬೇಡಿದಾಗ, ಕೊಟ್ಟು, ಪುನಃ ಕೀಲಿ ಹಾಕಿ ಮಗ್ಗುಲಿನ ಒಂದು ಅಂಗಡಿಯಲ್ಲಿ ಕೊಡಲು ಹೇಳಿದರು. ಲಿಂಗಾಯತರ ಮಠ ಈಗ ಮುಸ್ಲೀಮ ಸ್ಮಶಾನ ಭೂಮಿಯಲ್ಲಿರುವುದು ವಿಶೇಷ. ಅಂದರೆ ಮಠದ ಆವರಣ ಈಗ ಮುಸ್ಲೀಮರ ಖಬರಸ್ಥಾನ ಆಗಿದೆ.

**ಏಕಾಂತ ರಾಮಯ್ಯನ ಕಥೆ ಹೇಳುವ ವಿಗ್ರಹ ಶಾಸನ :**

ಏಕಾಂತರಾಮಯ್ಯನ ಸಂಪೂರ್ಣ ಕಥೆಯನ್ನು ಶಿಲ್ಪದಲ್ಲಿ ಮೂಡಿಸಿದ ಶಿಲ್ಪಗಲ್ಲು ಅಬಲೂರು ಗ್ರಾಮದಲ್ಲಿರುವ, ಏಕಾಂತರಾಮಯ್ಯ ಕಟ್ಟಿಸಿದ ಸೋಮೇಶ್ವರ ದೇವಾಲಯದ ಪೌಳಿಯ ಒಂದು ಕಲ್ಲಿನ ಶಿಲಾಫಲಕದಲ್ಲಿ ಕಾಣುತ್ತದೆ. ಶಿವಭಕ್ತನಾದ ಏಕಾಂತರಾಮಯ್ಯ ಜೈನರೊಡನೆ ವಾದಕ್ಕೆ ಇಳಿದು, ಶಿವನೇ ಶ್ರೇಷ್ಠನೆಂದು ಸಾರಲು ತನ್ನ ರುಂಡವನ್ನು ಹರಿದುಕೊಳ್ಳುವುದು, ರುಂಡಮುಂಡಗಳ ಜೋಡಣೆಯಿಂದ ಪುನಃ ಜೀವತಳೆಯುವುದು, ಜಿನಬಿಂಬಗಳನ್ನು ನಾಶಪಡಿಸುವುದು, ಪ್ರತಿಯಾಗಿ ಜೈನರೊಡನೆ ಕಾದಾಡಿ ಗೆಲಿವುದು, ಕೊನೆಯಲ್ಲಿ ಶಿವಲಿಂಗವನ್ನು ಸ್ಥಾಪಿಸುವುದು. ಇಷ್ಟು ಅಬಲೂರು ಶಿಲ್ಪಗಲ್ಲಿನಲ್ಲಿ ಏಕಾಂತ ರಾಮಯ್ಯನ ಚರಿತ್ರೆ ಕೆತ್ತಲಾಗಿದೆ.

ಈ ಚರಿತ್ರೆಯನ್ನೇ ಹೇಳುವ ಇನ್ನೊಂದು ಶಿಲ್ಪಗಲ್ಲು ಮಂಗಳವೇಡೆ ಗ್ರಾಮದ ಮುಥೆ ಗಲ್ಲಿಯಲ್ಲಿದೆ. ಇದೊಂದು ಸಂಶೋಧನ ಕ್ಷೇತ್ರದ ಅಪರೂಪದ ಆಕರವೆಂದೇ ಭಾವಿಸಬೇಕಾಗುತ್ತದೆ. ಈ ಶಿಲಾಫಲಕ ಇರುವ ಕಟ್ಟೆಯ ಮೇಲೆ ಕುಳಿತಿದ್ದ ಶ್ರೀಮತಿ ಶಾಂತಾಬಾಯಿ ಜಾಧವ (ವ. ೬೫-೭೦) ಎನ್ನುವವರು ಹೇಳುವಂತೆ, ಅವರ ತಂದೆ ಶಂಕರ ಓಮ್ಣೆ ಅವರು ಶಂಕರಲಿಂಗ ದೇವಾಲಯದ ಮಗ್ಗಲು ಇರುವ ಶಾಲೆಯ ಹಿಂದೆ ಮನೆ ಕಟ್ಟಲು ಕಲ್ಲುಗಳಿಗಾಗಿ ನೆಲ ಅಗೆಯುತ್ತಿದ್ದಾಗ ಈ ಶಿಲಾಫಲಕ ದೊರಕಿತಂತೆ.

ಈ ಶಿಲಾಫಲಕ ದೊರೆತ ಪ್ರದೇಶ ಕೋಟೆಯ ಭಾಗಕ್ಕೆ ಸಂಬಂಧಿಸಿದೆ. ಕೋಟೆಯ ಕಂದಕಕ್ಕೆ ಹತ್ತಿಕೊಂಡು ಶಂಕರಲಿಂಗ ದೇವಾಲಯವಿದೆ. ಹಳೆಯ ದೇವಾಲಯವೆಲ್ಲ

ನಾಶವಾಗಿ ಈಗ ಸಣ್ಣ ಗರ್ಭಗೃಹ ಮಾತ್ರ ಉಳಿದಿದೆ. ಇದರ ಮಗ್ಗಲು ಈಗೊಂದು ಶಾಲೆ ಇದೆ. ಈ ಶಾಲೆ ಮತ್ತು ಶಾಲೆಯ ಹಿಂದಿನ ಪ್ರದೇಶ ಕೋಟೆಯ ಪ್ರದೇಶಗಳಿಗೆ ಒಳಪಟ್ಟಿವೆ. ಕೋಟೆಯ ಸುತ್ತಮುತ್ತಲಿನ ಕಟ್ಟಡಗಳೆಲ್ಲ ಸಂಪೂರ್ಣವಾಗಿ ಹಾಳಾಗಿವೆ. ಪುರಾತನ ಕಟ್ಟಡಗಳಿಗೆ ಬಳಸಿದ ಕಲ್ಲುಗಳನ್ನು ಮಂಗಳವೇಡೆಯ ಜನ ತಮ್ಮ ಮನೆಗಳ ನಿರ್ಮಾಣಕ್ಕಾಗಿ ತೆಗೆದುಕೊಂಡು ಹೋಗಿದ್ದಾರೆಂದು ತಿಳಿದುಬರುತ್ತದೆ. ಹೀಗೆಯೇ ಶಂಕರ ಓಮ್ನೆ ಅವರು ತಮ್ಮ ಮನೆಗೆ ಕಲ್ಲುಗಳನ್ನು ಎತ್ತಿ ಒಯ್ಯುವಾಗ ಈ ಏಕಾಂತರಾಮಯ್ಯನ ಕಥೆ ಕೆತ್ತಿದ್ದ ಕಲ್ಲು ದೊರೆತಿದೆ. ಇದು ಶ್ರೀ ಶಂಕರ ಓಮ್ನೆ ಅವರಿಗೆ ವಿಶೇಷ ಎನಿಸಿ ಇದನ್ನು ತಮ್ಮ ಚಕ್ಕಡಿ ಬಂಡಿಯಲ್ಲಿ ಸಾಗಿಸಿ, ತಮ್ಮ ಗಲ್ಲಿಯ ಒಂದು ಗ್ರಾಮದೇವತೆ ಇರುವ ಕಟ್ಟೆಗೆ ಆನಿಸಿ ಇರಿಸಿದ್ದಾರೆ. ಈಗ ಮಂಗಳವೇಡೆಯಲ್ಲಿ ಸಿಗುತ್ತಿರುವ ಶರಣರಿಗೆ ಸಂಬಂಧಿಸಿದ ಬಹುದೊಡ್ಡ ಸಾಕ್ಷಿ ಇದಾಗಿದೆ.

ಏಕಾಂತರಾಮಯ್ಯನಿಗೆ ಸಂಬಂಧಿಸಿದ ಈ ಶಿಲಾಫಲಕದ ಎಡ ಮೇಲ್ಭಾಗದಲ್ಲಿ ಮೊದಲಿಗೆ ಚಾಲುಕ್ಯರ ರಾಜ್ಯ ಲಾಂಛನವಾದ ವರಾಹವಿದೆ. ಈ ಶಿಲಾಫಲಕ ದೊರೆಕಿರುವುದು ಕಲಚುರಿಗಳು ಆಳುತ್ತಿರುವ ರಾಜಧಾನಿಯಲ್ಲಿ. ಕಲಚುರಿಗಳ ರಾಜ್ಯ ಲಾಂಛನ ನಂದಿ. ಆದರೆ ಸಾಮಂತರಾದ ಕಲಚುರಿಗಳು ತಾವು ನಿಷ್ಠರಾಗಿರುವ ಕಲ್ಯಾಣ ಚಾಲಕ್ಯರ ರಾಜ್ಯಲಾಂಛನವನ್ನು ಶಿಲಾಫಲಕದ ಮೇಲೆ ಹಾಕಿರುವುದನ್ನು ಗಮನಿಸಿದರೆ ಶಿಲಾಫಲವನ್ನು ಚಾಲುಕ್ಯ ಅರಸರ ಅನುಮತಿಯ ಮೇರೆಗೆ ಕೆತ್ತಿರುವುದು ಎನ್ನುವ ಭಾವ ಇರಬೇಕು.

ಫಲಕದ ಒಂದನೇ ಭಾಗದಲ್ಲಿ ಏಕಾಂತರಾಮಯ್ಯನು ತನ್ನ ತಲೆಯನ್ನು ತರಿದುಕೊಳ್ಳಲು ಮುಂದಾಗಿ ಶಿವಲಿಂಗವನ್ನು ಪ್ರಾರ್ಥಿಸುತ್ತಿರುವ ಚಿತ್ರವಿದೆ. ಎರಡನೇ ಭಾಗದಲ್ಲಿ ಏಕಾಂತರಾಮಯ್ಯನಿಗೆ ತಡೆದು ಹಿಡಿದಿದ್ದು, ಆತನ ಮುಂದೆ ಕೆಳಗೆ ಗಂಡುಗತ್ತರಿ ಕಾಣುತ್ತಿದೆ. ಅಂದರೆ ಗಂಡುಗತ್ತರಿಗೆ ಕುತ್ತಿಗೆ ಒಡ್ಡುವ ಸನ್ನಿವೇಶವನ್ನು ಇಲ್ಲಿ ತೋರಿಸಲಾಗಿದೆ. ಮೂರನೆಯ ಭಾಗದಲ್ಲಿ, ಮುಂಡದಿಂದ ಬೇರೆಯಾದ ಏಕಾಂತರಾಮಯ್ಯನ ರುಂಡವನ್ನು ಒಂದು ಹರಿವಾಣದಲ್ಲಿ ಇಟ್ಟು, ಅದನ್ನು ತಲೆಯಮೇಲಿಟ್ಟುಕೊಂಡು ಮೆರವಣಿಗೆಯಲ್ಲಿ ಹೊರಟಿರುವ ದೃಶ್ಯವಿದೆ. ರುಂಡವುಳ್ಳ ಹರಿವಾಣವನ್ನು ಹೊತ್ತವನು ಅಗ್ಘವಣಿ ಹೊನ್ನಯ್ಯ ಎಂದು ಅಬಲೂರು ಶಾಸನ, ಹರಿಹರನ ರಗಳೆಗಳು ಹೇಳುತ್ತವೆ. ಶಿಲ್ಪದಲ್ಲಿ ಒಂದು ಪಲ್ಲಕ್ಕಿಯೂ ಕಾಣುತ್ತಿದೆ. ಜೊತೆಗೆ ಎದ್ದುಕಾಣುವಂತೆ ಜಿನಬಿಂಬವನ್ನು ಧ್ವಂಸಗೊಳಿಸುತ್ತಿರುವ ಶಿಲ್ಪವಿದೆ. ಏಕಾಂತರಾಮಯ್ಯ ಅವರ ರುಂಡಮುಂಡಗಳು ಕೂಡಿದನಂತರದ ದೃಶ್ಯವಿದಾಗಿದೆ ಎನ್ನಬೇಕು. ನಾಲ್ಕನೇ ಭಾಗದಲ್ಲಿ ಅಬಲೂರು ಶಾಸನ ಹೇಳುವಂತೆ ಮೂರನೆಯ ಸೋಮೇಶ್ವರನು "ಪಾರಮೇಶ್ವರ ದತ್ತಿಯಾಗಿ ತಾಮ್ರಶಾಸನಮಂ ಕೊಟ್ಟಾನೆಯನೇಜಿಸಿ ಮೆಱಯಿಸಿ ಪರಮ ಭಕ್ತಿಯುಂ ಪ್ರತಿಪಾಳಿಸಿದಂ"(ಶಾಸನ ಸಾಹಿತ್ಯ ಸಂಚಯ, ಪು.೧೪೬) ಏಕಾಂತರಾಮಯ್ಯನನ್ನು ಸನ್ಮಾನಿಸಿ, ಆನೆಯ ಮೇಲೆ ಕೂಡಿಸಿ, ಮೆರವಣಿಗೆ ಮಾಡಿಸಿದ ಚಿತ್ರ ಬಿಡಿಸಿದಂತೆ ಇದೆ. ಇದರ ಕೆಳಗೆ ಇನ್ನೊಂದು ಹಂತದ ಚಿತ್ರಪಟ್ಟಿ ಇದ್ದಂತಿದೆ. ಆದರೆ ಆ ಭಾಗದ ಶಿಲ್ಪ ಒಡೆದು ಹೋಗಿದೆ.

ಒಬ್ಬ ಶರಣನ ಬದುಕಿಗೆ ಸಂಬಂಧಿಸಿದ ಎರಡು ಉಬ್ಬು ಕೆತ್ತನೆವುಳ್ಳ ಶಿಲಾಫಲಕಗಳು ದೊರೆಯುತ್ತಿರುವುದು (ಅಬಲೂರು ಮತ್ತು ಮಂಗಳವೇಡೆ) ಏಕಾಂತರಾಮಯ್ಯನಿಗೆ ಸಂಬಂಧಿಸಿ ಮಾತ್ರ. ಅದರಲ್ಲೂ ಈ ವಿಗ್ರಹ ಶಾಸನ ಮಂಗಳವೇಡೆಯಲ್ಲಿ ಇರುವುದು ಹೆಚ್ಚಿನ ಮಹತ್ವ ಪಡೆಯುತ್ತದೆ. ಶರಣರಿಗೆ ಸಂಬಂದಿಸಿದ ಇಂತಹ ಶಿಲ್ಪಗಲ್ಲು ಮಂಗಳವೇಡೆಯಲ್ಲಿ ದೊರೆಯುತ್ತಿರುವುದು ಒಂದು ಅಧಿಕೃತ ದಾಖಲೆ ಎನಿಸುತ್ತದೆ. ಈ ಶಿಲ್ಪಗಲ್ಲು ಚಾಲುಕ್ಯ ಅರಸು ಮನೆತನದ ಲಾಂಛನ ಹೊತ್ತಿರುವುದರಿಂದ ಇದು ಅಧಿಕೃತವಾಗಿ ಆಡಳಿತಗಾರರ ಅನುಮತಿಯ ಮೇರೆಗೆ ನಿರ್ಮಾಣವಾದ ಶಿಲಾಫಲಕ ಎನಿಸುತ್ತದೆ.

**ಕೆರೆಗಳು :**

ರೇವಣಸಿದ್ಧರು ಮಂಗಳವೇಡೆಯಲ್ಲಿ ಒಂದು ಕೆರೆಯನ್ನು ಅಗೆಸಿದರೆಂದು, ಈ ಕೆರೆಯ ಕೆಲಸ ನಡೆದಾಗಲೇ ರೇವಣಸಿದ್ಧನ ಹೆಂಡತಿ ಚೋಳರಾಜಕುಮಾರಿ ಬಸುರಿಯಾಗಿದ್ದಳೆಂದೂ ಆಕೆಗೆ ಕೆಲಸ ಮಾಡಲು ಸಾಧ್ಯವಾಗದಿದ್ದಾಗ ರೇವಣಸಿದ್ಧರು ಆಕೆಯ ಗರ್ಭದ ಪಿಂಡವನ್ನು ಪಡೆದು, ಕೆರೆಯ ದಂಡೆಯಲ್ಲಿ ಒಂದು ಮಡಕೆಯಲ್ಲಿ ಹಾಕಿ ಮುಚ್ಚಳ ಮುಚ್ಚಿ ಇಟ್ಟರೆಂದೂ, ಒಂಬತ್ತು ತಿಂಗಳ ನಂತರ ಮುಚ್ಚಳ ತೆಗೆದಾಗ ಮಗುವೊಂದು ಹೊರಬಂದಿತೆಂದೂ ಆ ಮಗುವೇ ರುದ್ರಮುನಿ ಎಂದೂ ಹರಿಹರ ತನ್ನ ರೇವಣಸಿದ್ಧ ರಗಳೆಯಲ್ಲಿ ಬರೆಯುತ್ತಾನೆ.

ಮಂಗಳವೇಡೆಯಲ್ಲಿ ಒಟ್ಟಿಗೆ ಈಗ ನೋಡಲು ಮೂರು ಕೆರೆಗಳಿವೆ. ಕೃಷ್ಣಕೆರೆ, ಕುಂಬಾರಕೆರೆ, ಪಾತರಬಾಯಿಕೆರೆ. ಪಾತರಬಾಯಿಕೆರೆ ಗ್ರಾಮದ ಪೂರ್ವದಿಕ್ಕಿನಲ್ಲಿದೆ. ಇಲ್ಲೊಂದು ಕಲ್ಯಾಣೇಶ್ವರ ಮಹಾದೇವ ದೇವಾಲಯವಿದ್ದು ಅದರ ಮುಂದುಗಡೆ ಇರುವ ತೀರ ಸಣ್ಣ ಕೆರೆ ಇದು. ಈಗ ತುಂಬಾ ಹಾಳಾಗಿಹೋಗಿದೆ. ಇನ್ನೊಂದು ಸೋಲಾಪುರ ದಿಂದ ಮಂಗಳವೇಡೆ ಪ್ರವೇಶ ಮಾಡುವಾಗ ಇರುವ ಬೋರಾಳನಾಕಾ ಎಂಬ ಒಂದು ವರ್ತುಳ(ಸರ್ಕಲ್) ಇದೆ. ಇಲ್ಲಿಯೇ ತುಸು ಬಲಗಡೆ ಒಂದು ಕೆರೆ ಇದ್ದು ಇದನ್ನು ಕುಂಬಾರಕೆರೆ ಎನ್ನುತ್ತಾರೆ. ಕುಂಬಾರರು ಗಡಿಗೆ ನಿರ್ಮಾಣಕ್ಕಾಗಿ ಇಲ್ಲಿಂದ ಮಣ್ಣನ್ನು ಒಯ್ಯುತ್ತಿದ್ದರೆಂದು ತಿಳಿದುಬರುತ್ತದೆ. ಹೀಗಾಗಿಯೇ ಈ ತೆಗ್ಗು ಪ್ರದೇಶ ನಿರ್ಮಾಣವಾಗಿ, ನೀರು ನಿಲ್ಲುತ್ತ ಕೆರೆಯಂತಾಗಿದ್ದರಿಂದ ಇದನ್ನು ಕುಂಬಾರ ಕೆರೆ ಎಂದು ಕರೆಯುವ ರೂಢಿ ಬಿದ್ದಿರಬೇಕೆನಿಸುತ್ತದೆ. ಈ ಕೆರೆಯೂ ಅಂತಹ ದೊಡ್ಡ ಕೆರೆ ಏನೂ ಅಲ್ಲ.

ಕೃಷ್ಣಕೆರೆ ಬಹುದೊಡ್ಡ ಕೆರೆಯಾಗಿದೆ. ಈ ಕೆರೆಯ ಹೂಳೆತ್ತುವಾಗ ಒಳಗಡೆ ಅನೇಕ ಶಿಲ್ಪಗಳು ದೊರೆತಿವೆ. ಜಿನಬಿಂಬಗಳೂ ಶಿವಲಿಂಗಗಳೂ ಗಣಪತಿ ಮೂರ್ತಿಗಳೂ ಪ್ರಾಚೀನ ಕಟ್ಟಡಗಳ ಅನೇಕ ಅವಶೇಷಗಳೂ ಸಿಕ್ಕಿವೆ. ಈ ಕೆರೆಯ ನಡುವೆ ಕೃಷ್ಣಮಂದಿರದ ಗುರುತುಗಳು ದೊರೆತುದರಿಂದ ಕೃಷ್ಣಕೆರೆಯೆಂದು ಕರೆಯಲಾಗುತ್ತದೆ ಎಂದು ತಿಳಿದುಬರುತ್ತದೆ.

ಈ ಕೆರೆ ತುಂಬಾ ವಿಸ್ತಾರವಾದ ಕೆರೆಯಾಗಿದೆ. ರೇವಣಸಿದ್ಧ ಅಗೆಸಿದನೆಂದು

ಪ್ರಸಿದ್ಧವಾಗಿರುವ ಸಿದ್ಧನಕೆರೆ ನೋಡಿದರೆ ಮಂಗಳವೇಡೆಯ ಈ ಕೆರೆಯ ವಿಸ್ತಾರ ಗಮನಕ್ಕೆ ಬರುತ್ತದೆ. ಈ ಕೆರೆ ತುಂಬಾ ಹಳೆಯದು ಮತ್ತು ಪ್ರಯೋಜನಕಾರಿ ಎಂಬುದು ಅದರ ವಿಸ್ತಾರ ಮತ್ತು ಅದು ಇರುವ ಸ್ಥಳ ನೋಡಿದರೆ ಅರಿವಿಗೆ ಬರುವಂತಿದೆ. ಕೆರೆಯ ಪೂರ್ವದ ದಂಡೆಯಲ್ಲಿ ಒಂದು ಪುರಾತನ ದೇವಾಲಯದ ಕುರುಹುಗಳಿವೆ. ಅದರ ಲಕ್ಷಣಗಳನ್ನು ಗಮನಿಸಿದರೆ ಅದೊಂದು ಶಿವದೇವಾಲಯದ ಪಳೆಯುಳಿಕೆ ಎನಿಸುತ್ತದೆ. ಅದು ನೆಲದಲ್ಲಿ ಸಂಪೂರ್ಣವಾಗಿ ಹೂತುಹೋಗಿದ್ದು ಅದರ ಅಗೆತವಾದರೆ ಇನ್ನೂ ಹೆಚ್ಚಿನ ಸಂಗತಿಗಳು ಕಂಡುಬರಬಹುದು.

ಕೃಷ್ಣ ಕೆರೆ ಮಂಗಳವೇಡೆಯ ಪಶ್ಚಿಮದಿಕ್ಕಿನಲ್ಲಿ, ಎತ್ತರವಾದ ಪ್ರದೇಶದಲ್ಲಿದೆ. ಕೆರೆಯ ಪಶ್ಚಿಮ, ದಕ್ಷಿಣ ಮತ್ತು ಉತ್ತರ ದಿಕ್ಕುಗಳಲ್ಲಿ ಎತ್ತರದ ಪ್ರದೇಶಗಳಿದ್ದು, ಮಳೆಗಾಲದಲ್ಲಿ ಸಹಜವಾಗಿ ನೀರು ಹರಿದುಬಂದು ಸಂಗ್ರಹವಾಗುತ್ತದೆ. ಸುಮಾರು ೨೦-೨೫ ಎಕರೆಗಳಷ್ಟು ವಿಸ್ತಾರವಾದ ಕೆರೆ ಇದು. ಕೆರೆಯ ಏರಿಯಿಂದ ಒಂದೆರಡು ಫರ್ಲಾಂಗುಗಳ ದೂರದಲ್ಲಿಯೇ ಪೂರ್ವದಿಸೆಯಲ್ಲಿ ಮಂಗಳವೇಡೆಯ ಕೋಟೆಯಿದೆ. ಈ ಕೆರೆಯಿಂದ ಕಾಲುವೆಗಳಿದ್ದು, ಸುತ್ತಲೂ ಹೊಲಗಳಿಗೆ ಈಗಲೂ ನೀರು ಉಪಯೋಗವಾಗುತ್ತದೆ. ನೇರವಾಗಿ ಕೋಟೆಯ ಕಂದಕಕ್ಕೂ, ಗ್ರಾಮದ ಬಳಕೆಗೂ ಉಪಯೋಗವಾಗುವಂತೆ ನೀರಿನ ಕಾಲುವೆಗಳು ಇದ್ದವಂತೆ. ಇದನ್ನು ಗಮನಿಸಿದರೆ ಕೆರೆ ನಿರ್ಮಾಣದಲ್ಲಿ ನಿಪುಣನಾಗಿರುವ ಶರಣ ರೇವಣಸಿದ್ಧನ ದೃಷ್ಟಿ ಇಲ್ಲಿ ಸ್ಪಷ್ಟವಾಗಿ ಕಾಣುತ್ತದೆ.

ಈ ಗ್ರಾಮದಲ್ಲಿ ಕನಿಷ್ಠ ೨೫ ಹಳೆಯ ಬಾವಿಗಳಿದ್ದವೆಂದು ತಿಳಿದುಬರುತ್ತದೆ. ಗ್ರಾಮದ ಬಾವಿಗಳ ನೀರಿನ ಪಾತಳಿಯನ್ನು ಕಾಪಾಡುವ ಕೆಲಸವೂ ಈ ಕೆರೆಯಿಂದಲೇ ಇವತ್ತಿಗೂ ಆಗುತ್ತಿದೆ. ಇಲ್ಲಿಯ ಆಡಳಿತಗಾರರು ಗಲ್ಲಿಗೊಂದು ಬಾವಿತೋಡಿ ಜನರಿಗೆ ಅನುಕೂಲ ಮಾಡಿಕೊಟ್ಟಿರಬಹುದಾಗಿದೆ. ನಂತರದಲ್ಲಿ ರೇವಣಸಿದ್ಧರಿಂದ ಈ ಕೆರೆ ನಿರ್ಮಾಣವಾಗಿರಬೇಕು.

ಸಹಕಾರ : ಇಂದ್ರಜೀತ ಘುಳೆ, ಮಂಗಳವೇಡೆ, ಮೊ. ೯೪೨೨೩೦೬೦೧೧೨.

ಗ್ರಂಥ ಋಣ :

೧. ೧೨ನೇ ಶತಮಾನದ ಶರಣ ಸ್ಮಾರಕಗಳು-೧, ಡಾ. ಜಯಶ್ರೀ ದಂಡೆ, ಡಾ. ವೀರಣ್ಣ ದಂಡೆ, -ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ, ೨೦೧೨.

೨. ಶಾಸನ ಸಾಹಿತ್ಯ ಸಂಚಯ, ಎ.ಎಂ. ಅಣ್ಣಿಗೇರಿ, ಮೇವುಂಡಿ ಮಲ್ಲಾರಿ, -ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, ೧೯೬೧.

೩. ಸೋಮನಾಥಚಾರಿತ್ರ ಸಂಗ್ರಹ, ಸಂ. ಡಾ. ಆರ್. ಸಿ. ಹಿರೇಮಠ, ಡಾ. ಎಂ. ಎಸ್. ಸುಂಕಾಪೂರ, -ಕರ್ನಾಟಕ ಸಂಘ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೨.

೪. ಹರಿಹರನ ರಗಳೆಗಳು, ಸಂ. ಡಾ. ಎಂ.ಎಂ.ಕಲಬುರ್ಗಿ, ಕನ್ನಡ

ವಿಶ್ವವಿದ್ಯಾಲಯ, ಹಂಪಿ, ೧೯೯೯.

೫. ಬೀದರ ಜಿಲ್ಲೆ (ಗ್ಯಾಸೆಟಿಯರ್. ಇಂಗ್ಲೀಷ), -ಕರ್ನಾಟಕ ಗ್ಯಾಸೆಟಿಯರ್, ಕಾವೇರಿಭವನ, ಬೆಂಗಳೂರು, ೧೯೯೭.

೬. ಧಾರವಾಡ ಜಿಲ್ಲೆಯ (ಗ್ಯಾಸೆಟಿಯರ್), -ಕರ್ನಾಟಕ ಗ್ಯಾಸೆಟಿಯರ್, ಕಾವೇರಿಭವನ, ಬೆಂಗಳೂರು, ೧೯೯೫.

೭. ಕೊಲ್ಲಿಪಾಕ-ರೇವಣಸಿದ್ಧ(ಲೇಖನ), ಕರ್ನಾಟಕ ಲೋಚನ,೩೨-೦೨, ೨೦೧೮

* * *







# ದಕ್ಷಿಣ ಬೆಂಗಳೂರಿನ ಕೆಲವು ನವಶೋಧಿತ ಪ್ರಾಚೀನ ಸ್ಮಾರಕಗಳು

**ಡಾ.ಮುತ್ತುರಾಜು**

ಬೆಂಗಳೂರು ಪ್ರಾಗೈತಿಹಾಸಿಕ ಕಾಲವಾದ ಆದಿಶಿಲಾಯುಗದಿಂದ (ಕ್ರಿ.ಪೂ.೪೦,೦೦೦ ದಿಂದ) ಇಂದಿನವರೆಗೂ ಅವಿರತವಾಗಿ ಜನ ಚಟುವಟಿಕೆಯುಳ್ಳ ಪ್ರದೇಶವಾಗಿ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯವಾಗಿ ಮುನ್ನಡೆಯಾಗುತ್ತಾ ಬಂದಿದೆ. ಇದರ ಆಧಾರಗಳಾಗಿ ಶಿಲಾಯುಧಗಳು ಶಿಲಾಗೋರಿಗಳು ಶಿಲಾಶಾಸನ, ತಾಮ್ರಶಾಸನಗಳು ಸ್ಮಾರಕ ಶಿಲೆಗಳಾದ ಮಾಸ್ತಿಕಲ್ಲು, ವೀರಗಲ್ಲುಗಳು ಹಸ್ತಪ್ರತಿಕಾಗದ, ಓಲೆಗರಿಗಳು, ಕೋಟೆ, ದೇವಾಲಯಗಳು, ಮೂರ್ತಿ, ನಾಣ್ಯಗಳು ಲಭಿಸಿವೆ. ಅಲ್ಲದೆ ಪ್ರಕಟವೂ ಆಗಿ ಇತಿಹಾಸ ರಚನೆಯಲ್ಲಿ ಮಹತ್ವದ ಪಾತ್ರ ವಹಿಸಿದೆ.

ಇತ್ತೀಚೆಗೆ ನಾನು ಕೈಗೊಂಡ ಕ್ಷೇತ್ರಕಾರ್ಯದಲ್ಲಿ ದೊರೆತ ಬೆಂಗಳೂರು ದಕ್ಶಿಣದ ಕೆಲವು ಪ್ರಾಚೀನ ಸ್ಮಾರಕಗಳನ್ನು ಸಂಶೋಧನಾಧ್ಯಯನಕ್ಕೆ ಒಳಪಡಿಸಿದ್ದೇನೆ.

ಕೊತ್ತನೂರು ಪ್ರಸ್ತುತದಲ್ಲಿ ಜೆ.ಪಿ.ನಗರಕ್ಕೆ ಸೇರಿದ್ದು ಇಲ್ಲಿನ ಆದಿತ್ಯ ಬಡಾವಣೆಯಲ್ಲಿ ಮನೆ ನಿರ್ಮಾಣ ಮಾಡಲು ಮಣ್ಣು ತೆಗೆಯುವಾಗ ಎರಡು ಪ್ರಾಚೀನ ಸ್ಮಾರಕಗಳು ಲಭ್ಯವಾಗಿದ್ದು.

ದಿನಾಂಕ ೨೬, ೨೭, ೨೮ ರ ಅಕ್ಟೋಬರ್ ೨೦೧೮ ರಂದು ಬಾದಾಮಿಯ ಶ್ರೀಮದ್ವೀರಶೈವ ಶಿವಯೋಗ ಮಂದಿರದಲ್ಲಿ ಕರ್ನಾಟಕ ಇತಿಹಾಸ ಅಕಾಡೆಮಿವತಿಯಿಂದ ನಡೆದ ೩೨ನೇ ವಾರ್ಷಿಕ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧ. ಅವುಗಳನ್ನು ಕೊತ್ತನೂರಿನ ಪರಮುಖ ಸ್ಥಳವಾದ ಮಕ್ಕಳಮಾರಮ್ಮ ಎಂಬ ದೇವಾಲಯದ ಮುಂದೆ ಇಟ್ಟು ರಕ್ಷಿಸಲಾಗಿದೆ. ಲಾಲ್ ಭಾಗ್ ಮಾವಳ್ಳಿಯ ಬಳಿ ಇರುವ ಮಾರಮ್ಮ ಪ್ರತಿಮೆಗಳ ಹಾಗೆಯೇ ಇಲ್ಲಿಯೂ ಸಹ ಒಂದು ಮಾರಮ್ಮನ ಪ್ರತಿಮೆಯು ಸಹ ಇಲ್ಲಿದ್ದು ಸ್ಥಳೀಯರು ಮಕ್ಕಳಿಗೆ ಅಮ್ಮಾ ಕಾಯಿಲೆ ಬಂದಾಗ ಈ ಪ್ರತಿಮೆಯನ್ನು ವಿಶೇಷವಾಗಿ ಪೂಜಿಸಿ ಒಲಿಸಿಕೊಳ್ಳುತ್ತಾರೆ. ಈ ಮಾರಮ್ಮ ಪ್ರತಿಮೆಗೆ ಯಾವುದೇ ಗುಡಿ ಕಟ್ಟಿಲ್ಲ. ಕ್ರಿ.ಶ. ಸುಮಾರು ೧೩ನೇ ಶತಮಾನದ ಪ್ರತಿಮೆ ಇದಾಗಿದೆ.

ಈ ಪ್ರಾಚೀನ ಮಾರಮ್ಮದೇವಿ ಪ್ರತಿಮೆಯು ಇರುವ ಆವರಣ ಗೋಡೆಗೆ ಹೊಂದಿಕೊಂಡಂತೆ ನಿಲ್ಲಿಸಿರುವ ಎರಡು ಪ್ರಾಚೀನ ವೀರಗಲ್ಲು ಸ್ಮಾರಕಗಳು ಕೊತ್ತನೂರಿನ

ವೀರ ಪರಂಪರೆಯನ್ನು ಹೇಳುತ್ತಿವೆ. ಬಳಿಯ ಆದಿತ್ಯ ಬಡಾವಣೆಯಲ್ಲಿ ಲಭ್ಯವಾದ ಇವುಗಳನ್ನು ತಂದು ಇಲ್ಲಿರಿಸಿ ರಕ್ಷಿಸಲಾಗಿದೆ.

ಎಡಭಾಗದಲ್ಲಿ ನಿಲ್ಲಿಸಿರುವ ವೀರಗಲ್ಲಿನಲ್ಲಿ ವೀರನ ಚಿತ್ರಣವೇ ಮಾತ್ರ ಇದ್ದು ಪ್ರಧಾನವಾಗಿದೆ. ಇದು ೧ ಅಡಿ ಅಗಲ ಮತ್ತು ೧ ೧/೨ ಅಡಿ ಎತ್ತರವಿದ್ದು ೩ ಇಂಚಿನ ದಪ್ಪ ಉಳ್ಳ ಸ್ಥಳೀಯ ಕಣಶಿಲೆಯ ಪ್ರಾಚೀನ ಸ್ಮಾರಕ ಇದಾಗಿದೆ. ಇದರಲ್ಲಿ ವೀರನು ವೀರತನದಿಂದ ನಿಂತಿದ್ದು ಎಡಮುಖವಾಗಿ ಪಾರ್ಶ್ವನೋಟ ಬೀರುತ್ತ ಯುಧ್ಧೋತ್ಸಾಹದಲ್ಲಿ ಇದ್ದಾನೆ. ಈತನ ಎತ್ತಿದ ಬಲದಕ್ಕೈನಲ್ಲಿ ಚಂದ್ರಾಯುಧವಿದ್ದು ಎಡದ ಕೈ ನಡುವಿನ ಮೇಲೆ ಮಡಚಿ ಹಿಡಿದುಕೊಂಡಿದ್ದಾನೆ. ಶಿರದಲ್ಲಿ ಎತ್ತಿ ಕಟ್ಟಿದ ತುರುಬಿನ ಗಂಟು ಅಲಂಕಾರಯುಕ್ತವಾಗಿದೆ. ಕಿವಿಯಲ್ಲಿ ಕುಂಡಲಗಳು ಕೊರಳಲ್ಲಿ ಹಾರ ತೋಳುಗಳಲ್ಲಿ ಬಂಧಿಗಳು ಅಲ್ಲದೇ ಕಾಲುಗಳಲ್ಲಿ ಕಡಗಗಳು ಇದ್ದು ವೀರಗಚ್ಚೆಯ ಅಲಂಕಾರಯುಕ್ತ ಉಡುಗೆ ಇವನಿಗೆ ಇವೆ. ಶರೀರದ ನಡುವಿನಲ್ಲಿ ಬಿಚ್ಚುಗತ್ತಿ ಇದೆ. ಈ ವೀರನ ವೇಷಭೂಷಣಗಳನ್ನು ಗಮನಿಸಿದರೆ ಎವನೊಬ್ಬ ಪ್ರಮುಖ ಪ್ರಬಲ ವೀರನಾಗಿದ್ದಂತೆ ಕಂಡುಬರುತ್ತದೆ. ಈ ಸ್ಮಾರಕದಲ್ಲಿ ಹೆಚ್ಚಿನ ವಿವರಣೆಯ ಚಿತ್ರಣಗಳು ಇಲ್ಲದೇ ಇರುವುದರಿಂದ ಹೋರಾಟದ ವಿವರಗಳು ಅಲಭ್ಯವಾಗಿವೆ. ಆದರೂ ಯಾವುದೋ ಕಾರಣಕ್ಕಾಗಿ ಶತ್ರುಗಳ ಜೊತೆ ಹತನಾಗಿದ್ದಾನೆ ಎಂದು ನಿರ್ಧರಿಸಬಹುದಾಗಿದೆ. ಪ್ರಾಚೀನತೆಯ ದೃಷ್ಟಿಯಿಂದ ಈ ವೀರಗಲ್ಲು ಕ್ರಿ.ಶ.ಸು. ೧೫ನೇ ಶತಮಾನಕ್ಕೆ ಸೇರಿದುದಾಗಿದೆ ಎಂದು ಪರಿಗಣಿಸಬಹುದು.

ಈ ವೀರಗಲ್ಲಿನ ಬಲಬದಿಗೆ ಇರುವ ಮತ್ತೊಂದು ವೀರಗಲ್ಲು ಅತ್ಯಂತ ಗಮನಾರ್ಹವಾಗಿದ್ದು ಕಣಶಿಲೆಯಲ್ಲಿ ಮೂಡಿಬಂದಿರುವ ಈ ಸ್ಮಾರಕವು ೧.೧/೨ ಅಡಿ ಎತ್ತರ ಮತ್ತು ಅಷ್ಟೇ ಅಗಲವನ್ನು ಉಳ್ಳದ್ದಾಗಿದ್ದು ೪ ಇಂಚು ದಪ್ಪವನ್ನು ಹೊಂದಿದೆ. ಈ ಪ್ರಾಚೀನ ಸ್ಮಾರಕದಲ್ಲಿ ಪುರುಷ ಮತ್ತು ಮಹಿಳೆಯೊಬ್ಬಳು ಮುಖಾಮುಖಿಯಾಗಿ ಕಾದಾಡುತ್ತಾ ಇರುವಂತೆ ಚಿತ್ರಣವನ್ನು ಮೂಡಿಸಲಾಗಿದೆ. ಪುರುಷನು ಮಹಿಳೆಯ ಕರದಲ್ಲಿರುವ ಆಯುಧ ಪ್ರಹಾರದಿಂದ ರಕ್ಷಿಸಿಕೊಳ್ಳುವ ಸಲುವಾಗಿ ತನ್ನ ಎಡದ ಕೈನಲ್ಲಿರುವ ಗುರಾಣಿಯನ್ನು ಎತ್ತಿ ಅಡ್ಡವಾಗಿ ಹಿಡಿದು ರಕ್ಷಿಸಿಕೋಳ್ಳುತ್ತಿದ್ದಾನೆ. ಈತ ತನ್ನ ಬಲದಕ್ಕೈನಲ್ಲಿ ಖಡ್ಗ ಹಿಡಿದಿದ್ದರೂ ಸಹ ಅದನ್ನು ಮಹಿಳೆಯ ಮೇಲೆ ಪ್ರಯೋಗಿಸದೆ ಭೂಮುಖವಾಗಿ ಹಿಡಿದಿದ್ದಾನೆ. ಕಾಲುಗಳು ಹಿಮ್ಮುಖವಾಗಿ ಓಡುತ್ತಿರುವಂತೆ ಚಿತ್ರಣದಲ್ಲಿ ಮೂಡಿಸಿರುವುದರಿಂದ ಈತ ಗಾಬರಿಯಿಂದ ಹಿಮ್ಮೆಟ್ಟುತ್ತಿದ್ದಾನೆ ಎಂದು ಹೇಳಬಹುದು ಇವನಿಗೆ ಕಚ್ಚೆಯ ಉಡುಗೆ ಇದ್ದು ಶಿರದಲ್ಲಿ ಅತಿ ಹೆಚ್ಚು ಕೇಶವಿದೆ.

ಈ ಪುರುಷನ ಎದುರಿಗೆ ನಿಂತು ಸೆಣೆಸುತ್ತಿರುವ ಮಹಿಳೆಯು ತನ್ನ ಬಲಗೈನಲ್ಲಿ ಆಯುಧವೊಂದನ್ನು ಹಿಡಿದಿದ್ದಾಳೆ ಅಲ್ಲದೇ, ಶಿರದಲ್ಲಿ ತುರುಬಿನ ಗಂಟು ಇದ್ದು ಕಿವಿಯ ಆಭರಣಗಳು ಈಕೆಗಿವೆ. ಇವಳುಧರಿಸಿರುವ ಉಡುಗೆಯು ಪಾದದವರೆಗೂ ವ್ಯಾಪಿಸಿದೆ ಅಲ್ಲದೇ ಕುಚಗಳ್ ಚಿತ್ರಣವನ್ನು ಸ್ಪಷ್ಟವಾಗಿ ಮೂಡಿಸಲಾಗಿದೆ. ಈಕೆ

ತನ್ನ ಎಡದ ಕೈಯನ್ನು ಶರೀರದ ನಡುವಿನ ಮೇಲೆ ಇರಿಸಿ ಕ್ರೋಧಯುಕ್ತ ವದನದಿಂದ ನೋಡುತ್ತಿದ್ದಾಳೆ. ಅಂದರೇ ಇಲ್ಲಿನ ಪುರುಷ ಮತ್ತು ಮಹಿಳೆಯ ನಡುವೆ ಯಾವುದೋ ಕಾರಣಕ್ಕಾಗಿ ಕಾದಾಟವಾಗಿದೆ ಪ್ರಾಯಶಃ ಮಹಿಳೆಯ ಮೇಲೆ ಆಕ್ರಮಣಮಾಡಿದ ಪುರುಷನೊಡನೆ ಕಾದಾಡಿ ಈ ಮಹಿಳೆ ಕೊನೆಗೆ ಹತಳಾಗಿದ್ದಾಳೆ. ಈ ಕಾರಣದಿಂದಾಗಿ ಈ ಮಹಿಳೆಯ ಸ್ಮರಣೆಗಾಗಿ ಈ ಪ್ರಾಚೀನ ವೀರಗಲ್ಲು ನಿರ್ಮಾಣವಾಗಿದೆ. ಕಾಲಮಾನದ ದೃಷ್ಟಿಯಿಂದ ಕ್ರಿ.ಶ.ಸು. ೧೪ ನೇ ಶತಮಾನಕ್ಕೆ ಈ ವೀರ ಮಹಿಳೆಯ ಸ್ಮಾರಕವು ಸೇರಿದುದಾಗಿದೆ ಎಂದು ನಿರ್ಧರಿಸಬಹುದಾಗಿದೆ.

ಬನ್ನೇರುಘಟ್ಟ ಬೆಂಗಳೂರು ಸಿಟಿ ರಸ್ತೆಯಲ್ಲಿ ಬರುವ ಜಲ್ಲಿಕಲ್ಲು ಮಿಷಿನ್ ಸರ್ಕಲ್ ನ ಬಸ್ ಸ್ಟಾಪ್ ಬಳಿ ವೀರ-ಮಾಸ್ತಿಕಲ್ಲು ಒಂದು ದೊರೆತಿದೆ. ಇದು ೪&೧/೨ ಅಡಿ ಅಗಲ ಮತ್ತು ೩&೧/೨ ಅಡಿ ಅಗಲವಾಗಿದ್ದು ೧/೨ ಅಡಿ ದಪ್ಪವನ್ನುಳ್ಳ ಕಣಶಿಲೆಯ ಸ್ಮಾರಕವಾಗಿದೆ.

ವೀರನೊಬ್ಬನು ತನ್ನ ಬಲದ ಕೈನಲ್ಲಿ ದೊಡ್ಡದಾದ ಕಠಾರಿ ಆಯುಧವನ್ನು ಎತ್ತಿ ಮೇಲ್ಮುಖವಾಗಿ ಹಿಡಿದಿದ್ದಾನೆ. ಎಡದ ಕೈಯನ್ನು ಇಳಿಬಿಟ್ಟಿದ್ದಾನೆ. ಇವನ ಶಿರದಲ್ಲಿ ದೊಡ್ಡದಾದ ಶಿರೋಮುಡಿ ಇದೆ. ಹಿರಿದಾದ ನಯನ ಮತ್ತು ಇವನಿಗೆ ಸರಳ ಉಡುಗೆ ಮತ್ತು ಕೊರಳಲ್ಲಿ ಹಾರವಿದೆ.

ಬಳಿಯಲ್ಲಿ ನಿಂತಿರುವ ಈತನ ಸತಿಯ ಶಿರದಲ್ಲಿಯೂ ಸಹ ಹಿರಿದಾದ ತುರುಬಿನ ಗಂಟು ಇದೆ. ಸರಳ ಉಡುಗೆ ಇವಳಿಗಿದ್ದು ಮುಖ ಲಕ್ಷಣವೆಲ್ಲಾ ಸವೆದು ಹೋಗಿದೆ. ಈಕೆಯ ತನ್ನೆರಡು ಕೈಗಳಲ್ಲಿ ಯಾವುದೋ ವಸ್ತುಗಳನ್ನು ಹಿಡಿದುಕೊಂಡಿದ್ದಾಳೆ. ಯಾವುದೋ ಕಾರಣಕ್ಕೆ ವೀರನು ಶತೃಗಳೊಡನೆ ಹೋರಾಡಿ ಮಡಿದಿದ್ದಾನೆ. ಸಾವಿನಲ್ಲೂ ಹಿಂಬಾಲಿಸುವ ಸಲುವಾಗಿ ಈ ವೀರನ ಪತ್ನಿ ಅಂದಿನ ನಂಬಿಕೆ ಮತ್ತು ಪದ್ಧತಿಯಂತೆ ಚಿತೆ ಏರಿ ಮಡಿದು ಪತಿಯನ್ನು ಸಾವಿನಲ್ಲೂ ಹಿಂಬಾಲಿಸಿದ್ದಾಳೆ. ಮಣ್ಣಿನಲ್ಲಿ ಬಹುತೇಕ ಈ ಸ್ಮಾರಕ ಹುದುಗಿ ಹೋಗಿರುವುದರಿಂದ ಹೆಚ್ಚಿನ ಮಾಹಿತಿ ಪಡೆಯಲು ಅಡಚಣೆಯಾಗಿದೆ. ಕ್ರಿ.ಶ.ಸು.೧೩ನೇ ಶತಮಾನಕ್ಕೆ ಈ ವೀರ ಮಾಸ್ತಿಕಲ್ಲು ಸ್ಮಾರಕವು ಸೇರುತ್ತದೆ.

ಬನ್ನೇರುಘಟ್ಟದಲ್ಲಿ ಹಲವಾರು ಬೃಹತ್ ಶಿಲಾಯುಗದ ಪ್ರಾಚ್ಯಾವಶೇಷಗಳಾದ ಶಿಲಾಗೋರಿಗಳು ಮತ್ತು ಐತಿಹಾಸಿಕ ಕಾಲದ ದೇವಾಲಯಗಳು, ವೀರಗಲ್ಲು ಮತ್ತು ಆತ್ಮಾಹುತಿ ಸ್ಮಾರಕ ಶಿಲೆಗಳು ಕಂಡು ಬಂದಿದ್ದು ಅವುಗಳನ್ನೆಲ್ಲಾ ನನ್ನ ಗುರುಗಳಾದ ಡಾ.ದೇವರಕೊಂಡಾರೆಡ್ಡಿ ಮತ್ತು ಶ್ರೀಮತಿ ಸ್ಮಿತಾರೆಡ್ಡಿಯವರು ಈಗಾಗಲೇ ತಮ್ಮ ಲೇಖನಗಳಲ್ಲಿ ಪ್ರಕಟಿಸಿದ್ದಾರೆ.

ಇತ್ತಿಚೆಗೆ ನನ್ನ ಕ್ಷೇತ್ರಕಾರ್ಯದ ವೇಳೆಯಲ್ಲಿ ಇಲ್ಲಿನ ಚಂಪಕದಾಮ ಬಡಾವಣೆ ಎಂಬುವ ಸ್ಥಳದಲ್ಲಿ ಕಂಡು ಬಂದ ಪಾಚೀನ ವೀರಗಲ್ಲು ಪೂರಕ ಮಾಹಿತಿಯನ್ನು ಒದಗಿಸುತ್ತದೆ. ಬನೇರುಘಟ್ಟದಿಂದ ಕಗ್ಗಲಿಪುರದ ಮಾರ್ಗದಲ್ಲಿ ಈ ವೀರಗಲ್ಲು ಇದೆ. ೪&೧/೨ಅಡಿ ಎತ್ತರ ಮತ್ತು ೩&೧/೨ ಅಡಿ ಅಗಲವನ್ನುಳ್ಳದಾಗಿದ್ದು ೧/೨ಅಡಿ

ದಪ್ಪವನ್ನು ಹೊಂದಿದ ಸ್ಥಳೀಯ ಕಣಶಿಲೆ ಇದಾಗಿದೆ. ಈ ಸ್ಮಾರಕದಲ್ಲಿ ವೀರನೊಬ್ಬನು ವೀರತನದಿಂದ ನಿಂತಿದ್ದು ತನ್ನೆರಡು ಎತ್ತಿದ ಕೈಗಳಲ್ಲಿಯೂ ಖಡ್ಗಗಳನ್ನು ಹಿಡಿದು ನಿಂತಿದ್ದಾನೆ. ಶರೀರದ ನಡುವಿನಲ್ಲಿಬಿಚ್ಚುಗತ್ತಿ ಇದೆ. ಸರಳವಾದ ಕಚ್ಚೆಯ ಉಡುಗೆ ಇದ್ದು ತೋಳು ಬಂದಿ ಮುಂಗೈ ಖಡಗಗಳು ಕೊರಳ್ ಹಾರ ಇವನಿಗಿವೆ. ಶಿರದಲ್ಲಿ ಶಿರೋಮುಡಿಯು ಇದೆ. ಈ ವೀರನು ತನ್ನೆರಡು ಕೈಗಳಲ್ಲೂ ಖಡ್ಗ ಪ್ರಯೋಗಿಸುವಲ್ಲಿ ನೈಪುಣ್ಯತೆ ಪಡೆದಿದ್ದನೆಂದು ತಿಳಿಯಬಹುದಾಗಿದೆ. ಯಾವುದೋ ರಾಜಕೀಯ ಕಾರಣದಿಂದಾಗಿ ಈತನು ತನ್ನ ಶತೃಗಳೊಡನೆ ಹೋರಾಡಿ ಹತನಾಗಿದ್ದಾನೆ. ಆದುದರಿಂದ ಈ ವೀರನ ಸ್ಮಾರಕ ನಿರ್ಮಾಣವಾಗಿದೆ. ಹೇಚ್ಚಿನ ವಿವರಣೆ ಇಲ್ಲದ ಒಂದೇ ಹಂತದ ಚಿತ್ರಣದ ಈ ವೀರಗಲ್ಲಿನ ಮೇಲ್ಭಾಗದಲ್ಲಿ ಅಲಂಕಾರಯುಕ್ತವಾದ ಕೀರ್ತಿಮುಖದ ಚಿತ್ರಣವಿದೆ. ಈ ಚಿತ್ರಣ ಇಲ್ಲಿನ ಯಾವುದೇ ಸ್ಮಾರಕದಲ್ಲಿ ಇಲ್ಲದೆ, ಇಲ್ಲಿರುವುದು ವಿಶೇಷವಾಗಿದೆ. ಕಾಲಮಾನದ ದೃಷ್ಟಿಯಿಂದ ಈ ಪ್ರಾಚೀನ ಸ್ಮಾರಕದ ಕಾಲವು ಕ್ರಿ.ಶ.ಸು. ೧೩ನೇ ಶತಮಾನದ ಅಂತ್ಯವೆಂದು ನಿರ್ಧರಿಸಬಹುದಾಗಿದೆ.

ಇದೇ ಬನ್ನೇಲ್ರುಘಟ್ಟದಿಂದ ರಾಷ್ಟ್ರೀಯ ಜೈವಿಕ ಉದ್ಯಾನವನಕ್ಕೆ ಹೋಗುವ ಮಾರ್ಗದಲ್ಲಿ ಬರುವ ಸಂಪಿಗೆ ಹಳ್ಳಿಯಲ್ಲಿ ಇದ್ದಂತಹ ಬೃಹತ್ ಶಿಲಾಯುಗದ ಶಿಲಾಗೋರಿ ಕುರಿತು ನನ್ನ ಪೂಜ್ಯಗುರುಗಳಾದ ಡಾ.ದೇವರಕೊಂಡಾರೆಡ್ಡಿಯವರು ತಮ್ಮ ಲೇಖನವಾದ "ಬನ್ನೇರುಘಟ್ಟ ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ" ಲೇಖನದ ಪುಟ ೧ರಲ್ಲಿ ಉಲ್ಲೇಖಿಸಿದ್ದಾರೆ. ಇಲ್ಲಿನ ಶಿಲಾಗೋರಿಯನ್ನು ನಾನೂ ಸಹ ಗಮನಿಸಿದ್ದೆ ಆದರೆ ಈಗ ಅದು ಉಳಿದು ಬಂದಿಲ್ಲ. ಆದರೆ, ಅವರು ದಾಖಲಿಸದೆ ಬಿಟ್ಟಿರುವ ತೀರ ಸರಳವಾದ ವೀರಗಲ್ಲುವೊಂದನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸುತ್ತಿದ್ದೇನೆ. ಈ ವೀರಗಲ್ಲು ಕಳೆದ ವರ್ಷಗಳವರೆಗೂ ಬಯಲಿನಲ್ಲಿ ಇತ್ತಾದರು ಇತ್ತೀಚೆಗೆ ಗುಡಿಯೊಂದನ್ನು ಕಟ್ಟಿ ಗುಡಿಯ ಒಳಗೆ ಸೇರಿಸಲಾಗಿದೆ. ಒಂದು ಅಡಿ ದಪ್ಪವಿರುವ ಈ ಕಣಶಿಲೆಯ ಪ್ರಾಚೀನ ಸ್ಮಾರಕವು ೩ ಅಡಿ ಎತ್ತರ ೨ ೧/೨ಅಡಿ ಅಗಲವನ್ನು ಹೊಂದಿದೆ.

ಈ ಪ್ರಾಚೀನ ವೀರಗಲ್ಲು ಸ್ಮಾರಕದ ಮೇಲಿನ ಭಾಗ ಸೀಳಿತುಂಡಾಗಿದ್ದು ವೀರನು ಒಬ್ಬನೇ ಇರುವ ಚಿತ್ರಣ ಮಾತ್ರವೇ ಇದೆ. ವೀರನು ವೀರತನದಿಂದ ನಿಂತಿದ್ದು ಎತ್ತಿದ ಬಲದಕೈನಿಂದ ಖಡ್ಗವನ್ನು ಪ್ರಹರಿಸುತ್ತಿದ್ದಾನೆ. ಎಡದ ಕೈನಲ್ಲಿ ಪ್ರಾಯಶಃ ಗುರಾಣಿಯನ್ನು ಹಿಡಿದುಕೊಂಡಿದ್ದಾನೆ ಅದು ಹೊಡೆದು ಹೋಗಿದೆ. ನಡುವಿನಲ್ಲಿ ಬಿಚ್ಚುಗತ್ತಿ ಇದೆ. ಶಿರದಲ್ಲಿ ಶಿರೋಮುಡಿ ಇದ್ದು ವೀರಗಚ್ಚೆಯ ಉಡುಗೆ ಇವನಿಗೆ ಇದೆ.

ಯಾವುದೋ ಕಾರಣಕ್ಕೆ ಶತೃವಿನ ಜೊತೆ ಇವನು ಹೋರಾಡಿ ಮಡಿದಿದ್ದಾನೆ. ಆ ಕಾರಣಕ್ಕಾಗಿ ಈ ಸ್ಮಾರಕ ನಿರ್ಮಾಣವಾಗಿದೆ ಕಾಲಮಾನದ ದೃಷ್ಟಿಯಿಂದ ಈ ಸ್ಮಾರಕದ ಕಾಲಮಾನವು ಕ್ರಿ.ಶ.ಸು ೧೪ ನೇ ಶತಮಾನಕ್ಕೆ ಸೇರಿರುದಾಗಿದೆ ಎಂದು ನಿರ್ಧರಿಸಬಹುದಾಗಿದೆ.

ಬನ್ನೇರುಘಟ್ಟದಿಂದ ಆನೇಕಲ್ಲುವಿಗೆ ಸಾಗುವ ಮಾರ್ಗದಲ್ಲಿ ಬರುವ ಹಾರಗದ್ದೆ ಅಥವಾ ನಾಗೇಗದ್ದೆ ಊರಿನ ಮುಖ್ಯರಸ್ತೆಯಲ್ಲಿ ಎರಡು ಪ್ರಾಚೀನ ಸ್ಮಾರಕಗಳು

ಕಂಡು ಬಂದಿದ್ದು ಒಂದು ವೀರಗಲ್ಲು ಪೆಣ್ಬುಯಲ್ ವರ್ಗಕ್ಕೆ ಸೇರಿದರೆ ಮತ್ತೊಂದು ವೀರಗಲ್ಲು ಮಾತ್ರವೇ ಆಗಿದೆ.

೪&೧/೨ ಅಡಿ ಅಗಲ ಮತ್ತು ೩&೧/೨ ಅಡಿ ಎತ್ತರವಿರುವ ಪೆಣ್ಬಯಲ್ ಸ್ಮಾರಕಕ್ಕೆ ಅಲಂಕಾರಯುಕ್ತ ಬಣ್ಣಗಳನ್ನು ಇತ್ತಿಚೆಗೆ ಹಚ್ಚಲಾಗಿದೆ ಇದರಲ್ಲಿ ವೀರನೊಬ್ಬನು ತನ್ನ ಬಲದ ಎತ್ತಿದ ಕೈನಲ್ಲಿ ಖಡ್ಗ ಹಿಡಿದಿದ್ದು ಎಡದಕೈಯಲ್ಲಿ ಕಠಾರಿಯೊಂದನ್ನು ಹಿಡಿದಿದ್ದಾನೆ. ಇವನ ಉಡುಗೆ ವಿಶಿಷ್ಟವಾಗಿದ್ದು ವೀರಗಚ್ಚೆ ಶರೀರದ ಇಕ್ಕೆಲಗಳಲ್ಲಿಯೂ ಹರಡಿಕೊಂಡಿದೆ. ಆಕರ್ಷಕ ಕೇಶರಾಶಿ ಇವನಿಗಿದೆ. ಕರ್ಣಗಳಲ್ಲಿ ಕುಂಡಲಗಳು ಮುಂಗೈ ಮತ್ತು ಕಾಲುಗಳಲ್ಲಿ ಖಡಗಗಳು ತೋಳುಗಳಲ್ಲಿ ಬಂದಿಗಳು ಮತ್ತು ಕೊರಳಿನಲ್ಲಿ ಹಾರವಿದೆ. ಶತೃವಿನೆಡೆಗೆ ಯುಧ್ಧೋತ್ಸಾಹ ನೋಟ ಬೀರುತ್ತಿರುವ ಈತನನ್ನು ಅನುಸರಿಸಿ ಮಹಿಳೆಯೊಬ್ಬಳು ನಿಂತಿದ್ದು ಈಕೆಯೂ ಸಹ ಶತೃವಿನ ಕಡೆಗೆ ನೋಡುತ್ತಿದ್ದಾಳೆ. ಅಂದರೆ ವೀರನು ಈ ಸ್ತ್ರೀಯನ್ನು ರಕ್ಷಿಸುತ್ತಿರುವ ಚಿತ್ರ ಲಕ್ಷಣಗಳು ಗೋಚರಿಸುತ್ತಿವೆ. ಮಹಿಳೆಯು ಎತ್ತರದ ಪುಟ್ಟ ಕಟ್ಟೆಯ ಮೇಲೆ ನಿಂತಿದ್ದು ತನ್ನ ಕೈಗಳಲ್ಲಿ ವಸ್ತುವೊಂದನ್ನು ಹಿಡಿದುಕೊಂಡಿದ್ದಾಳೆ. ಈಕೆಯ ಉಡುಗೆಯೂ ಸಹ ಆಕರ್ಷಕವಾಗಿದೆ. ಶಿರದಲ್ಲಿ ಅಲಂಕಾರಯುಕ್ತ ಕೇಶದ ತುರುಬು ಇದೆ.

ಪ್ರಾಯಶಃ ಕೆಣಕಿದ ಶತೃಗಳಿಂದ ಈ ಮಹಿಳೆಯನ್ನು ರಕ್ಷಿಸಿ ಕೊನೆಗೆ ತಾನೂ ಸಹ ಮಡಿದ ವೀರನ ಸ್ಮಾರಕವಾಗಿ ಈ ಪ್ರಾಚೀನ ಪೆಣ್ಬುಯಲ್ ಸ್ಮಾರಕ ನಿರ್ಮಾಣವಾಗಿದೆ. ಪ್ರಾಚೀನತೆಯ ದೃಷ್ಟಿಯಿಂದ ಇದರ ಕಾಲಮಾನವನ್ನು ಕ್ರಿ.ಶ.ಸು. ೧೫ನೇ ಶತಮಾನವೆಂದು ನಿರ್ಧರಿಸಬಹುದಾಗಿದೆ.

ಈ ಪ್ರಾಚೀನ ಸ್ಮಾರಕದ ಬಳಿಯಲ್ಲಿಯೇ ಇರುವ ಮತ್ತೊಂದು ವೀರಗಲ್ಲು ಸ್ಮಾರಕಕ್ಕು ಸಹ ಆಕರ್ಷಕ ಬಣ್ಣಗಳನ್ನು ಹಚ್ಚಲಾಗಿದ್ದು ಇದು ೪ಅಡಿ ಎತ್ತರ ಮತ್ತು ೨&೧/೨ಅಡಿ ಅಗಲವನ್ನು ಹೊಂದಿದೆ. ವೀರನು ವೀರತನದಿಂದ ಯುದ್ಧೋನ್ಮಾದ ಭಂಗಿಯಲ್ಲಿ ನಿಂತಿದ್ದು ತನ್ನ ಎತ್ತಿದ ಬಲದಕೈನಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ಎಡದ ಕೈನಲ್ಲಿ ಗುರಾಣಿಯೋ ಅಥವಾ ಕಠಾರಿಯೋ ಇದ್ದಿರಬೇಕು ಬಣ್ಣ ಬಳಿದಿರುವುದರಿಂದ ಅಸ್ಪಷ್ಟವಾಗಿದೆ. ಈತನ ಉಡುಗೆಯಾಗಿ ವೀರಗಚ್ಚೆ ಇದೆ. ಶಿರದಲ್ಲಿ ಕೇಶರಾಶಿ ಇದ್ದು ಮುಂಗೈ ಮತ್ತು ಕಾಲುಗಳಲ್ಲಿ ಖಡಗಗಳು ಇವೆ. ಕೊರಳಲ್ಲಿ ಹಾರವೂ ಸಹ ಇದೆ. ಯಾವುದೋ ಕಾರಣಕ್ಕೆ ಶತೃವಿನೊಡನೆ ಹೋರಾಡಿ ಈ ವೀರ ಮಡದಿರುವುದರಿಂದ ಈ ಪ್ರಾಚೀನ ಸ್ಮಾರಕ ನಿರ್ಮಾಣವಾಗಿದೆ. ಇದು ಕಾಲಮಾನದ ದೃಷ್ಟಿಯಿಂದ ಕ್ರಿ.ಶ.ಸು.೧೫ನೇ ಶರಮಾನಕ್ಕೆ ಸೇರಿದ ವೀರಗಲ್ಲು ಸ್ಮಾರಕ್ವಾಗಿದೆ. ಈ ಎರಡೂ ಪ್ರಾಚೀನ ಹಾರೋಗದ್ದೆಯ ವೀರಪರಂಪರೆಯೆ ಕುರುಹುಗಳಾಗಿವೆ.

ಈ ಮೇಲಿನ ಎಲ್ಲಾ ದಕ್ಷಿಣ ಬೆಂಗಳೂರಿನ ಪ್ರಾಚೀನ ಸ್ಮಾರಕಗಳ ಸಂಶೋಧನೆಯ ಅಧ್ಯಯನದಿಂದಾಗಿ ಬೆಂಗಳೂರಿನ ಅಂತೆಯೇ ಕರ್ನಾಟಕದ ಇತಿಹಾಸ ರಚನೆಗೆ ಹೊಸ ಆಕರಗಳ ಸೇರ್ಪಡೆ ಆದಂತೆ ಆಗಿವೆ.



ಪ್ರಾಚೀನ ವೀರಮಾಸ್ತಿಕಲ್ಲು ಕಾಲ ಕ್ರಿ.ಶ. ಸು.13ನೇ ಶತಮಾನ



ಕೊತ್ತನೂರು. ಬೆಂಗಳೂರು. ಪ್ರಾಚೀನ ವೀರಗಲ್ಲು



ಮಾರಮ್ಮನ ಪ್ರತಿಮೆ
ಕೊತ್ತನೂರು ಗ್ರಾಮ
ಬೆಂಗಳೂರು



# ಅಹಿಚ್ಛತ್ರ ? ಒಂದು ವಿವೇಚನೆ

ಡಾ. ಕೆಳದಿ ಗುಂಡಾಜೋಯಿಸ್

ಉತ್ತರ ಸಹ್ಯಾದ್ರಿಖಂಡ ಪುಟ 15(ಹಿಂ)
ಕಾಶ್ಯಪಃ
ಗಛ್ಛಾತಾತ ಮಹಾಪ್ರಾಜ್ಞ ಮೇರೋರ್ದಕ್ಷಿಣತಃ ಶುಭಂ ।
ಅಹಿಚ್ಛತ್ರ ಇತಿಖ್ಯಾತೋ ವಿಪ್ರಾಣಾಮಾದಿಮಂಡಲಂ ॥19॥
ಸತ್ವರಂ ಗಚ್ಛ ಭೂಪಾಲ ಜಾಡ್ಯಂ ಮಾಕುರು ಮಾಕುರು ।
ತತ್ರ ಷಟ್ಕರ್ಮನಿರತಾಃ ಸರ್ವಶಾಸ್ತ್ರವಿಶಾರದಾಃ ॥20॥
ಬ್ರಾಹ್ಮಣಾ ಬಹವಸತಿ ತಾನಾನಯ ಮಹೀಪತೇ ।
ಇತ್ಯುಕ್ತ್ವಾ ಕಾಶ್ಯಪ ಶ್ರೀಮಾನ್ ಯಯೌ ಗೋದಾವರೀಂ ಪ್ರತಿ ॥21॥

ಅದೇ ಪುಟ 17 (ಮುಂ)
ಮಯೂರವರ್ಮಾನೃಪತಿ ಹೇಮಾಂಗದ ಕುಮಾರಕಃ ।
ಅಹಿಚ್ಛತ್ರಸ್ಥಿತಾ ವಿಪ್ರಾನ್ ಆಗತಾನ್ ದ್ವಿಜಪುಂಗವಾನ್ ॥11॥
ಸಪುತ್ರ ಪೌತ್ರ ಸಹಿತಾನ್ ಸಂಪೂಜ್ಯ ವಿಧಿವನ್ನೃಪ ।
ಪ್ರಾಸಾದಯಿತ್ವಾತಾನ್ ಸರ್ವಾನ್ ವಸ್ತ್ರಾಲಂಕಾರ ಭೋಜನೈಃ ॥12॥
ಅಗ್ರಹಾರಾಂಶ್ಚ ಕಾರಾಸೌ ದ್ವಾತ್ರಿಂಶದ್ಗ್ರಾಮ ಭೇದತಃ ।
ತತ್ರ ತತ್ರ ದ್ವಿಜವರಾನ್ ಸ್ಥಾಪಯಾಮಾಸ ಭೂದತಿಃ ॥13॥
ಅದೇ ಪುಟ 19 (ಹಿಂ)
ವಯಮಾದ್ಯೈವ ಗಚ್ಛಾಮಃ ರಾಷ್ಟ್ರಂ ತ್ಯಕ್ತ್ವಾಮಿಮಃ ಪುನಃ ।
ಚಿರೋಷಿತಮಹಿಚ್ಛತ್ರಮ ಭೂತ್ಕಾಲ ವಿಪರ್ಯಾಯಃ ॥
ಅದೇ ಪುಟ 94 (ಹಿಂ)
ನಾನೋಪಾಯೇನ ಸಂಪನ್ನೋ ನಾನಾ ಭೂಪಾಲ ಮಂಡಲಾನ್ ।
ಉಲ್ಲಂಘ್ಯ ಸಾಂತ್ವಯನ್ ಭೂಪಾನಹಿಚ್ಛತ್ರಮವಾಪಸಃ ॥

ಕದಂಬ ಕುಲಗ್ರಂಥ 15ನೆಯ ಪುಟದಲ್ಲಿ ಪ್ರಾಚೀನ ಬನವಾಸಿ ಹವ್ಯಕವ್ಯಯಜ್ಞಯಾಗಾದಿ

ಕರ್ಮಬ್ರಾಹ್ಮಣರ "ಜ್ಞಾನದೀಪಿಕಾ"ದಲ್ಲಿ ಕಂಡುಬಂದಂತೆ ಕ್ರಿ.ಶ.350 ರಲ್ಲಿ ಅಹಿಚ್ಛತ್ರ ಅಗ್ರಹಾರದಿಂದ ಸ್ಮಾರ್ತ ಮಹಾ ಬ್ರಾಹ್ಮಣರನ್ನು ಮಯೂರಶರ್ಮನು ಕರೆದುಕೊಂಡು ಬಂದು ತಾಳಗುಂದ ಮತ್ತು ಕುಪಟೂರು ಅಗ್ರಹಾರದಲ್ಲಿ ನೆಲೆಗೊಳಿಸುತ್ತಾ ಗೋವೆಯನ್ನು ರಾಜಧಾನಿಯನ್ನಾಗಿಸಿಕೋಂಡು ಮಧ್ಯಕೊಂಕಣ ಮತ್ತು ಬನವಾಸಿ ನಾಡನ್ನು ಆಳುತ್ತಿದ್ದ ಮುಕ್ಕಣ ಕದಂಬನು ಕ್ರಿ.ಶ.1174ರಲ್ಲಿ ಅಹಿಚ್ಛತ್ರ ಅಗ್ರಹಾರದಿಂದ ಅರವತ್ತುನಾಲ್ಕು ಬ್ರಾಹ್ಮಣ ಕುಟುಂಬ ಹಾಗೂ ಚಿಪಳೂನ ಅಗ್ರಹಾರಗಳಲ್ಲಿ ಅರವತ್ತನಾಲ್ಕು ಕುಟುಂಬಗಳನ್ನೂಸ್ಥಾಪಿಸಿದ ಕುರಿತು ಸುಪ್ರಸಿದ್ಧ ಸಂಶೋಧಕರಾಗಿದ್ದ ನಾ.ಶ್ರೀ.ರಾಜಪುರೋಹಿತರು ಸುದೀರ್ಘ ವಿವೇಚನೆಯೊಂದಿಗೆ ನಿರೂಪಿಸಿದ್ದಾರೆ. ತಾಳಗುಂದ ಮತ್ತು ಚಿಪಳೂನ್ ಅಗ್ರಹಾರಗಳು, ಮಧ್ಯಕೊಂಕಣ, ರತ್ನಗಿರಿ ಜಿಲ್ಲೆ ಹಾಗೂ 64 ಒಕ್ಕಲು ಬ್ರಾಹ್ಮಣರ ಬಗ್ಗೆ ಮೈಸೂರು ಸಂಸ್ಥಾನದ ಸರ್ವೆ ಇಲಾಖೆ ಅಸಿಸ್ಟೆಂಟ್ ಸೂಪರಿಂಟೆಂದೆಂಟ್ ಶ್ರೀವ್ಯಾಸರಾವ್.ಜಿ.ಎ. ಇವರಲ್ಲಿರುವ ಪ್ರಾಚೀನ ಹಸ್ತಪ್ರತಿ.

ಯಜ್ಞಯಾಗಾದಿಗಳು (ಹವ್ಯಕವ್ಯಕರ್ಮಭೂಸುರಸ್ಮಾರ್ತರು)
ಸರ್ವತೋ ಮುಖಾದೌ ಪೂರ್ವಾದಿ ದಿಕ್ಷು ।
ಅಗ್ನಿಷ್ಟೋಮಾದಿ ನಾನಾ ಸಂಸ್ಥಾಕೇ ದಿಗಂತರೇ ॥
[ಭಟ್ಟದೀಪಿಕಾ ಪ್ರಭಾವಲೀ ವ್ಯಾಖ್ಯಾಸಂವಲಿತಾ ಅ.3:ಪಾ.3;ಆದಿ11]

ಸರ್ವತೋಮುಖಯಜ್ಞಕ್ಕೆ ಅರವತ್ತನಾಲ್ಕುಜನ ಋತ್ವಿಜರು ಅಗತ್ಯ. ಪೂರ್ವವಿಹಾರದಲ್ಲಿ 16 ಜನ ಋತ್ವಿಜರು; ಪಶ್ಚಿಮ ವಿಹಾರದಲ್ಲಿ16 ಜನ ಋತ್ವಿಜರು; ಉತ್ತರ ವಿಹಾರದಲ್ಲಿ 16 ಜನ ಋತ್ವಿಜರು; ದಕ್ಷಿಣ ವಿಹಾರದಲ್ಲಿ16 ಜನ ಋತ್ವಿಜರು; ಈ ರೀತಿಯಲ್ಲಿ ಯಜ್ಞಕತ್ರೃವಾದ ಯಜಮಾನರು ಇರುತ್ತಾರೆ.

16 ಜನ ಋತ್ವಿಜರು

ಯಜ್ಞಕತ್ರೃಯಜಮಾನ

ಯಜ್ಞಕುಂಡ

16ಜನ ಋತ್ವಿಜರು

ಸರ್ವತೋಮುಖ ಯಜ್ಞಕ್ಕಿಂತ ರಾಜಸೂಯ, ಅಶ್ವಮೇಧ ಯಜ್ಞಗಳು ಬೃಹತ್ ಯಜ್ಞಗಳಾಗಿದ್ದರೂ ಪ್ರತಿಯೊಂದರಲ್ಲಿಯೂ 16 ಜನರೇ ಋತ್ವಿಜರಿರುತ್ತಾರೆ. ಯಜ್ಞಯಾಗಾದಿಗಳಲ್ಲಿ ಋತ್ವಿಜರ ಸಂಖ್ಯೆ ಪರಮಾವಧಿಯೆಂದರೆ ಅರವತ್ತನಾಲ್ಕೆ ಆಗಿರುತ್ತದೆ. ಮಧ್ಯ ಕೊಂಕಣದಲ್ಲಿರುವ ಚಿಪಳೂಣ ಅಗ್ರಹಾರಕ್ಕೂ ನಿತಾಂತ ಸಾಮ್ಯವಿರುವುದರಿಂದ ಅಹಿಚ್ಛತ್ರದಿಂದ 64/64 ಬ್ರಾಹ್ಮಣ ಕುಟುಂಬಗಳನ್ನು ಕರೆದುಕೊಂಡು ಬಂದು ನೆಲೆಗೊಳಿಸಿ ಅವರ ಯೋಗಕ್ಷೇಮಾದಿಗಳನ್ನು ಕೈಗೊಂಡವನು. ಶಿವಚಿತ್ತವೀರ ಪೆರ್ಮಾಡಿ ದೇವನಾದ ಗೋವೆಯ ಕದಂಬ ರಾಜ ಮುಕ್ಕಣ್ಣ ಕದಂಬನು ಬನವಸೆ ಮಂಡಳ, ಗೋವ ಮಂಡಳ, ಹೈಗ ಮಂಡಳ, ತುಳು ಮಂಡಳಗಳಿಗೆ ಅಧಿಪತಿಯಾಗಿದ್ದನು. ಕದಂಬರಾಜ ಮಯೂರಶರ್ಮನು ಯಜ್ಞಯಾಗಾದಿ ಹವ್ಯಕವ್ಯ ಕರ್ಮಗಳಲ್ಲಿ ಮಗ್ನರಾಗಿದ್ದ ಶ್ರೇಷ್ಠ ಸ್ಮಾರ್ತಮಹಾ ದ್ವಿಜರನ್ನು ಅಹಿಚ್ಛತ್ರ ಅಗ್ರಹಾರದಿಂದ ಆಹ್ವಾನಿಸಿ ಕರೆತಂದು ಬನವಾಸಿ ಅಗ್ರಹಾರದಲ್ಲಿ ನೆಲೆ ಗೊಳಿಸಿದನೆಂದು ಹಲವು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ. (ಪ್ರೊ.ಎಂ.ಮೊರೇಸ್.ಎಂ.ಎ., "ಕದಂಬಕುಲ".) ಪ್ರಾಚೀನ ಕಾಲದ ಇಂತಹ ಬ್ರಾಹ್ಮಣರು "ಭೂಸುರರು" ಆಗಿದ್ದು. ಸದಾಚಾರ ಸಂಪನ್ನರೂ ಸುಶೀಲರೂ ಆಗಿದ್ದರು. ಇಂತಹ ಭೂಸುರರನ್ನು ಸಂರಕ್ಷಿಸಲು ಭೂದೇವತೆಗಳಾದ ಮಹಿಷಾಸುರ ಮರ್ದಿನೀ ಹಾಗೂ ಷಣ್ಮುಖ ಅಗ್ರಹಾರ ಪಾಲಕರಾಗಿರುತ್ತಿದ್ದರು. ಬನವಾಸಿ ಅಗ್ರಹಾರದಲ್ಲಿ ಇವುಗಳ ಅವಶೇಷಗಳಿವೆ. ಗೋವೆಯ ಕದಂಬರಾಜ ಶಿವಚಿತ್ತನ ತಂದೆ ಇಮ್ಮಡಿ ಜಯಕೇಶಿಯು ಬ್ರಾಹ್ಮಣನಿದ್ದು ಅವನ ತಾಯಿ ಮೈಳಲದೇವಿಯು ಕಲ್ಯಾಣ ಚಾಲುಕ್ಯ ಆರನೇ ಖಂಡದಲ್ಲಿ ಅಹಿಚ್ಛತ್ರದಿಂದ ಬ್ರಾಹ್ಮಣಾಗಮನವೆಂಬ 4ನೆಯ ಅಧ್ಯಾಯದ 39ನೆಯ ಶ್ಲೋಕದಲ್ಲಿ 32 ಗ್ರಾಮಗಳುಳ್ಳ ಪ್ರತ್ಯೇಕ ಅಗ್ರಹಾರಗಳನ್ನು ಮಯೂರಶರ್ಮನು ನಿರ್ಮಿಸಿದನೆಂದು ಹೇಳಿದೆ. ಹವ್ಯಕ ಇತಿಹಾಸ ತಜ್ಞರಾದ ಡಾ.ಶಾನಭಾಗರೂ ಹಾಗೂ ವಿದ್ವಾನ್ ತಿಮ್ಮಪ್ಪನವರೂ ಸ್ಮಾರ್ತರೆಂದೇ ಉಲ್ಲೇಖಿಸಿದ್ದಾರೆ. ಬೋಧಾಯನ ಗೋತ್ರದವರಾದ ವಿದ್ಯಾರಣ್ಯರೂ ಸ್ಮಾರ್ತರೆಂದು ಇತಿಹಾಸವು ಸಾರುತ್ತದೆ.

ಪರಶುರಾಮ ದೇವಾಲಯ

ಶಿಲಾಲೇಖವೊಂದರಲ್ಲಿ ?

"ತತ್ರಪಲ್ಲವಾಶ್ವಸಂಸ್ಥೇನ ಕಲಹೇನ ತ್ರಿವೇಣರೋಷಿತಃ ಕಲಿಯುಗೇಸ್ಮಿನ್ ಹೋಚತ ಕ್ಷತ್ರಾಪ್ತರಿ ಪೇಲವ ವಿಪ್ರತಾ" ((ಇ.ಅ.ಆ.ಆ.ಲಿಹಾಡಿ ಓ.ರ.176/4)]

ಪರಶುರಾಮನಂತೆಯೇ ಮಯೂರಶರ್ಮನೂ ಕ್ಷತ್ರಿಯರಿಂದ ಆದ ಅವಮಾನವನ್ನು ಸಹಿಸಲಾರದೇ ಕಾಂಚಿಪಲ್ಲವರನ್ನು ಸೋಲಿಸಿ ಕದಂಬ ರಾಜ್ಯ ಸ್ಥಾಪಿಸಿದ ಕುರಿತು ಉಲ್ಲೇಖಿಸುತ್ತದೆ. ಪರಶುರಾಮ ಮತ್ತು ಶಿವಚಿತ್ತ ಕದಂಬರಾಜನ ಮಧ್ಯೆ ಸಾಮ್ಯವಿರುವುದನ್ನು ವಿಖ್ಯಾತ ಸಂಶೋಧಕರಾದ ರಾಜಪುರೋಹಿತರು ಪ್ರಸ್ತಾಪಿಸಿ ಅಗ್ನಿಹೋತ್ರ ಪಾವನ ವಿಪ್ರರು (ಚಿತ್ಪಾವನ ಬ್ರಾಹ್ಮಣರು) ತಮ್ಮ ಆಶ್ರಯದಾತ ಶಿವಚಿತ್ತರಾಜನಿಗೆ ಪರಶುರಾಮನ ಅವತಾರವೆಂದು ಪರಿಗಣಿಸಿದ್ದಾರೆ. ಈತನೇ

ಅಹಿಚ್ಛತ್ರದಿಂದ ದ್ವಿಜರನ್ನು ಆಹ್ವಾನಿಸಿ ಕರತಂದು ಚಿಪಳೂಣದಲ್ಲಿ ಅಗ್ರಹಾರ ನಿರ್ಮಿಸಿದಲ್ಲಿ ಇದಕ್ಕೆ "ಶಿವಚಿತ್ತಪಾಲನ" ಎಂದು ನಾಮಕರಣವುಂಟಾಯಿತು.

ಸಹ್ಯಾದ್ರೇಶ್ಚ ತಲೇಗ್ರಾಮಂ ಚಿತ್ತಪೋಲನ ನಾಮತಃ ।
ತತ್ರೈವ ಸ್ಥಾಪಿತಾ ವಿಪ್ರಾಯಾಚ್ಚ್ಯಂದ್ರ ದಿವಾಕರೌ ॥29॥

ಬ್ರಾಹ್ಮಣೋತ್ಪತ್ತಿ

ಮಾರ್ತಾಂಡ ಪುಟ 316

ಚಿತಸ್ಥಾನೇ ಪವಿತ್ರತ್ವಂ ಚಿತ್ತಪಾವನ ಸಂಜ್ಞಕಂ ।
ಸರ್ವಕಾಲೇ ಸ್ಮರನ್ ಮೈವ ಕಾಯಾರ್ಥೆ ಆಗತಾಸ್ಮ್ಯಯಂ ।

ಸಹ್ಯಾದ್ರಿ ಖಂಡ ಪುಟ 84

ಬನವಾಸಿ ಅಭಿವೃದ್ಧಿ ಮಂಡಲದ ಅಧ್ಯಕ್ಷರೂ, ಕರ್ನಾಟಕ ಸರಕಾರದ ಗ್ಯಾಜೆಟೀಯರ್ ಮುಖ್ಯ ಸಂಪಾದಕರೂ ಆಗಿದ್ದ ಶ್ರೀ ಅಭಿಶಂಕರ್ (ಕೇಶವ್)ಚಿತ್ತಪಾವನರಾಗಿದ್ದು ಬನವಾಸಿಯವರು. "ಭಾರದ್ವಾಜ ಸಂಹಿತೆ" ಕುರಿತ ಓಲೆಗರಿ ಹಸ್ತಪ್ರತಿಯೊಂದನ್ನು ಕೆಳದಿ ಸಂಶೋಧನಾಲಯಕ್ಕೆ ಕೊಡುಗೆಯಿತ್ತಿದ್ದಾರೆ. (ಇವರು ಅಗ್ನಿಹೋತ್ರಿ ಮನೆತನದವರು ಆಗಿದ್ದಾರೆ.)

ಅಹಿಚ್ಛತ್ರ; ಸ್ಥಳನಿರ್ದೇಶನ (ಪ್ರಾಚೀನಭೂಪಟ)

Map.No. Date References
4 1800-600BC
395-135 BC Archeological Cultures
6 610-300 NBP
420-180(Defence) NBP>Northern Polished ware
Panchala Kuru
7 600- 35 BC Mourayan India, Hastinapur,
Meerut
8 200 BC-300AD India Political Map
11 500-750AD Political Geography
Banskhera Harshas
28 deg.22' N;79deg 8' E
Ramanagar
28deg.30'N; 79deg-00'E
kingdoms
? AD 500-750 Political Geography, Kannoj
And Kanyakubja

1 Adhichhatra: pabhosa Inse ;Ashadhasena, rana of Adhichhatra (EI>PP240-44); Ramanagar inse (A)dhichhatra' EIXP.120 Ramanagar/Ahichhatra.

2 P.80 Political Geography } Ahichhatra, Name of ``Bhukti" in } Harshas Banskhera plate. RY22 (AD628-9) EI>IV PP 208-11; identified with country named `NGO (or O)-hi-ch ``-i-ta-to" Ahichhatra, yuan Chwang (W.I,331;B.,I 200); cf.,AGI 303. It has been assumed that the head quarters of this bhukti were also at the town of the same name. The famous ruined site whose name survived as Ahichhatra (AGI,304-05) Though Ramanagar seems to have been the common local name in recent times.

3 EP Ind Vol X page 120} XVI Fragment from the lower part of an image from Ramanagar. The carving of this image very nearly gone, the outline being barely recognizable. The inscription also is in a very bad state of preservation. It is important as it mentions the name of (Adhi)chhatra. The inscription consists of a single line.

4 EPi Ind Vol X 1909-10} Jas Burgess
EPi Ind Vol I } E.Hultzsch
EPi Ind Vol I 1892 } A.Fuhrer

Ahichchhatra in the catalogues catalogorum

In Jain works Ahichchhatra is said to be the principal town of the country called Jangala which is included I twenty five and a half Aryan countries (see Weber's Indische Studien XVI P.398). It was situated to the North West of Campa and was a business centre (Naya P150-158). Parswanatha was worshipped here by Dhoranendra (Acaranga Nirukti.335). According to Vividhatrikakalpa (P14) Shankavai Samkhyavati was the other name of Ahicchatra. It was also called Pratyagraratha (AIV 26) or Shivapuri (Ksu P167) and Ahikshetra (mbb III ch 253)

Northern Panchala, modern Rohilkhand had its capital at Ahicchatra or chtravati (Mbb. I.168; Dr,Fuhrers MAI P359) It is Ahicchatra of inscriptions (EI.Vol II Pi 432; note by Dr.Fuhrer) which is nearer to the Greek form of Adisadra of Ptoemy (Ano Ind P133) Mention of Ahicchatra is also made in the Pobhosa cave inscription of Asadhasena dated about the beginning of the Christian Era (EI. II P432; Luders list No.s90 and 905; Inscriptions of the Gautamimitra, N.G. Majumdar 1 HQ).

The Allahabad pillar Inscription of Samudragupta refers to a powerful king named Acyuta, whose coins have been found at Ahicchatra (modern Ramanagara). It was still a famous town when visited by Hieun Tsiang in the 7th Century A.D. (Smith's Early History of India 4th Ed PP 391-92)

Cunningham identifies Ahicchatra with modern Ramanagar 20 miles west of Barelly in Rohilkhand (A.G.I.PP413,705). The name of Ahicchatra is at present confined to the great fortress in the lands of Alamura Kota and Nasrataganja. For further details see B.C.Law., Panchalas and their capital Ahicchatra (M.A.S.I.No.67;A.S.I.R.I. PP255ff; Progress report of the Epigraphical and Architectural branches of North Western Provinces and oudh. 1891-92, I ff; Jain Cano 169-70; Tribes in Ancient India P.34; BRWW 1 PP 200-201; Anct.Ind P134.

About five or six centuries later a number of large townships arose along the Ganga river. These had massive earthen walls around them. The one at Kaushambi was ninty feet in height and its basal width was sixty feet. It was covered with a coat of bricks. These embankments were generally placed in the time frame of 600 B.C to

600 B.C to 200 B.C. Except at Ahichhatra where walls of burnt bricks were erected on the top of the earthen wall, all other places had the earthen walls erected as a protection against the floods of the Ganga river, (Ghosh A1964, I 43-63 for details of fort walls and Mate M.S.1970,3,58-69 for flood protection measures). The Ahicchatra brick work is dated to the first century B.C-A.D by the excavator. Representations of fort walls and large gate houses in the sculptures on the Toranas of the Mahastupa at Sanchi give a good idea of how the Ahicchatra Fortifications might have looked like (Zimmer II 1955, P12, 151, 9 and 18). ಪ್ರೊ.ಚಿಟ್ನೀಸ್. ಅಭಿನಂದನಾ ಗ್ರಂಥ ಪುಟ 7

**ಉಪಸಂಹಾರ**

ಶ್ರೇಷ್ಠ ವಿದ್ವನ್ಮಣಿ, ಮಹಾಮಹೋಪಾಧ್ಯಾಯ ದಿ॥ ರಂಗನಾಥ ಶರ್ಮರವರು ಕೆಳದಿಯಲ್ಲಿದ್ದ ವೇದ ಪಾಠಶಾಲೆಯಲ್ಲಿ ಅಧ್ಯಯನ ನಡೆಸಿದವರು. ಡಿವಿಜಿಯವರ ಪರಮಾಪ್ತರು. ಸ್ವಾತಂತ್ರ ಪೂರ್ವದಲ್ಲಿ ಸರಕಾರವೇ ಕೆಳದಿ ಶ್ರೀರಾಮೇಶ್ವರ ದೇವಸ್ಥಾನದಲ್ಲಿ ಅರ್ಚಕರ ತರಬೇತಿಗೆ ವೇದಪಾಠಶಾಲೆ ನಡೆಸುತ್ತಿತ್ತು. ಕೃಷ್ಣಜೋಯಿಸರ (ನಮ್ಮ ತಾತಂದಿರು) ಮನೆಯಲ್ಲಿ ಶರ್ಮರಿಗೆ ಆಶ್ರಯ ನೀಡಿದ್ದುದ್ದನ್ನು, ಸದಾ ನನ್ನೊಂದಿಗೆ ಪ್ರಸ್ತಾಪಿಸುತ್ತಾ ಸಾಗರ ಪ್ರಾಂತ್ಯಕ್ಕೆ ಬಂದಾಗಲೆಲ್ಲಾ ನಮ್ಮ ಮನೆಯಲ್ಲಿಯೇ ಉಳಿಯುತ್ತಿದ್ದರು. ಕೆಳದಿ ವಸ್ತುಸಂಗ್ರಹಾಲಯಕ್ಕೆ ಪ್ರೋತ್ಸಾಹಿಸಿ ತಮ್ಮಲ್ಲಿದ್ದ ಮಂಗರಸನ ನಿಘಂಟು ಹಾಗೂ ಇತರ ಓಲೆಗರಿ ಹಸ್ತಪ್ರತಿಗಳನ್ನು ಕೊಡುಗೈಯಿತ್ತಿದ್ದರು. ತಿಗಳರ ಹಸ್ತಪ್ರತಿ ಹಾಗೂ ಅಹಿಚ್ಛತ್ರ ಕುರಿತು ನನಗೆ ಪ್ರೇರೇಪಿಸುತ್ತಾ ಖಚಿತ ಸಂಶೋಧನೆ ಕೈಗೊಳ್ಳಲು ಒತ್ತಾಯಿಸಿದ್ದರು. ಮೇಲಾಗಿ ಪೂರ್ವಗ್ರಹ ಪೀಡಿತರಾಗಬಾರದೆಂದು ಎಚ್ಚರಿಸಿದ್ದರಿಂದ ಘನೀಕೃತ ಆಕಾರಗಳ ಶೋಧನೆಗೆ ದಾರಿಯಾಯಿತು. ಭಾರತದ ಪ್ರಥಮ ರಾಷ್ಟ್ರಪತಿ ದಿ॥ರಾಜೇಂದ್ರಪ್ರಸಾದ್ ಹಾಗೂ ನೇಪಾಳ ಮಹಾರಾಜರ ಗುರುಗಳಾಗಿದ್ದ ಗೋಕರ್ಣದ ಮರ್ಹಷಿ ದೇವರಾತರ ಕೃತಿಗಳು ಅಲಭ್ಯವಾಯಿತು. ಅವರ ಅಳಿಯಂದಿರಾದ ಶ್ರೀವೇದೇಶ್ವರ್ ರವರು ಇಂತಹ ಸಂಗ್ರಹಗಳನ್ನು ಫ್ರಾನ್ಸ್ ನವರಿಗೆ ಬಿಕರಿ ಮಾಡಿದ್ದಾರೆಂದೂ ತಿಳಿದುಬಂದಿದೆ. ನಾನು ಸರ್ವೇಕ್ಷಿಸಿದ "ಆಹಿಚ್ಛತ್ರ ಬ್ರಾಹ್ಮಣಗಮನ ಕಥಾ" ಹಸ್ತಪ್ರತಿಯ ಭಾಗವು ಕೆಲವು ವರ್ಷಗಳ ಹಿಂದೆ "ಹವ್ಯಕ" ವಿಶೇಷ ಸಂಚಿಕೆಯಲ್ಲಿ ಪ್ರಕಟವಾಯಿತು.

ಈ ಲೇಖನದಲ್ಲಿ ನನ್ನ ಅಲ್ಪಮತಿಗೆ ತಿಳಿದಂತೆ ಹಾಗೂ ದಿ॥ಶರ್ಮರ ಆಶ್ರಯದಂತೆ ಪೂರ್ವಾಗ್ರಹಪೀಡೆಯಿಲ್ಲದೆ ಘನೀಕೃತ ಆಕರಗಳೊಂದಿಗೆ ಪ್ರಾಮಾಣಿಕವಾಗಿ

"ಅಹಿಚ್ಛತ್ರ" ಪ್ರದೇಶ ಕುರಿತು ವಿವೇಚಿಸಲಾಗಿದೆ. ಪ್ರಾಜ್ಞರ ಪ್ರತಿಕ್ರಿಯೆಗೆ ಸ್ವಾಗತ. ವಿದೇಶೀಯ ವಿದ್ವಾಂಸರು ನಮ್ಮನ್ನು ಅಪಹಾಸ್ಯಮಾಡುತ್ತಾ ದೇಶೀಯ ಆಕರಗಳನ್ನೂ ಬಳಸಿಕೊಳ್ಳದೆ "Most of the Research Works in Karnataka and Tamilnadu is prejudice; therefore it is difficult to consider for sources" ಎಂದಿದ್ದಾರೆ. ಇಂತಹ ಸಾಲಿನಲ್ಲಿ ಇದು ಸೇರಬಾರದಷ್ಟೆ? ಪ್ರಾಮಾಣಿಕ ವಿದ್ವಾಂಸರ ಕ್ಷಮೆ ಇರಲೆಂದು ಕೇಳಿಕೊಳ್ಳುತ್ತಾ ವಿರಮಿಸುವೆನು.

ಆಕರಗಳು


1. ಉತ್ತರ ಸಹ್ಯಾದ್ರಿಖಂಡ ? ಹೊಸಬಾಳೆ ಗ್ರಾಮನಿವಾಸಿನಾ ಅನಂತಶರ್ಮಣಾ ಸಂಗೃಹೀತಃ ಸಾದರೇಣ ಪ್ರಕಟಿತಶ್ಚ ? ನಡಹಳ್ಳಿ ಗ್ರಾಮ ನಿವಾಸಿನಾ ವೇಂಕಟೇಶ ಶರ್ಮಣಾ ಕರ್ನಾಟ ಭಾಷಯಾಂ ಸುವಿಸ್ತರೇಣ ಟೀಕಿತಃ ಸ್ವಕೀಯ ಶ್ರೀಲಕ್ಷ್ಮೀ ವಿಲಾಸ ಮುದ್ರಾಕ್ಷರ ಶಾಲಯಾಂ ಮುದ್ರಾಪಿತೋ ಭೊ ಭೂಯತೇತರಾಂ. ನಡಹಳ್ಳಿ. ಶಕೆ 1834>ಕ್ರಿ.ಶ. 1912.
2. ನಾ.ಶ್ರೀ.ರಾಜಪುರೋಹಿತರ ಸಂಶೋಧನ ಲೇಖನಗಳು 1887–1953; ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು –2008.
3. Catalogue Catalogorum
4. Irfan Habib; Atlas of Ancient Indian History; Oxford University Press, Maps.
5. Dr.K.N.Chitnis Felicitation Volume; some aspects of Medieval India; Ed; Dr.G.S.Gaikwad Samanth Publications, Dadar, Mumbai. 2006.
6. ಅಹಿಚ್ಛತ್ರ ಬ್ರಾಹ್ಮಣ ಗಮನ ಕಥಾ (ಅಪ್ರಕಟಿತ ಓಲೆಗರಿ ಹಸ್ತಪ್ರತಿ – ಛಾಯಾಚಿತ್ರದ ಜೆರಾಕ್ಸ್ ಪ್ರತಿ).

## ಬೌದ್ಧ ಕಾವ್ಯದೃಷ್ಟಿ

ಡಾ॥ ನಟರಾಜ್ ಬೂದಾಳ್

ಇಂತಹ ಒಂದು ತಲೆಬರಹ ಅನೇಕ ವಿವಾದಗಳನ್ನು ಸೃಷ್ಟಿಸುತ್ತದೆ. ಏಕೆಂದರೆ ಈಗಾಗಲೇ ಇರುವ ಭಾರತೀಯ ಕಾವ್ಯಮೀಮಾಂಸೆ ಎಂದು ತನ್ನಷ್ಟಕ್ಕೆ ತಾನು ಕರೆದುಕೊಂಡು ಕೂತಿರುವ ಸಂಸ್ಕೃತ ಕಾವ್ಯ ಮೀಮಾಂಸೆಯೇನು ಇಡೀ ಭಾರತಕ್ಕೆ ಅನ್ವಯವಾಗುವ ಮೀಮಾಂಸೆಯಲ್ಲ. ಅದು ತನ್ನ ಸೀಮಿತ ದೃಷ್ಟಿಕೋನವನ್ನು ಮೀರಲು ಭಾರತೀಯತೆಯ ಜಾಗ ಆಕ್ರಮಿಸಿದ ಕಾರಣಕ್ಕೆ ಇಂತಹ ವಿಂಗಡಣೆಗಳು ಶುರುವಾಗುತ್ತವೆ. ಆದರೆ ಕಾವ್ಯ ವೈಜ್ಞಾನಿಕ ದೃಷ್ಟಿ (ನಿಸರ್ಗವಿವೇಕದ ದೃಷ್ಟಿ) ಎನ್ನುವ ತಲೆಬರಹವನ್ನೇನಾದರೂ ಇಂತಹ ಮಾತುಕತೆಗೆ ಆಯ್ಕೆ ಮಾಡಿಕೊಂಡರೆ ಅದು ವಿಶ್ವಕ್ಕೆ ಅನ್ವಯವಾಗಬಹುದಾದ ದೃಷ್ಟಿಕೋನವಾಗುತ್ತದೆ. ಕಾವ್ಯದೃಷ್ಟಿ ಯಾವುದೇ ಆಗಿರಲಿ ಅದು ಸರಿಯಾದುದೇ? ಅಲ್ಲವೆ? ಎನ್ನುವುದು ಮಾತ್ರ ಪ್ರಶ್ನೆಯಾಗಬೇಕು. ಭಾರತೀಯ ಎಂದು ಕರೆದುಕೊಂಡ ಮಾತ್ರಕ್ಕೆ ಅದು ಭಾರತೀಯವೇನಲ್ಲ; ಅದೂ ಒಂದು ಮೀಮಾಂಸೆ ಅಷ್ಟೆ.ಸಂಸ್ಕೃತ ಭಾಷೆ ಎಂದ ಮಾತ್ರಕೆ ಅದೂ ಒಂದು ಭಾಷೆಯೇ ವಿನಾ ಭಾರತೀಯತೆಯನ್ನು ಅದು ಪ್ರತಿನಿಧಿಸುತ್ತದೆ ಎನ್ನುವ ದೃಷ್ಟಿಕೋನವೇ ಅನಗತ್ಯವಾದುದು ಮತ್ತು ದೋಷಪೂರಿತವಾದುದು.

ಮೀಮಾಂಸೆ ಎಂದರೆ ಲೋಕವನ್ನು ನೋಡುವ ಕಣ್ಣು.ಕಾವ್ಯದೃಷ್ಟಿ ಕೂಡ ಅದೇ ನಿಲುವನ್ನು ಪ್ರಕಟಿಸಬೇಕು.ಕಾವ್ಯವನ್ನು ನೋಡುವ ಅಂದರೆ ಅನುಸಂಧಾನ ಮಾಡುವ ದೃಷ್ಟಿಕೋನ ಯಾವುದಿರಬೇಕು? ಬೌದ್ಧ ಕಾವ್ಯದೃಷ್ಟಿ ಯಾವುದು? ಅದು ಯಾವ್ಯಾವ ಭಾಷೆಗಳಲ್ಲಿ ವ್ಯಕ್ತವಾಗಿದೆ? ಸಂಸ್ಕೃತದಲ್ಲಿ ಇರುವುದು ಒಂದೇ ಮೀಮಾಂಸೆಯೆ? ಒಂದೇ ನಿಲುವೆ? ಅಲ್ಲಿಯೂ ವೈದಿಕೇತರ ಶ್ರಮಣಧಾರೆಗಳ ನಿಲುವುಗಳು ಇವೆಯಲ್ಲವೆ? ವಿಜ್ಞಾನಕ್ಕೂ ಒಂದು ಕಾವ್ಯದೃಷ್ಟಿ ಇರಬೇಕಲ್ಲವೆ? ಹೀಗೆ ಅನೇಕ ಪ್ರಶ್ನೆಗಳು ಇದಿರಾಗುತ್ತವೆ. ಸದ್ಯಕ್ಕೆ ಬೌದ್ಧ ಕಾವ್ಯದೃಷ್ಟಿ ಏನನ್ನು ಮುಂದಿಡುತ್ತದೆ? ಕಾವ್ಯದೃಷ್ಟಿಗೆ ಮೊದಲು ಅದನ್ನು ರೂಪಿಸಿರುವ ಬೌದ್ಧ ತಾತ್ವಿಕತೆಯನ್ನು ಕುರಿತ ಒಂದು ವಿವರಣೆ ಅಗತ್ಯವೆಂದು ಭಾವಿಸುತ್ತೇನೆ.

ಕ್ವಾಂಟಮ್ ಥಿಯರಿಯನ್ನು ಓದಿದವನಿಗೆ ಶಾಕ್ ಆಗದಿದ್ದರೆ ಅದು ಅವನಿಗೆ ಅರ್ಥವಾಗಿಲ್ಲವೆಂದೇ ಅರ್ಥ ಎನ್ನುತ್ತಾನೆ ಕ್ವಾಂಟಮ್ ಥಿಯರಿಯ ಪ್ರತಿಪಾದಕ ಮ್ಯಾಕ್ಸ್ ಪ್ಲಾಂಕ್. ಬೌದ್ಧ ಧರ್ಮದ ಬಗೆಗೂ ಇದೇ ಮಾತನ್ನು ಹೇಳಬೇಕಾಗುತ್ತದೆ. ಬೌದ್ಧ ತಾತ್ವಿಕತೆಯನ್ನು ಅರಿತುಕೊಂಡವನಿಗೆ ಶಾಕ್ ಆಗುವುದು ಬುದ್ಧಗುರು ತಿಳಿಸಿಕೊಟ್ಟ

ತಾತ್ವಿಕತೆಯ ಕಾರಣಕ್ಕಲ್ಲ; ಬದಲಿಗೆ ನಾವೀಗ ನಂಜಿ ಬದುಕುತ್ತಿರುವ ಪೊಳ್ಳಿನ ಕಾರಣಕ್ಕೆ!ಸುಳ್ಳನ್ನೇ ನಂಬಿ ಸುಳ್ಳನ್ನೆ ಹೇಳುತ್ತಾ ಸುಳ್ಳನ್ನೆ ಬಾಳುತ್ತಿರುವವರಿಗೆ ಯಾರಾದರೂ ನಿಜವನ್ನು ಹೇಳಿದಾಗ ಏನಾಗುತ್ತದೆಯೋ ಅದೇ ಇಂದು ಬೌದ್ಧ ತಾತ್ವಿಕತೆಯನ್ನು ಇದಿರಾಗುವವರಿಗೆ ಆಗುತ್ತದೆ.ಹಾಗೆ ಆಗದಿದ್ದರೆ ಒಂದೋ ಅವರಿಗೆ ಅದು ಅರ್ಥವಾಗಿಲ್ಲ ಅಥವಾ ನಿಜವಾದ ಬೌದ್ಧ ತಾತ್ವಿಕತೆಯನ್ನು ಅವರು ಇದಿರಾಗಿಲ್ಲ ಎಂದೇ ಅರ್ಥ.

ಬೌದ್ಧ ಧರ್ಮವನ್ನು ಅರಿತುಕೊಳ್ಳಲು ಯಾವ ಪುಸ್ತಕವನ್ನು ಓದಬೇಕು ಮತ್ತು ಬೌದ್ಧ ಧರ್ಮದ ಪಾಲನೆ ಮಾಡುವುದಾದರೆ ಏನೇನನ್ನು ಪಾಲಿಸಬೇಕು? ಇದು ಅದನ್ನು ಅರಿಯ ಬಯಸುವ ಕುತೂಹಲಿಗಳ ಸಾಮಾನ್ಯ ಪ್ರಶ್ನೆ.ಇದೊಂಥರಾ ವ್ಯಂಗ್ಯ. ಸೊನ್ನೆಯನ್ನು ಪಡೆಯಲು ಏನೇನನ್ನು ಕೂಡಬೇಕು? ಸುಮ್ಮನಿರಲು ಏನೇನು ಮಾಡಬೇಕು? ಎಂದು ಕೇಳಿದಂತೆ. ಈಗಾಗಲೇ ಓದಿ ಓದಿ ಬೇಡವಾದದ್ದನ್ನೆಲ್ಲಾ ಗುಡ್ಡೆ ಹಾಕಿಕೊಂಡದ್ದು ಸಾಲದೆ, ಇನ್ನೂ ಒಂದನ್ನು ಸೇರಿಸಿಕೊಳ್ಳಲು ಬಯಸುತ್ತಿರುತ್ತಾರೆ! ಅದೂ ಅಲ್ಲದೆ, ಪೊಳ್ಳುಸುಳ್ಳು ಆಚರಣೆಗಳ ದೊಡ್ಡ ಪಟ್ಟಿಯನ್ನೇ ಸಿದ್ಧಪಡಿಸಿಟ್ಟುಕೊಂಡು ಅದರ ಜೊತೆಗೆ ಇನ್ನೊಂದಷ್ಟನ್ನು ಮಾಡಲು ತಯಾರಾಗಿ ಈ ಪ್ರಶ್ನೆ ಕೇಳುತ್ತಾರೆ. ಬುದ್ಧನ ದಾರಿ ಗುಡ್ಡೆ ಹಾಕಿಕೊಳ್ಳುವ ದಾರಿಯಲ್ಲ, ಅಲ್ಲಿ ಪಡೆದು ಅಲ್ಲೇ ವಿಸರ್ಜಿಸುವ ಯಾನ. ಅದು ಸೇರಿಸಿಕೊಳ್ಳಬೇಕಾದ ಮತ್ತೊಂದಲ್ಲ; ಬದಲಿಗೆ ತಪ್ಪು ತಿಳುವಳಿಕೆಯನ್ನು ತೊಡೆದು ಹಾಕುವುದರಿಂದ ಉಂಟಾಗುವ ವಿವೇಕ. ಈಗಾಗಲೇ ಇರುವ ಅನೇಕ ಕಾವ್ಯದೃಷ್ಟಿಗಳ ಜೊತೆಗೆ ಸೇರಿಸಿಕೊಳ್ಳಬೇಕಾದ ಇನ್ನೊಂದು ಕಾವ್ಯದೃಷ್ಟಿಯಲ್ಲ; ಬದಲಿಗೆ ವಾಸ್ತವವಲ್ಲದ ಕಾಲ್ಪನಿಕ ಕಾವ್ಯದೃಷ್ಟಿಗಳ ನಿರಾಕರಣೆ ಮಾತ್ರ.ಇದೊಂದು ರೀತಿಯಲ್ಲಿ ಯಾವಾಗಲೂ ಸೊನ್ನೆಯೇ ಆಗಿರುವ ಅವಸ್ಥೆ.ಸೊನ್ನೆಯಾಗಿದ್ದರೆ ಮಾತ್ರ ಅಗತ್ಯಕ್ಕೆ ತಕ್ಕಂತೆ ಯಾವ ಸಂಖ್ಯೆಯೂ ಆಗಲು ಸಾಧ್ಯ ಮತ್ತು ಏನೂ ಆಗಿಲ್ಲದಿರಲೂ ಸಾಧ್ಯ.ತಾಯಿಗರ್ಭದಂತೆ ಖಾಲಿಯೂ ಇರಬಲ್ಲದು ಮತ್ತು ತುಂಬಿ ನೀಡಲೂ ಬಲ್ಲದು.

ಬುದ್ಧಗುರು ಏನನ್ನು ಹೇಳಿದ ಎನ್ನುವುದರಷ್ಟೆ ಮಹತ್ವದ್ದು ಏನನ್ನು ಹೇಳಲಿಲ್ಲ ಎನ್ನುವುದು. ವಿಜ್ಞಾನಕ್ಕೂ ಇದು ಅನ್ವಯಿಸುವ ಮಾತು. ವಿಜ್ಞಾನ ಏನನ್ನು ಹೇಳಿದೆ ಮತ್ತು ಏನನ್ನು ಹೇಳಿಲ್ಲ ಇವೆರಡೂ ಮುಖ್ಯವೇ. ಲೋಕವನ್ನು ಸರಿಯಾಗಿ ಅರ್ಥೈಸಿಕೊಳ್ಳುವುದು ಹೇಗೆ? ಕಾವ್ಯವನ್ನು ಸರಿಯಾಗಿ ನೋಡುವ ದೃಷ್ಟಿಕೋನ ಯಾವುದು? ಎನ್ನುವ ಪ್ರಶ್ನೆಗೆ ಬುದ್ಧನ ಉತ್ತರ ತೀರಾ ಸರಳವಾಗಿದೆ: ಲೋಕವನ್ನು ತಪ್ಪಾಗಿ ಅರ್ಥೈಸಿಕೊಳ್ಳಬಾರದು.ಕಾವ್ಯವನ್ನು ತಪ್ಪಾಗಿ ನೋಡಬಾರದು ಅಷ್ಟೆ.

ಒಂದು ಗಾದೆ ಮಾತಿದೆ: ನಾಯಿ ಕಂಡು ಬೊಗಳಿದರೆ, ನರಮನುಷ್ಯ ಕಾಣದೆ ಬೊಗಳುತ್ತಾನೆ. ಕಾಣದುದರ ಬಗೆಗೆ, ತನ್ನ ಅನುಭವಕ್ಕೆ ಬಾರದುದರ ಬಗೆಗೆ ಇರುವ ಸಾಹಿತ್ಯವೇ ಜಗತ್ತಿನಲ್ಲಿ ಅತ್ಯಂತ ಹೆಚ್ಚು.ಕೇವಲ ಕಲ್ಪನೆ, ಊಹೆಗಳನ್ನು ಆಧರಿಸಿ ಲಕ್ಷ ಲಕ್ಷ ಪ್ರಶ್ನೆಗಳನ್ನು ಕೇಳುತ್ತಲೇ ಇರಬಹುದು. ಅಂತಹ ಮಾತುಕತೆಯಲ್ಲಿ ತೊಡಗುವುದರಿಂದ ಕೇಳುವವನು ಹೇಳುವವನು ಇಬ್ಬರೂ ನಿಜದದಾರಿಯನ್ನು ಬಿಟ್ಟಿರುತ್ತಾರೆ. ಹೇಳುವವನು ಅವಿವೇಕಿ ಕೇಳುವವನು ಅಜ್ಞಾನಿ ಎಂದು ಕನಕರು

ಅಂದದ್ದು ಇದಕ್ಕೇ. ನೋವೆಲ್ ಹರಾರಿ ತನ್ನ ಸೇಪಿಯನ್ಸ್ ಪುಸ್ತಕದಲ್ಲಿ ಒಂದು ಮಾತನ್ನು ಹೇಳುತ್ತಾನೆ. ಮನುಷ್ಯ ಭಾಷೆಯನ್ನು ಕಂಡುಕೊಂಡ ಮೇಲೆ ಅದನ್ನು ಈವರೆಗೆ ಅತಿ ಹೆಚ್ಚಾಗಿ ಬಳಸಿರುವುದು ತನ್ನ ಅನುಭವಕ್ಕೆ ಬಂದಿಲ್ಲದುದನ್ನು ಕುರಿತು ಮಾತನಾಡುವುದಕ್ಕೆ.ತಾವೆಂದೂ ಕಾಣದಿರುವುವುದರ ಬಗೆಗೆ ದಿನಗಟ್ಟಳೆ ಪ್ರವಚನ ಕೊಡುವವರು ಒಮ್ಮೆಯಾದರೂ ಈ ಪ್ರಶ್ನೆಯನ್ನು ಕೇಳಿಕೊಳ್ಳುತ್ತಾರಾ? ನನಗಂತೂ ಅನ್ನಿಸಿಲ್ಲ. ಊಹೆಯನ್ನಾಧರಿಸಿ ಎಷ್ಟು ಬೇಕಾದರೂ ಮಾತನಾಡಬಹುದು.ಆದರೆ ಬುದ್ಧ ಊಹಾತ್ಮಕ ಪ್ರಶ್ನೆಗಳಿಗೆ ಉತ್ತರಿಸಲಿಲ್ಲ. ಹಾಗಾಗಿ ಬುದ್ಧ ಏನನ್ನು ಹೇಳಿದ ಎನ್ನುವಷ್ಟೆ ಮುಖ್ಯವಾದುದು ಏನನ್ನು ಕುರಿತು ಹೇಳಲಿಲ್ಲ ಎನ್ನುವುದು.ಹಾಗಾಗಿ ಕೇವಲ ಊಹೆಯನ್ನಾಧರಿಸಿದ ಪ್ರಶ್ನೆಗಳಿಗೆ ಬುದ್ಧಗುರು ಉತ್ತರಿಸದೆ ಮೌನ ತಾಳಿದನು.

ಇದು ಉತ್ತರಿಸಲಾರದ ಮೌನವಲ್ಲ; ಬದಲಿಗೆ ನಮ್ಮ ಇಡೀ ಬದುಕಿನ ನಡೆಯನ್ನು ದಿಕ್ಕುತಪ್ಪಿಸಬಲ್ಲಂತಹ ಕಾಲ್ಪನಿಕ ಮತ್ತು ಪೊಳ್ಳು ಸಂಗತಿಗಳ ಜೊತೆಗೆ ಮಾತುಕತೆಗೆ ಹೋಗುವ ಅಗತ್ಯವೇ ಇಲ್ಲವೆಂಬುದನ್ನು ಅವನು ಕಂಡುಕೊಂಡುದರಿಂದ ಉತ್ತರಿಸಲು ಹೋಗಲಿಲ್ಲ. ಬುದ್ಧ ಉತ್ತರಿಸಿದ ಮೌನ ತಾಳಿದ ಹದಿನಾಲ್ಕು ಪ್ರಶ್ನೆಗಳು ಇವು:

೧. ಈ ಜಗತ್ತು ಕಾಲಾತೀತವೆ? ಅಲ್ಲವೆ? ಅಥವಾ ಎರಡೂ ಹೌದೆ? ಅಥವಾ ಎರಡೂ ಅಲ್ಲವೆ?

೨. ಈ ಜಗತ್ತಿಗೆ ಮಿತಿ ಇದೆಯೆ? ಇಲ್ಲವೆ? ಅಥವಾ ಎರಡೂ ಹೌದೆ? ಅಥವಾ ಎರಡೂ ಅಲ್ಲವೆ?

೩. ತಥಾಗತ ಮರಣಾನಂತರ ಬದುಕಿರುತ್ತಾನೆಯೆ? ಇಲ್ಲವೆ? ಅಥವಾ ಎರಡೂ ಹೌದೆ? ಅಥವಾ ಎರಡೂ ಅಲ್ಲವೆ?

೪. ಆತ್ಮ ಶರೀರಕ್ಕಿಂತ ಬೇರೆಯೋ? ಅಥವಾ ಎರಡೂ ಒಂದೇನೋ?

ಇವುಗಳಿಗೆ ಎಂಗೇಜ್ ಆಗುವುದೂ, ಇಲ್ಲದ ಮೊಲದ ಕೊಂಬುಗಳ ಬಗೆಗೆ ಚರ್ಚೆಗೆ ತೊಡಗುವುದೂ ಒಂದೇ ಆಗಿರುತ್ತದೆ.ಇದು ಕೇವಲ ಚರ್ಚೆಗೆ ತೊಡಗುವ ಸಂಗತಿಯಷ್ಟೇ ಅಲ್ಲ.ನಮ್ಮ ಬದುಕನ್ನು ಇಡಿಯಾಗಿ ವಾಸ್ತವದಾಚೆಗೆ ಕೊಂಡೊಯ್ಯಲು ಇಷ್ಟು ಸಾಕು.ಈ ಪ್ರಶ್ನೆಗಳನ್ನು ವಿಜ್ಞಾನದ ಎದುರಿಗೆ ಇಟ್ಟರೆ ಅದರ ಪ್ರತಿಕ್ರಿಯೆ ಏನು ಬರುತ್ತದೆಯೋ ಅದನ್ನಷ್ಟೆ ಬುದ್ಧಗುರು ನೀಡಿದ್ದು.ಅನುಭವಕ್ಕೆ ಬಾರದಿರುವ ಸಂಗತಿಗಳ ಬಗೆಗೆ ಪೊಳ್ಳು ನಂಬಿಕೆಗಳನ್ನು ಹುಟ್ಟುಹಾಕದಿರುವುದು ಮತ್ತು ಜ್ಞಾನವನ್ನು ಸ್ಥಗಿತಗೊಳಿಸದೆ ಹರಿಯಬಿಡುವುದು.

ಬೌದ್ಧ ತಾತ್ವಿಕತೆಯ ಮುಖ್ಯ ನಿಲುವೇನು? ಎನ್ನುವ ಪ್ರಶ್ನೆಗೆ ನೇರ ಉತ್ತರ ನೀಡುವುದಾದರೆ ಯಾವ್ಯಾವುದು ಬೌದ್ಧ ತಾತ್ವಿಕತೆಯ ನಿಲುವಲ್ಲ? ಎಂದು ಪ್ರಶ್ನೆಯನ್ನು ಮಾರ್ಪಡಿಸಿಕೊಳ್ಳಬೇಕಾಗುತ್ತದೆ. ನಾವೀಗ ನಂಬಿ ಬದುಕುತ್ತಿರುವ ಪೊಳ್ಳು ತಾತ್ವಿಕತೆಯ ಕಾರಣಕ್ಕೆ ಇಂತಹ ಮಾರ್ಪಾಡು ಅಗತ್ಯವಿದೆ. ಸುಳ್ಳನ್ನೆ ಹೇಳುತ್ತಾ ಸುಳ್ಳನ್ನೇ ನಂಬಿ ಸುಳ್ಳನ್ನೆ ಬಾಳುತ್ತಿರುವವರಿಗೆ ಯಾರಾದರೂ ನಿಜವನ್ನು ಹೇಳಿದಾಗ ಏನಾಗುತ್ತದೆಯೋ ಅದೇ ಇಂದು ಬೌದ್ಧ ತಾತ್ವಿಕತೆಯನ್ನು ಇದಿರಾಗುವವರಿಗೆ ಆಗುತ್ತದೆ. ಅದು ತಪ್ಪು

ತಿಳುವಳಿಕೆಯನ್ನು ತೊಡೆದು ಹಾಕುವುದರಿಂದ ಉಂಟಾಗುವ ವಿವೇಕ. ಲೋಕಕ್ಕೆ ಕೇಡುಂಟುಮಾಡುವ ಮಿಥ್ಯಾನಂಬಿಕೆಗಳ ನಿರಾಕರಣೆ ಮಾತ್ರ.ನಮ್ಮ ಮನೋಕೋಶಕ್ಕೆ ನಿಜವಲ್ಲದ ಸಂಗತಿಗಳನ್ನು ತಂದು ತುಂಬಿ ಅವುಗಳ ಮೂಲಕ ನಮ್ಮನ್ನು ನಿಯಂತ್ರಿಸಲಾಗುತ್ತಿದೆ. ಈ ಅನ್ಯ ನಿಯಂತ್ರಣದಿಂದ ಮುಕ್ತವಾಗಬೇಕು.ನಮ್ಮ ಹಾದಿಗೆ ಅಡ್ಡ ಎಳೆದಿರುವ ಎಂಟು ಮುಳ್ಳುಬೇಲಿಗಳಿವೆ. ಅವುಗಳನ್ನು ಮೊದಲು ನಿರಾಕರಿಸಿ ನಿವಾರಿಸಿಕೊಳ್ಳಬೇಕು. ಆ ಎಂಟು ನಿರಾಕರಣೆಗಳೆಂದರೆ:

೧. ಯಾವುದೂ ಹೊಸದಾಗಿ ಉಂಟಾಗುವುದಿಲ್ಲ,
೨. ಯಾವುದಕ್ಕೂ ಶಾಶ್ವತ ಅಂತ್ಯವೆಂಬುದಿಲ್ಲ. ರೂಪಾಂತರ ಮಾತ್ರ ಸಾಧ್ಯ.
೩. ಯಾವುದನ್ನೂ ಛಿದ್ರಗೊಳಿಸಿ ನಾಶ ಮಾಡಲು ಬರುವುದಿಲ್ಲ;
೪. ಯಾವುದೂ ಒಂದು ಕ್ಷಣವೂ ಸ್ಥಗಿತ  ಸ್ವತಂತ್ರ ಸ್ಥಿತಿಯಲ್ಲಿರುವುದಿಲ್ಲ;
೫. ಅನೇಕವನ್ನು ಕಡಿಮೆಗೊಳಿಸಿ ಒಂದನ್ನಾಗಿಸಲಾಗದು ಮತ್ತು
೬. ಒಂದನ್ನು ಅನೇಕಗೊಳಿಸಲೂ ಆಗದು;
೭. ಹೊಸದೊಂದರ ಆಗಮನವೂ ಅಸಾಧ್ಯ;
೮. ಇರುವುದರ ನಿರ್ಗಮನವೂ ಅಸಾಧ್ಯ.

ನಮ್ಮನ್ನೂ ಸೇರಿ ಸಮಸ್ತವೂ ಅನೇಕಗಳ ಸಂಬಂಧದಲ್ಲಿ ಉಂಟಾಗುತ್ತಲೇ ಇರುವ ಸಂಯೋಜನೆಗಳು ಮಾತ್ರ ಎನ್ನುವುದು ಈ ನಿರಾಕರಣೆಗಳಿಂದ ಗೊತ್ತಾಗುತ್ತದೆ. ಇಲ್ಲಿ ಆತ್ಮವೆನ್ನುವುದೂ ಇಲ್ಲ ಹೊರಗಿನ ಯಾವ ಶಕ್ತಿಯೂ ಇಲ್ಲ.ಇದು ಸ್ಥೂಲವಾಗಿ ಬೌದ್ಧ ಮಧ್ಯಮ ಮಾರ್ಗದ ನಿಲುವು.ಇಲ್ಲಿ ಇಂದ್ರಿಯಾತೀತವಾದ ಸಂಗತಿಗಳಿಗಾಗಲೀ. ಲೋಕದಾಚೆಗಿನ ಅತಿರಿಕ್ತ ಶಕ್ತಿಗಾಗಲೀ ತಾವಿಲ್ಲವೆನ್ನುವುದು ಮುಖ್ಯ ಸಂಗತಿಯಾಗಿದೆ. ನಮ್ಮ ಬದುಕನ್ನು ವಾಸ್ತವದ ಬಗೆಗಿನ ಸರಿಯಾದ ಗ್ರಹಿಕೆ ನಿಯಂತ್ರಿಸಬೇಕೆ ಹೊರತು ಭ್ರಮಾತ್ಮಕ ಸಂಗತಿಗಳಲ್ಲ. ಈ ಎಲ್ಲ ಕಾರಣಗಳಿಂದ ಬೌದ್ಧ ದರ್ಶನಕ್ಕೆ ಮಾತ್ರ ವೈಜ್ಞಾನಿಕ ದರ್ಶನವೆಂಬ ಹೆಚ್ಚುಗಾರಿಕೆ ಇದೆ.ಉಳಿದ ಯಾವ ದರ್ಶನಗಳಿಗೂ ವಿಜ್ಞಾನದ ಸಾಹಚರ್ಯ ಇಲ್ಲ.

ಮೀಮಾಂಸೆಯೆಂಬುದು ಮೂಲತಃ ಲೋಕವನ್ನು ಕಾಣುವ ಕಣ್ಣು.ಬದುಕುವ ಜಗತ್ತನ್ನು ಬದುಕಿನ ಸ್ವರೂಪಕ್ಕೆ, ಅದರ ಅಗತ್ಯಕ್ಕೆ ಅನುಸಾರವಾಗಿ ವಿವರಿಸಿಕೊಳ್ಳುವ ಬಗೆ.ಈ ವಿವರಣಕ್ರಮ ಜಡವಾದುದಾಗಿರಬೇಕಿಲ್ಲ. ಯಾಕೆಂದರೆ ಕಾಲಕಾಲಕ್ಕೆ ಒದಗಿಬರುವ ಬದುಕಿನ ತಿರುವುಗಳಿಂದ ಅನುಭವಲೋಕ ವಿಸ್ತರಣೆಗೊಳ್ಳುತ್ತದೆ.ಜೀವನ ಕ್ರಮಕ್ಕೆ ಹೊಸ ವಿಸ್ತರಣೆಗಳು ಒದಗಿಬಂದ ಹಾಗೆ ಕಾವ್ಯಮೀಮಾಂಸೆಯ ವ್ಯಾಪ್ತಿಯೂ ಹಿಗ್ಗುತ್ತಾ ಹೋಗಬೇಕಾಗುತ್ತದೆ. ಇಂದು ಹೊಸ ಅರಿವನ್ನು ಒದಗಿಸಿಕೊಡುವ ಅನೇಕ ಮಾಧ್ಯಮಗಳು ನಮ್ಮೆದುರಿಗೆ ಇವೆ. ಅವುಗಳ ಅನುಸಂಧಾನದ ಜೊತೆಗೆ ನಮ್ಮ ಮೀಮಾಂಸೆಯೂ ಸಾಗಬೇಕು.ನಿಶ್ಚಯವಾಗಿ ಇದರಲ್ಲಿ ವಿಜ್ಞಾನದ ಬಹುದೊಡ್ಡ ಪಾಲಿದೆ. ವಿಜ್ಞಾನದ ಹೊಸ ಹೊಸ ತಿಳುವಳಿಕೆಗಳು ನಮ್ಮ ಬದುಕನ್ನು ಬದಲಿಸುತ್ತಿವೆ. ವಿಜ್ಞಾನವನ್ನು ಹೊರಗಿಟ್ಟು ಬದುಕಿನ ವರ್ತಮಾನದ ಅವಸ್ಥೆಯನ್ನು ವಿವರಿಸಲಾಗದು. ಈ ಹಿನ್ನೆಲೆಯಲ್ಲಿ,

ಈ ಹೊತ್ತು ಬೌದ್ಧ ಕಾವ್ಯ ಮೀಮಾಂಸೆಯ ಮುಖ್ಯವಾದ ಮೂರು ಪರಿಕಲ್ಪನೆಗಳನ್ನು ಮಾತ್ರ ಕುರಿತು ಮಾತನಾಡಬಯಸುತ್ತೇನೆ. ಒಂದು: ಪ್ರಕ್ರಿಯಾ ಮೀಮಾಂಸೆ ಎರಡು: ಅನೇಕಾಂತವಾದ ಮತ್ತು ಮೂರನೆಯದು: ಪ್ರಮಾಣ ನಿರಾಕರಣೆ.

ಪ್ರಕ್ರಿಯಾ ಮೀಮಾಂಸೆ (ಅರ್ಥವೆಂಬುದು ಇರುವುದಲ್ಲ ಉಂಟಾಗುವುದು)

ಕುಂಬಾರನ ಆವಿಗೆಯಲ್ಲಿ ಕುಂಬಾರನಿಲ್ಲ
ಕುಂಬಾರನ ಕಲಶಂಗಳಲ್ಲಿ ಕುಂಬಾರನಿಲ್ಲ
ಆವಿಗೆ ಕಲಶಂಗಳಲ್ಲಿ ಅಸ್ತಿತ್ವ ಉಂಟಾಗಿಹ
ಕುಂಬಾರ ಕುಂಬಾರನಂತಿಪ್ಪ ನೋಡಾ
ಈ ಪ್ರಪಂಚದಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನ – ಸಿದ್ಧರಾಮ

ಲೋಕಸತ್ತೆಯನ್ನು ವಿವರಿಸುವ ಎರಡು ಮಾದರಿಗಳಿವೆ. ಒಂದು ಈ ಲೋಕಸಮಸ್ತವೂ ಈಗಾಗಲೇ ಆಗಿ ಇದೆ ಎಂದು ವಿವರಿಸುವುದು; ಇನ್ನೊಂದು ಲೋಕಸಮಸ್ತವೂ ಆಗುತ್ತಲೇ ಇರುವ ಪ್ರಕ್ರಿಯೆ ಎಂದು ವಿವರಿಸುವುದು. ಈಗ ಭಾರತೀಯ ಕಾವ್ಯಮೀಮಾಂಸೆಯಾಗಿ ನಮ್ಮೆದುರಿಗೆ ಇಡಲಾದ ಸಂಸ್ಕೃತ ಕಾವ್ಯಮೀಮಾಂಸೆ, ಪ್ಲೇಟೋ-ಅರಿಸ್ಟಾಟಲ್ ಪ್ರಣೀತ ಪಾಶ್ಚಾತ್ಯ ಕಾವ್ಯಮೀಮಾಂಸೆಗಳು ಲೋಕವನ್ನು ಆಗಿ ಇರುವ ಅವಸ್ಥೆ ಎಂದು ವಿವರಿಸಿದರೆ ಜೈನ, ಬೌದ್ಧ ದರ್ಶನ ಮತ್ತು ಕೆಲವು ಶ್ರಮಣಧಾರೆಗಳು ಹಾಗೂ ಗ್ರೀಕ್ ದೇಶದ ಹೆರಾಕ್ಲೀಟಸ್ ಲೋಕವನ್ನು ಸದಾ ಆಗುತ್ತಲೇ ಇರುವ ಪ್ರಕ್ರಿಯೆ ಎಂದು ವಿವರಿಸುತ್ತಾರೆ. ಭಾರತೀಯ ಕಾವ್ಯಮೀಮಾಂಸೆಯು ಸಮಸ್ತ ಕಾವ್ಯ ಕಲೆಯ ಸೃಷ್ಟಿಯು ಈಗಾಗಲೇ ಇರುವ ಮೂಲದ ಅನುಕರಣೆಯೆಂದೂ, ಅದು ಹೇಗೇ ಇದ್ದರೂ ಮೂಲದ ಶಂಖನಾದಕಿಂತ ಕಿಂಚಿದೂನವೆಂದೂ ಭಾವಿಸುತ್ತದೆ. ಭಾರತೀಯ ಕಾವ್ಯಮೀಮಾಂಸೆಯ ನಿರ್ಣಾಯಕ ಅಂಶವೆಂದರೆ ಅದರ ಏಕಮೂಲವಾದ ಅಥವಾ ಅದ್ವೈತವಾದ.ಅದು ಲೋಕಸಮಸ್ತಕ್ಕೂ ಕಾರಣವಾಗಿರುವ ಆ ಆದಿಸ್ಪಂದವನ್ನು ಆಧರಿಸಿಯೇ ಅದರ ಪ್ರಯಾಣವನ್ನು ಪ್ರಾರಂಭಿಸಿ ಮತ್ತೆ ಅಲ್ಲಿಯೇ ಮುಗಿಸುತ್ತದೆ. ಈ ಅದ್ವೈತದ ಬ್ರಹ್ಮಬಂಧದಿಂದ ಭಾರತದ ಮನಸ್ಸನ್ನು ಇಡಿಯಾಗಿ ಬಂಧಿಸಲಾಗಿದೆ.

ಲೋಕವನ್ನು 'ಆಗಿ ಇರುವ ಇರುವಿಕೆ'ಯಾಗಿ ನೋಡುವ ಮೀಮಾಂಸೆಗಳು, 'ಈ ಲೋಕವು ನಿಜವಲ್ಲ; ಇದರ ಮೂಲ ಮತ್ತೊಂದಿದೆ; ನಮ್ಮೆದುರಿಗೆ ಇರುವುದು ಅದರ ಅನುಕರಣೆ ಮಾತ್ರ; ಕವಿ-ಕಲಾವಿದರೆಲ್ಲ ಮಾಡುವುದು ಈ ಅನುಕರಣೆಯ ಅನುಕರಣೆ; ಇದಕ್ಕೆಲ್ಲ ಇರುವ ಮೂಲ ಮಾತ್ರ ಬದಲಾಗದ ಸತ್ಯ; ಈ ಲೋಕವನ್ನು ನಿರ್ಮಿಸಿ ನಿರ್ವಹಿಸುತ್ತಿರುವ ಮೂಲಸತ್ಯ ಬೇರೆಯೇ ಇರುವುದರಿಂದ ಕವಿ ಕಲಾವಿದರು ಕಟ್ಟಿದ್ದು ಮೂಲಕ್ಕಿಂತ ಕಿಂಚಿತ್ ಊನವಾಗಿರಲೇಬೇಕು' – ಎಂದು ನಂಬುತ್ತವೆ ಮತ್ತು ನಂಬಿಸುತ್ತವೆ. ಇದು 'ಇರುವಿಕೆಯ' ತತ್ವವನ್ನಾಧರಿಸಿದ ನಿಲುವು.

ಇದಕ್ಕೆ ಭಿನ್ನವಾಗಿ ಆಗುವಿಕೆಯ ಮೀಮಾಂಸೆಯು ಕಣ್ಣೆದುರಿಗಿನ ಈ ಲೋಕಕ್ಕೆ ಇನ್ನೆಲ್ಲೋ ಮೂಲವಿದೆ ಎಂದಾಗಲೀ, ಅದನ್ನು ನಿಯಂತ್ರಿಸುವ ಯಾವುದೋ ಕಾಣದ

ಶಕ್ತಿಯಿದೆ ಎಂದಾಗಲೀ ಹೇಳದು. ಬದಲಿಗೆ ಈ ಲೋಕದಲ್ಲಿ ಏನೇನು ಸಂಭವಿಸುತ್ತಿದೆಯೋ ಅದಕ್ಕೆ ನಿರ್ದಿಷ್ಟ ಕಾರಣಗಳಿರುತ್ತವೆ ಮತ್ತು ಅದಕ್ಕೆ ಅಗತ್ಯವಾದ ಪರಿಸ್ಥಿತಿಯ ಸಹಯೋಗದಲ್ಲಿ ಪರಿಣಾಮಗಳು ಉಂಟಾಗುತ್ತವೆ. ಎಲ್ಲವೂ ಅನೇಕ ಅಂಶಗಳ ಸಂಬಂಧದಲ್ಲಿ ಉಂಟಾಗಿ ಸಂಬಂಧ ಭಂಗಗೊಂಡಾಗ ಇಲ್ಲವಾಗುತ್ತವೆ. ಉದಾಹರಣೆಗೆ ಬೆಂಕಿ ಎನ್ನುವುದು ಇಂಧನ ಮತ್ತು ಅದಕ್ಕೆ ಅಗತ್ಯವಾದ ಆಮ್ಲಜನಕ ಮತ್ತು ಶಾಖಗಳ ಸಂಬಂಧದಲ್ಲಿ ಉಂಟಾಗಿ ಅವುಗಳ ಸಂಬಂಧ ಭಂಗಗೊಂಡರೆ ಇಲ್ಲವಾಗುತ್ತದೆ. ಬೆಂಕಿಯನ್ನು ಹೊರಗಿನ ಯಾವುದೋ ಶಕ್ತಿ ನಿರ್ಮಿಸುತ್ತದೆ ಎನ್ನುವುದನ್ನು ದೀರ್ಘಕಾಲದಿಂದ ನಂಬಿಸಲಾಗಿದೆಯೇ ಹೊರತು ಅದು ವಾಸ್ತವಿಕ ಸತ್ಯವಲ್ಲ.ಆಗುವ, ಇಲ್ಲವಾಗುವ ನಿರಂತರ ವಸ್ತುಪ್ರಪಂಚದಂತೆಯೇ ಇಲ್ಲಿ ಎಲ್ಲವೂ ಉಂಟಾಗುವಿಕೆಗಳು ಮಾತ್ರ. ಸಾಹಿತ್ಯದ ಪ್ರತಿಯೊಂದು ರಚನೆಯ ಹಿಂದೆಯೂ ಹೀಗೆ ಕಾರಣ ಪರಿಣಾಮಗಳ ಸಂಬಂಧವಿದ್ದು ಅದಕ್ಕೆ ಅನುಗುಣವಾದ ಪರಿಣಾಮ ಉಂಟಾಗುತ್ತದೆ. ಹಾಗಾಗಿ ಸಾಹಿತ್ಯವೊಂದರ ಅಧ್ಯಯನವೆಂದರೆ ಅದರ ಹಿಂದಿರುವ ಕಾರಣ ಪರಿಸ್ಥಿತಿಗಳು ಮತ್ತು ಅದು ಉಂಟುಮಾಡಿದ ಪರಿಣಾಮಗಳ ಅಧ್ಯಯನವೇ ಆಗಿರುತ್ತದೆ.

ಬುದ್ಧಗುರು ಈ ಜಗತ್ತಿನಲ್ಲಿ ಎಲ್ಲವೂ ಸದಾ ಬದಲಾಗುತ್ತಲೇ ಇರುತ್ತದೆ, ಬದಲಾವಣೆಗೆ ಒಳಗಾಗದಿರುವುದು ಯಾವುದೂ ಇಲ್ಲವೆಂದನು. ವಿಜ್ಞಾನವೂ ಲೋಕವನ್ನು ಸದಾ ಆಗುತ್ತಲೇ ಇರುವ, ಬದಲಾಗುತ್ತಲೇ ಇರುವ ಪ್ರಕ್ರಿಯೆ ಎನ್ನುತ್ತದೆ. ಲೋಕದ ಸಮಸ್ತವೂ ಹೀಗೆ ನಿರಂತರವಾದ ಆಗುವಿಕೆಯೇ ಆಗಿರುತ್ತದೆ ಎಂಬ ನಿಲುವಿನ ಪ್ರಕ್ರಿಯಾ ಮೀಮಾಂಸೆಯ ಪ್ರಕಾರ:

೧. ಈ ಲೋಕಕ್ಕೆ ಆದಿ ಅಂತ್ಯಗಳಿಲ್ಲ. ಇದಕ್ಕೆ ಹೊರತಾದ ಮತ್ತೊಂದು ಮೂಲವಿಲ್ಲ.

೨. ಇಲ್ಲಿ ಆಗಿ ಇರುವುದು ಯಾವುದೂ ಇಲ್ಲ; ಎಲ್ಲವೂ ಆಗುತ್ತಲೇ ಹೋಗುತ್ತವೆ.

೩. ಸ್ವತಂತ್ರ ಅಸ್ತಿತ್ವ, ಆತ್ಮ ಎನ್ನುವುದು ಯಾವುದಕ್ಕೂ ಇಲ್ಲ; ಎಲ್ಲವೂ ಅನೇಕ ಪ್ರತ್ಯಯಗಳು (ಅಂಶಗಳು) ಸೇರಿ ಆಗುತ್ತಿರುವ ಪ್ರಕ್ರಿಯೆ ಮಾತ್ರ.

೪. ಎಲ್ಲವೂ ಸಂಬಂಧದಲ್ಲಿ ಉಂಟಾಗಿ ಸಂಬಂಧ ಭಂಗಗೊಂಡಾಗ ನಿರಸನಗೊಳ್ಳುತ್ತವೆ (ಇಲ್ಲವಾಗುತ್ತವೆ).

೫. ಈ ವಸ್ತುಪ್ರಪಂಚವು ಸದಾ ಹರಿಯುತ್ತಿರುವ ಪ್ರವಾಹ; ಎಲ್ಲವೂ ನಿರಂತರ ಬದಲಾಗುತ್ತ ಹೋಗುತ್ತವೆ.

೬. ನಿಲುಗಡೆಯಿಲ್ಲದ ಲೋಕಚಲನೆಯಲ್ಲಿ ಆತ್ಮ (ವಸ್ತುವೊಂದರ ಒಳಗಿರುವ ಸ್ವತಂತ್ರ ಸಂಗತಿ) ಎಂದು ಕರೆಯಬಹುದಾದ ಯಾವುದೂ ಇಲ್ಲ.

ಮೇಲಿನ ಎಲ್ಲ ನಿಲುವುಗಳಿಗೂ ವಿಜ್ಞಾನದ ಸಮರ್ಥನೆ ಇದೆ. ದೀರ್ಘಕಾಲದ ಕನ್ನಡ ಸಾಹಿತ್ಯದಲ್ಲಿ ಈ ನಿಲುವುಗಳು ವ್ಯಕ್ತವಾಗುತ್ತ ಬಂದಿದ್ದರೂ, ಭಾರತೀಯ ಕಾವ್ಯ ಮೀಮಾಂಸೆಯ ಇರುವಿಕೆಯ ಮತ್ತು ಹೊರಗಿನ ಶಕ್ತಿಯ ಲೋಕದಲ್ಲಿರುವ

ಅಂದದ್ದು ಇದಕ್ಕೇ. ನೋವಲ್ ಹರಾರಿ ತನ್ನ ಸೇಪಿಯನ್ಸ್ ಪುಸ್ತಕದಲ್ಲಿ ಒಂದು ಮಾತನ್ನು ಹೇಳುತ್ತಾನೆ. ಮನುಷ್ಯ ಭಾಷೆಯನ್ನು ಕಂಡುಕೊಂಡ ಮೇಲೆ ಅದನ್ನು ಈವರೆಗೆ ಅತಿ ಹೆಚ್ಚಾಗಿ ಬಳಸಿರುವುದು ತನ್ನ ಅನುಭವಕ್ಕೆ ಬಂದಿಲ್ಲದುದನ್ನು ಕುರಿತು ಮಾತನಾಡುವುದಕ್ಕೆ.ತಾವೆಂದೂ ಕಾಣದಿರುವುವುದರ ಬಗೆಗೆ ದಿನಗಟ್ಟಳೆ ಪ್ರವಚನ ಕೊಡುವವರು ಒಮ್ಮೆಯಾದರೂ ಈ ಪ್ರಶ್ನೆಯನ್ನು ಕೇಳಿಕೊಳ್ಳುತ್ತಾರಾ? ನನಗಂತೂ ಅನ್ನಿಸಿಲ್ಲ. ಊಹೆಯನ್ನಾಧರಿಸಿ ಎಷ್ಟು ಬೇಕಾದರೂ ಮಾತನಾಡಬಹುದು.ಆದರೆ ಬುದ್ಧ ಊಹಾತ್ಮಕ ಪ್ರಶ್ನೆಗಳಿಗೆ ಉತ್ತರಿಸಲಿಲ್ಲ. ಹಾಗಾಗಿ ಬುದ್ಧ ಏನನ್ನು ಹೇಳಿದ ಎನ್ನುವಷ್ಟೆ ಮುಖ್ಯವಾದುದು ಏನನ್ನು ಕುರಿತು ಹೇಳಲಿಲ್ಲ ಎನ್ನುವುದು.ಹಾಗಾಗಿ ಕೇವಲ ಊಹೆಯನ್ನಾಧರಿಸಿದ ಪ್ರಶ್ನೆಗಳಿಗೆ ಬುದ್ಧಗುರು ಉತ್ತರಿಸದೆ ಮೌನ ತಾಳಿದನು.

ಇದು ಉತ್ತರಿಸಲಾರದ ಮೌನವಲ್ಲ; ಬದಲಿಗೆ ನಮ್ಮ ಇಡೀ ಬದುಕಿನ ನಡೆಯನ್ನು ದಿಕ್ಕುತಪ್ಪಿಸಬಲ್ಲಂತಹ ಕಾಲ್ಪನಿಕ ಮತ್ತು ಪೊಳ್ಳು ಸಂಗತಿಗಳ ಜೊತೆಗೆ ಮಾತುಕತೆಗೆ ಹೋಗುವ ಅಗತ್ಯವೇ ಇಲ್ಲವೆಂಬುದನ್ನು ಅವನು ಕಂಡುಕೊಂಡುದರಿಂದ ಉತ್ತರಿಸಲು ಹೋಗಲಿಲ್ಲ. ಬುದ್ಧ ಉತ್ತರಿಸಿದ ಮೌನ ತಾಳಿದ ಹದಿನಾಲ್ಕು ಪ್ರಶ್ನೆಗಳು ಇವು:

೧. ಈ ಜಗತ್ತು ಕಾಲಾತೀತವೆ? ಅಲ್ಲವೆ? ಅಥವಾ ಎರಡೂ ಹೌದೆ? ಅಥವಾ ಎರಡೂ ಅಲ್ಲವೆ?

೨. ಈ ಜಗತ್ತಿಗೆ ಮಿತಿ ಇದೆಯೆ? ಇಲ್ಲವೆ? ಅಥವಾ ಎರಡೂ ಹೌದೆ? ಅಥವಾ ಎರಡೂ ಅಲ್ಲವೆ?

೩. ತಥಾಗತ ಮರಣಾನಂತರ ಬದುಕಿರುತ್ತಾನೆಯೆ? ಇಲ್ಲವೆ? ಅಥವಾ ಎರಡೂ ಹೌದೆ? ಅಥವಾ ಎರಡೂ ಅಲ್ಲವೆ?

೪. ಆತ್ಮ ಶರೀರಕ್ಕಿಂತ ಬೇರೆಯೋ? ಅಥವಾ ಎರಡೂ ಒಂದೇನೋ?

ಇವುಗಳಿಗೆ ಎಂಗೇಜ್ ಆಗುವುದೂ, ಇಲ್ಲದ ಮೊಲದ ಕೊಂಬುಗಳ ಬಗೆಗೆ ಚರ್ಚೆಗೆ ತೊಡಗುವುದೂ ಒಂದೇ ಆಗಿರುತ್ತದೆ.ಇದು ಕೇವಲ ಚರ್ಚೆಗೆ ತೊಡಗುವ ಸಂಗತಿಯಷ್ಟೇ ಅಲ್ಲ.ನಮ್ಮ ಬದುಕನ್ನು ಇಡಿಯಾಗಿ ವಾಸ್ತವದಾಚೆಗೆ ಕೊಂಡೊಯ್ಯಲು ಇಷ್ಟು ಸಾಕು.ಈ ಪ್ರಶ್ನೆಗಳನ್ನು ವಿಜ್ಞಾನದ ಎದುರಿಗೆ ಇಟ್ಟರೆ ಅದರ ಪ್ರತಿಕ್ರಿಯೆ ಏನು ಬರುತ್ತದೆಯೋ ಅದನ್ನಷ್ಟೆ ಬುದ್ಧಗುರು ನೀಡಿದ್ದು.ಅನುಭವಕ್ಕೆ ಬಾರದಿರುವ ಸಂಗತಿಗಳ ಬಗೆಗೆ ಪೊಳ್ಳು ನಂಬಿಕೆಗಳನ್ನು ಹುಟ್ಟುಹಾಕದಿರುವುದು ಮತ್ತು ಜ್ಞಾನವನ್ನು ಸ್ಥಗಿತಗೊಳಿಸದೆ ಹರಿಯಬಿಡುವುದು.

ಬೌದ್ಧ ತಾತ್ವಿಕತೆಯ ಮುಖ್ಯ ನಿಲುವೇನು? ಎನ್ನುವ ಪ್ರಶ್ನೆಗೆ ನೇರ ಉತ್ತರ ನೀಡುವುದಾದರೆ ಯಾವ್ಯಾವುದು ಬೌದ್ಧ ತಾತ್ವಿಕತೆಯ ನಿಲುವಲ್ಲ? ಎಂದು ಪ್ರಶ್ನೆಯನ್ನು ಮಾರ್ಪಡಿಸಿಕೊಳ್ಳಬೇಕಾಗುತ್ತದೆ. ನಾವೀಗ ನಂಬಿ ಬದುಕುತ್ತಿರುವ ಪೊಳ್ಳು ತಾತ್ವಿಕತೆಯ ಕಾರಣಕ್ಕೆ ಇಂತಹ ಮಾರ್ಪಾಡು ಅಗತ್ಯವಿದೆ. ಸುಳ್ಳನ್ನೆ ಹೇಳುತ್ತಾ ಸುಳ್ಳನ್ನೇ ನಂಬಿ ಸುಳ್ಳನ್ನೆ ಬಾಳುತ್ತಿರುವವರಿಗೆ ಯಾರಾದರೂ ನಿಜವನ್ನು ಹೇಳಿದಾಗ ಏನಾಗುತ್ತದೆಯೋ ಅದೇ ಇಂದು ಬೌದ್ಧ ತಾತ್ವಿಕತೆಯನ್ನು ಇದಿರಾಗುವವರಿಗೆ ಆಗುತ್ತದೆ. ಅದು ತಪ್ಪು

ತಿಳುವಳಿಕೆಯನ್ನು ತೊಡೆದು ಹಾಕುವುದರಿಂದ ಉಂಟಾಗುವ ವಿವೇಕ. ಲೋಕಕ್ಕೆ ಕೇಡುಂಟುಮಾಡುವ ಮಿಥ್ಯಾನಂಬಿಕೆಗಳ ನಿರಾಕರಣೆ ಮಾತ್ರ.ನಮ್ಮ ಮನೋಕೋಶಕ್ಕೆ ನಿಜವಲ್ಲದ ಸಂಗತಿಗಳನ್ನು ತಂದು ತುಂಬಿ ಅವುಗಳ ಮೂಲಕ ನಮ್ಮನ್ನು ನಿಯಂತ್ರಿಸಲಾಗುತ್ತಿದೆ. ಈ ಅನ್ಯ ನಿಯಂತ್ರಣದಿಂದ ಮುಕ್ತವಾಗಬೇಕು.ನಮ್ಮ ಹಾದಿಗೆ ಅಡ್ಡ ಎಳೆದಿರುವ ಎಂಟು ಮುಳ್ಳುಬೇಲಿಗಳಿವೆ. ಅವುಗಳನ್ನು ಮೊದಲು ನಿರಾಕರಿಸಿ ನಿವಾರಿಸಿಕೊಳ್ಳಬೇಕು. ಆ ಎಂಟು ನಿರಾಕರಣೆಗಳೆಂದರೆ:

೧. ಯಾವುದೂ ಹೊಸದಾಗಿ ಉಂಟಾಗುವುದಿಲ್ಲ,
೨. ಯಾವುದಕ್ಕೂ ಶಾಶ್ವತ ಅಂತ್ಯವೆಂಬುದಿಲ್ಲ. ರೂಪಾಂತರ ಮಾತ್ರ ಸಾಧ್ಯ.
೩. ಯಾವುದನ್ನೂ ಛಿದ್ರಗೊಳಿಸಿ ನಾಶ ಮಾಡಲು ಬರುವುದಿಲ್ಲ;
೪. ಯಾವುದೂ ಒಂದು ಕ್ಷಣವೂ ಸ್ಥಗಿತ ಸ್ವತಂತ್ರ ಸ್ಥಿತಿಯಲ್ಲಿರುವುದಿಲ್ಲ;
೫. ಅನೇಕವನ್ನು ಕಡಿಮೆಗೊಳಿಸಿ ಒಂದನ್ನಾಗಿಸಲಾಗದು ಮತ್ತು
೬. ಒಂದನ್ನು ಅನೇಕಗೊಳಿಸಲೂ ಆಗದು;
೭. ಹೊಸದೊಂದರ ಆಗಮನವೂ ಅಸಾಧ್ಯ;
೮. ಇರುವುದರ ನಿರ್ಗಮನವೂ ಅಸಾಧ್ಯ.

ನಮ್ಮನ್ನೂ ಸೇರಿ ಸಮಸ್ತವೂ ಅನೇಕಗಳ ಸಂಬಂಧದಲ್ಲಿ ಉಂಟಾಗುತ್ತಲೇ ಇರುವ ಸಂಯೋಜನೆಗಳು ಮಾತ್ರ ಎನ್ನುವುದು ಈ ನಿರಾಕರಣೆಗಳಿಂದ ಗೊತ್ತಾಗುತ್ತದೆ. ಇಲ್ಲಿ ಆತ್ಮವೆನ್ನುವುದೂ ಇಲ್ಲ ಹೊರಗಿನ ಯಾವ ಶಕ್ತಿಯೂ ಇಲ್ಲ.ಇದು ಸ್ಥೂಲವಾಗಿ ಬೌದ್ಧ ಮಧ್ಯಮ ಮಾರ್ಗದ ನಿಲುವು.ಇಲ್ಲಿ ಇಂದ್ರಿಯಾತೀತವಾದ ಸಂಗತಿಗಳಿಗಾಗಲೀ. ಲೋಕದಾಚೆಗಿನ ಅತಿರಿಕ್ತ ಶಕ್ತಿಗಾಗಲೀ ತಾವಿಲ್ಲವೆನ್ನುವುದು ಮುಖ್ಯ ಸಂಗತಿಯಾಗಿದೆ. ನಮ್ಮ ಬದುಕನ್ನು ವಾಸ್ತವದ ಬಗೆಗಿನ ಸರಿಯಾದ ಗ್ರಹಿಕೆ ನಿಯಂತ್ರಿಸಬೇಕೆ ಹೊರತು ಭ್ರಮಾತ್ಮಕ ಸಂಗತಿಗಳಲ್ಲ. ಈ ಎಲ್ಲ ಕಾರಣಗಳಿಂದ ಬೌದ್ಧ ದರ್ಶನಕ್ಕೆ ಮಾತ್ರ ವೈಜ್ಞಾನಿಕ ದರ್ಶನವೆಂಬ ಹೆಚ್ಚುಗಾರಿಕೆ ಇದೆ.ಉಳಿದ ಯಾವ ದರ್ಶನಗಳಿಗೂ ವಿಜ್ಞಾನದ ಸಾಹಚರ್ಯ ಇಲ್ಲ.

ಮೀಮಾಂಸೆಯೆಂಬುದು ಮೂಲತಃ ಲೋಕವನ್ನು ಕಾಣುವ ಕಣ್ಣು.ಬದುಕುವ ಜಗತ್ತನ್ನು ಬದುಕಿನ ಸ್ವರೂಪಕ್ಕೆ, ಅದರ ಅಗತ್ಯಕ್ಕೆ ಅನುಸಾರವಾಗಿ ವಿವರಿಸಿಕೊಳ್ಳುವ ಬಗೆ.ಈ ವಿವರಣಕ್ರಮ ಜಡವಾದುದಾಗಿರಬೇಕಿಲ್ಲ. ಯಾಕೆಂದರೆ ಕಾಲಕಾಲಕ್ಕೆ ಒದಗಿಬರುವ ಬದುಕಿನ ತಿರುವುಗಳಿಂದ ಅನುಭವಲೋಕ ವಿಸ್ತರಣೆಗೊಳ್ಳುತ್ತದೆ.ಜೀವನ ಕ್ರಮಕ್ಕೆ ಹೊಸ ವಿಸ್ತರಣೆಗಳು ಒದಗಿಬಂದ ಹಾಗೆ ಕಾವ್ಯಮೀಮಾಂಸೆಯ ವ್ಯಾಪ್ತಿಯೂ ಹಿಗ್ಗುತ್ತಾ ಹೋಗಬೇಕಾಗುತ್ತದೆ. ಇಂದು ಹೊಸ ಅರಿವನ್ನು ಒದಗಿಸಿಕೊಡುವ ಅನೇಕ ಮಾಧ್ಯಮಗಳು ನಮ್ಮೆದುರಿಗೆ ಇವೆ. ಅವುಗಳ ಅನುಸಂಧಾನದ ಜೊತೆಗೆ ನಮ್ಮ ಮೀಮಾಂಸೆಯೂ ಸಾಗಬೇಕು.ನಿಶ್ಚಯವಾಗಿ 'ಇದರಲ್ಲಿ ವಿಜ್ಞಾನದ ಬಹುದೊಡ್ಡ ಪಾಲಿದೆ. ವಿಜ್ಞಾನದ ಹೊಸ ಹೊಸ ತಿಳುವಳಿಕೆಗಳು ನಮ್ಮ ಬದುಕನ್ನು ಬದಲಿಸುತ್ತಿವೆ. ವಿಜ್ಞಾನವನ್ನು ಹೊರಗಿಟ್ಟು ಬದುಕಿನ ವರ್ತಮಾನದ ಅವಸ್ಥೆಯನ್ನು ವಿವರಿಸಲಾಗದು. ಈ ಹಿನ್ನೆಲೆಯಲ್ಲಿ,

ಈ ಹೊತ್ತು ಬೌದ್ಧ ಕಾವ್ಯ ಮೀಮಾಂಸೆಯ ಮುಖ್ಯವಾದ ಮೂರು ಪರಿಕಲ್ಪನೆಗಳನ್ನು ಮಾತ್ರ ಕುರಿತು ಮಾತನಾಡಬಯಸುತ್ತೇನೆ. ಒಂದು: ಪ್ರಕ್ರಿಯಾ ಮೀಮಾಂಸೆ ಎರಡು: ಅನೇಕಾಂತವಾದ ಮತ್ತು ಮೂರನೆಯದು: ಪ್ರಮಾಣ ನಿರಾಕರಣೆ.

ಪ್ರಕ್ರಿಯಾ ಮೀಮಾಂಸೆ (ಅರ್ಥವೆಂಬುದು ಇರುವುದಲ್ಲ ಉಂಟಾಗುವುದು)
ಕುಂಬಾರನ ಆವಿಗೆಯಲ್ಲಿ ಕುಂಬಾರನಿಲ್ಲ
ಕುಂಬಾರನ ಕಲಶಂಗಳಲ್ಲಿ ಕುಂಬಾರನಿಲ್ಲ
ಆವಿಗೆ ಕಲಶಂಗಳಲ್ಲಿ ಅಸ್ತಿತ್ವ ಉಂಟಾಗಿಹ
ಕುಂಬಾರ ಕುಂಬಾರನಂತಿಪ್ಪ ನೋಡಾ
ಈ ಪ್ರಪಂಚದಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನ - ಸಿದ್ಧರಾಮ

ಲೋಕಸತ್ತೆಯನ್ನು ವಿವರಿಸುವ ಎರಡು ಮಾದರಿಗಳಿವೆ. ಒಂದು ಈ ಲೋಕಸಮಸ್ತವೂ ಈಗಾಗಲೇ ಆಗಿ ಇದೆ ಎಂದು ವಿವರಿಸುವುದು; ಇನ್ನೊಂದು ಲೋಕಸಮಸ್ತವೂ ಆಗುತ್ತಲೇ ಇರುವ ಪ್ರಕ್ರಿಯೆ ಎಂದು ವಿವರಿಸುವುದು. ಈಗ ಭಾರತೀಯ ಕಾವ್ಯಮೀಮಾಂಸೆಯಾಗಿ ನಮ್ಮೆದುರಿಗೆ ಇಡಲಾದ ಸಂಸ್ಕೃತ ಕಾವ್ಯಮೀಮಾಂಸೆ, ಪ್ಲೇಟೋ-ಅರಿಸ್ಟಾಟಲ್ ಪ್ರಣೀತ ಪಾಶ್ಚಾತ್ಯ ಕಾವ್ಯಮೀಮಾಂಸೆಗಳು ಲೋಕವನ್ನು ಆಗಿ ಇರುವ ಅವಸ್ಥೆ ಎಂದು ವಿವರಿಸಿದರೆ ಜೈನ, ಬೌದ್ಧ ದರ್ಶನ ಮತ್ತು ಕೆಲವು ಶ್ರಮಣಧಾರೆಗಳು ಹಾಗೂ ಗ್ರೀಕ್ ದೇಶದ ಹೆರಾಕ್ಲೀಟಸ್ ಲೋಕವನ್ನು ಸದಾ ಆಗುತ್ತಲೇ ಇರುವ ಪ್ರಕ್ರಿಯೆ ಎಂದು ವಿವರಿಸುತ್ತಾರೆ. ಭಾರತೀಯ ಕಾವ್ಯಮೀಮಾಂಸೆಯು ಸಮಸ್ತ ಕಾವ್ಯ ಕಲೆಯ ಸೃಷ್ಟಿಯು ಈಗಾಗಲೇ ಇರುವ ಮೂಲದ ಅನುಕರಣೆಯೆಂದೂ, ಅದು ಹೇಗೇ ಇದ್ದರೂ ಮೂಲದ ಶಂಖನಾದಕಿಂತ ಕಿಂಚಿದೂನವೆಂದೂ ಭಾವಿಸುತ್ತದೆ. ಭಾರತೀಯ ಕಾವ್ಯಮೀಮಾಂಸೆಯ ನಿರ್ಣಾಯಕ ಅಂಶವೆಂದರೆ ಅದರ ಏಕಮೂಲವಾದ ಅಥವಾ ಅದ್ವೈತವಾದ.ಅದು ಲೋಕಸಮಸ್ತಕ್ಕೂ ಕಾರಣವಾಗಿರುವ ಆ ಆದಿಸ್ಪಂದವನ್ನು ಆಧರಿಸಿಯೇ ಅದರ ಪ್ರಯಾಣವನ್ನು ಪ್ರಾರಂಭಿಸಿ ಮತ್ತೆ ಅಲ್ಲಿಯೇ ಮುಗಿಸುತ್ತದೆ. ಈ ಅದ್ವೈತದ ಬ್ರಹ್ಮಬಂಧದಿಂದ ಭಾರತದ ಮನಸ್ಸನ್ನು ಇಡಿಯಾಗಿ ಬಂಧಿಸಲಾಗಿದೆ.

ಲೋಕವನ್ನು 'ಆಗಿ ಇರುವ ಇರುವಿಕೆ'ಯಾಗಿ ನೋಡುವ ಮೀಮಾಂಸೆಗಳು, 'ಈ ಲೋಕವು ನಿಜವಲ್ಲ; ಇದರ ಮೂಲ ಮತ್ತೊಂದಿದೆ; ನಮ್ಮೆದುರಿಗೆ ಇರುವುದು ಅದರ ಅನುಕರಣೆ ಮಾತ್ರ; ಕವಿ-ಕಲಾವಿದರೆಲ್ಲ ಮಾಡುವುದು ಈ ಅನುಕರಣೆಯ ಅನುಕರಣೆ; ಇದಕ್ಕೆಲ್ಲ ಇರುವ ಮೂಲ ಮಾತ್ರ ಬದಲಾಗದ ಸತ್ಯ; ಈ ಲೋಕವನ್ನು ನಿರ್ಮಿಸಿ ನಿರ್ವಹಿಸುತ್ತಿರುವ ಮೂಲಸತ್ಯ ಬೇರೆಯೇ ಇರುವುದರಿಂದ ಕವಿ ಕಲಾವಿದರು ಕಟ್ಟಿದ್ದು ಮೂಲಕ್ಕಿಂತ ಕಿಂಚಿತ್ ಊನವಾಗಿರಲೇಬೇಕು' - ಎಂದು ನಂಬುತ್ತವೆ ಮತ್ತು ನಂಬಿಸುತ್ತವೆ. ಇದು 'ಇರುವಿಕೆಯ' ತತ್ವವನ್ನಾಧರಿಸಿದ ನಿಲುವು.

ಇದಕ್ಕೆ ಭಿನ್ನವಾಗಿ ಆಗುವಿಕೆಯ ಮೀಮಾಂಸೆಯು ಕಣ್ಣೆದುರಿಗಿನ ಈ ಲೋಕಕ್ಕೆ ಇನ್ನೆಲ್ಲೋ ಮೂಲವಿದೆ ಎಂದಾಗಲೀ, ಅದನ್ನು ನಿಯಂತ್ರಿಸುವ ಯಾವುದೋ ಕಾಣದ

ಶಕ್ತಿಯಿದೆ ಎಂದಾಗಲೀ ಹೇಳದು. ಬದಲಿಗೆ ಈ ಲೋಕದಲ್ಲಿ ಏನೇನು ಸಂಭವಿಸುತ್ತಿದೆಯೋ ಅದಕ್ಕೆ ನಿರ್ದಿಷ್ಟ ಕಾರಣಗಳಿರುತ್ತವೆ ಮತ್ತು ಅದಕ್ಕೆ ಅಗತ್ಯವಾದ ಪರಿಸ್ಥಿತಿಯ ಸಹಯೋಗದಲ್ಲಿ ಪರಿಣಾಮಗಳು ಉಂಟಾಗುತ್ತವೆ. ಎಲ್ಲವೂ ಅನೇಕ ಅಂಶಗಳ ಸಂಬಂಧದಲ್ಲಿ ಉಂಟಾಗಿ ಸಂಬಂಧ ಭಂಗಗೊಂಡಾಗ ಇಲ್ಲವಾಗುತ್ತವೆ. ಉದಾಹರಣೆಗೆ ಬೆಂಕಿ ಎನ್ನುವುದು ಇಂಧನ ಮತ್ತು ಅದಕ್ಕೆ ಅಗತ್ಯವಾದ ಆಮ್ಲಜನಕ ಮತ್ತು ಶಾಖಗಳ ಸಂಬಂಧದಲ್ಲಿ ಉಂಟಾಗಿ ಅವುಗಳ ಸಂಬಂಧ ಭಂಗಗೊಂಡರೆ ಇಲ್ಲವಾಗುತ್ತದೆ. ಬೆಂಕಿಯನ್ನು ಹೊರಗಿನ ಯಾವುದೋ ಶಕ್ತಿ ನಿರ್ಮಿಸುತ್ತದೆ ಎನ್ನುವುದನ್ನು ದೀರ್ಘಕಾಲದಿಂದ ನಂಬಿಸಲಾಗಿದೆಯೇ ಹೊರತು ಅದು ವಾಸ್ತವಿಕ ಸತ್ಯವಲ್ಲ.ಆಗುವ, ಇಲ್ಲವಾಗುವ ನಿರಂತರ ವಸ್ತುಪ್ರಪಂಚದಂತೆಯೇ ಇಲ್ಲಿ ಎಲ್ಲವೂ ಉಂಟಾಗುವಿಕೆಗಳು ಮಾತ್ರ. ಸಾಹಿತ್ಯದ ಪ್ರತಿಯೊಂದು ರಚನೆಯ ಹಿಂದೆಯೂ ಹೀಗೆ ಕಾರಣ ಪರಿಣಾಮಗಳ ಸಂಬಂಧವಿದ್ದು ಅದಕ್ಕೆ ಅನುಗುಣವಾದ ಪರಿಣಾಮ ಉಂಟಾಗುತ್ತದೆ. ಹಾಗಾಗಿ ಸಾಹಿತ್ಯವೊಂದರ ಅಧ್ಯಯನವೆಂದರೆ ಅದರ ಹಿಂದಿರುವ ಕಾರಣ ಪರಿಸ್ಥಿತಿಗಳು ಮತ್ತು ಅದು ಉಂಟುಮಾಡಿದ ಪರಿಣಾಮಗಳ ಅಧ್ಯಯನವೇ ಆಗಿರುತ್ತದೆ.

ಬುದ್ಧಗುರು ಈ ಜಗತ್ತಿನಲ್ಲಿ ಎಲ್ಲವೂ ಸದಾ ಬದಲಾಗುತ್ತಲೇ ಇರುತ್ತದೆ, ಬದಲಾವಣೆಗೆ ಒಳಗಾಗದಿರುವುದು ಯಾವುದೂ ಇಲ್ಲವೆಂದನು. ವಿಜ್ಞಾನವೂ ಲೋಕವನ್ನು ಸದಾ ಆಗುತ್ತಲೇ ಇರುವ, ಬದಲಾಗುತ್ತಲೇ ಇರುವ ಪ್ರಕ್ರಿಯೆ ಎನ್ನುತ್ತದೆ. ಲೋಕದ ಸಮಸ್ತವೂ ಹೀಗೆ ನಿರಂತರವಾದ ಆಗುವಿಕೆಯೇ ಆಗಿರುತ್ತದೆ ಎಂಬ ನಿಲುವಿನ ಪ್ರಕ್ರಿಯಾ ಮೀಮಾಂಸೆಯ ಪ್ರಕಾರ:

೧. ಈ ಲೋಕಕ್ಕೆ ಆದಿ ಅಂತ್ಯಗಳಿಲ್ಲ. ಇದಕ್ಕೆ ಹೊರತಾದ ಮತ್ತೊಂದು ಮೂಲವಿಲ್ಲ.

೨. ಇಲ್ಲಿ ಆಗಿ ಇರುವುದು ಯಾವುದೂ ಇಲ್ಲ; ಎಲ್ಲವೂ ಆಗುತ್ತಲೇ ಹೋಗುತ್ತವೆ.

೩. ಸ್ವತಂತ್ರ ಅಸ್ತಿತ್ವ, ಆತ್ಮ ಎನ್ನುವುದು ಯಾವುದಕ್ಕೂ ಇಲ್ಲ; ಎಲ್ಲವೂ ಅನೇಕ ಪ್ರತ್ಯಯಗಳು (ಅಂಶಗಳು) ಸೇರಿ ಆಗುತ್ತಿರುವ ಪ್ರಕ್ರಿಯೆ ಮಾತ್ರ.

೪. ಎಲ್ಲವೂ ಸಂಬಂಧದಲ್ಲಿ ಉಂಟಾಗಿ ಸಂಬಂಧ ಭಂಗಗೊಂಡಾಗ ನಿರಸನಗೊಳ್ಳುತ್ತವೆ (ಇಲ್ಲವಾಗುತ್ತವೆ).

೫. ಈ ವಸ್ತುಪ್ರಪಂಚವು ಸದಾ ಹರಿಯುತ್ತಿರುವ ಪ್ರವಾಹ; ಎಲ್ಲವೂ ನಿರಂತರ ಬದಲಾಗುತ್ತ ಹೋಗುತ್ತವೆ.

೬. ನಿಲುಗಡೆಯಿಲ್ಲದ ಲೋಕಚಲನೆಯಲ್ಲಿ ಆತ್ಮ (ವಸ್ತುವೊಂದರ ಒಳಗಿರುವ ಸ್ವತಂತ್ರ ಸಂಗತಿ) ಎಂದು ಕರೆಯಬಹುದಾದ ಯಾವುದೂ ಇಲ್ಲ.

ಮೇಲಿನ ಎಲ್ಲ ನಿಲುವುಗಳಿಗೂ ವಿಜ್ಞಾನದ ಸಮರ್ಥನೆ ಇದೆ. ದೀರ್ಘಕಾಲದ ಕನ್ನಡ ಸಾಹಿತ್ಯದಲ್ಲಿ ಈ ನಿಲುವುಗಳು ವ್ಯಕ್ತವಾಗುತ್ತ ಬಂದಿದ್ದರೂ, ಭಾರತೀಯ ಕಾವ್ಯ ಮೀಮಾಂಸೆಯ ಇರುವಿಕೆಯ ಮತ್ತು ಹೊರಗಿನ ಶಕ್ತಿಯ ಲೋಕದಲ್ಲಿರುವ

ಎಲ್ಲವೂ ಸದಾ ಆಗುತ್ತಲೇ ಇರುವ ಪ್ರಕ್ರಿಯೆ ಮಾತ್ರ ಎನ್ನುವ ಆಗುವಿಕೆಯ ನಿಲುವು ಕನ್ನಡ ಕಾವ್ಯಮೀಮಾಂಸೆಯ ಪ್ರಧಾನ ನಿಲುವು. ಈ ನೆಲದ ಅನೇಕ ಶ್ರಮಣಧಾರೆಗಳು ಇದೇ ನಿಲುವಿನ ಮೂಲಕ ಲೋಕವನ್ನು ವಿವರಿಸಿವೆ. ಬೌದ್ಧ ಮಧ್ಯಮಮಾರ್ಗ ಮತ್ತು ಅಲ್ಲಮ ಮುಂತಾದ ವಚನಕಾರರ ಹಾಗೂ ಕನ್ನಡದ ಅನೇಕ ಅನುಭಾವೀ ಪಂಥಗಳ ಶೂನ್ಯತೆ ಅಥವಾ ಬಯಲ ತತ್ವವು ಪ್ರಕ್ರಿಯಾ ಮೀಮಾಂಸೆಯನ್ನು ಮುಂದಿಡುತ್ತವೆ.ಅಲ್ಲಿ ಸಂಯೋಜನೆಗಳು ಮಾತ್ರ ನಿರಂತರವಾಗಿ ಸಾಧ್ಯವಾಗುತ್ತಿರುತ್ತವೆ. ಉದಾಹರಣೆಗೆ; ಹಣ್ಣು– ಬೀಜ–ಮೊಳಕೆ–ಸಸಿ–ಮರ–ಹೂ–ಹೀಚು–ಕಾಯಿ–ಹಣ್ಣು–ಬೀಜ–ಮೊಳಕೆ–ಸಸಿ ಇದೊಂದು ಪ್ರವಾಹಸರಣಿ.ಮೊದಲನೆಯದಾಗಿ ಈ ಸರಣಿಯಲ್ಲಿ ಪ್ರಾರಂಭದ ಹಂತವೆಂದಾಗಲೀ ಕೊನೆಯ ಹಂತವೆಂದಾಗಲೀ ಯಾವುದನ್ನೂ ಗುರುತಿಸಲಾಗದು.ಕೋಳಿ ಮೊದಲೋ ಮೊಟ್ಟೆ ಮೊದಲೋ? ಬೀಜ ಮೊದಲೋ ವೃಕ್ಷ ಮೊದಲೋ? ಎನ್ನುವ ಪ್ರಶ್ನೆಗಳೇ ಅರ್ಥಹೀನವಾದವು. ಯಾಕೆಂದರೆ ಎಲ್ಲದಕ್ಕೂ ಆರಂಭವೊಂದಿರಬೇಕು ಎನ್ನುವ ನಿಲುವಿನಿಂದ ಇಂತಹ ಪ್ರಶ್ನೆಗಳು ಹುಟ್ಟುತ್ತವೆ. ಆರಂಭ ಅಂತ್ಯವೆನ್ನುವುದು ಇಲ್ಲದ ಲೋಕದ ಹರಿವಿನಲ್ಲಿ ಬದಲಾವಣೆ ಉಂಟೇ ಹೊರತು ಬದಲಾಗದ ಯಾವುದೂ ಇಲ್ಲ ಎನ್ನುವುದೇ ಸರಿಯಾದ ಲೋಕವಿವರಣೆ.

ಮೊಳಕೆ ಎನ್ನುವುದು ಬೀಜ ಎನ್ನುವ ಕಾರಣ ಮತ್ತು ಮೊಳೆಯಲು ಬೇಕಾದ ಪರಿಸ್ಥಿತಿಯ ಸಂಯೋಗದ ಪರಿಣಾಮವಾಗಿದೆ. ಹಾಗೆಯೇ ಸಸಿ ಎನ್ನುವುದು ಮೊಳಕೆ ಎನ್ನುವ ಕಾರಣ, ಅಗತ್ಯವಿರುವ ಮಣ್ಣು ಶಾಖ ಇತ್ಯಾದಿ ಪರಿಸ್ಥಿತಿಯ ಸಂಯೋಗದಿಂದ ಉಂಟಾದ ಪರಿಣಾಮವಾಗಿದೆ. ಈ ಸರಣಿಯಲ್ಲಿ ಯಾವುದೂ ಯಾವ ಹಂತದಲ್ಲಿಯೂ ಸ್ವತಂತ್ರವಲ್ಲ. ಬೀಜವೆನ್ನುವುದು ಮೊಳಕೆ ಎನ್ನುವ ಪರಿಣಾಮಕ್ಕೆ ಕಾರಣವೂ ಹೌದು, ಹಣ್ಣು ಎನ್ನುವ ಕಾರಣಕ್ಕೆ ಪರಿಣಾಮವೂ ಹೌದು. ಹಾಗೆಯೇ ಮೊಳಕೆ ಎನ್ನುವುದು ಸಸಿಯೆನ್ನುವ ಪರಿಣಾಮಕ್ಕೆ ಕಾರಣವೂ ಹೌದು, ಬೀಜ ಎನ್ನುವ ಕಾರಣಕ್ಕೆ ಪರಿಣಾಮವೂ ಹೌದು. ಇಲ್ಲಿ ಯಾವ ಹಂತವನ್ನೂ ಸ್ಥಗಿತಗೊಳಿಸಿ ನೋಡಲು ಸಾಧ್ಯವಿಲ್ಲ. ಇದು ಕೇವಲ ಅಧ್ಯಯನದ ಅಗತ್ಯಕ್ಕೆ ಮಾಡಿಕೊಂಡ ಕಾಲ್ಪನಿಕ ವಿಭಜನೆಯೇ ಹೊರತು, ಈ ವಿಭಜನೆಯು ನಿಜ ಲೋಕಪ್ರವಾಹದಲ್ಲಿ ಸಾಧ್ಯವಿಲ್ಲ. ಉದಾಹರಣೆಗೆ ಹಾಲು ಮೊಸರಾಗುವ ಪ್ರಕ್ರಿಯೆ ಇದೆಯೇ ಹೊರತು ಹಾಲು, ಮೊಸರು ಎನ್ನುವ ಸ್ಥಗಿತ ಅವಸ್ಥೆಯಾಗಲೀ, ಹಾಲು ಮೊಸರಾಗುವ ನಿರ್ದಿಷ್ಟ ಕ್ಷಣವಾಗಲೀ ಎಂದೂ ದೊರೆಯದು.ಯುವಕ ಮುದುಕನಾಗುವ ಪ್ರಕ್ರಿಯೆ ಇದೆಯೇ ಹೊರತು ಯಾವಾಗ ಮುದುಕನಾದ? ಎನ್ನುವ ಪ್ರಶ್ನೆಗೆ ಉತ್ತರವಿಲ್ಲ. ಯುವಕ, ವೃದ್ಧ ಎನ್ನುವ ಸ್ವತಂತ್ರ ಸ್ಥಗಿತ ಅವಸ್ಥೆಗಳೂ ಇಲ್ಲ. ಯುವಕನಿದ್ದಾನೆ ಅವನು ಮುದುಕನಾಗುತ್ತಾನೆ, ಅದರಲ್ಲಿ ಏನು ವಿಶೇಷ? ಮುಂತಾಗಿ ಪ್ರಶ್ನೆಗಳನ್ನೆತ್ತುತ್ತಾ ಅವೆಲ್ಲ ಶಾಶ್ವತ ಪದಾರ್ಥಗಳೆಂದು ಲೋಕವನ್ನು ವಿವರಿಸಿಕೊಟ್ಟ ಮೀಮಾಂಸಾ ಪ್ರಸ್ಥಾನಗಳನ್ನು ಪ್ರಕ್ರಿಯಾ ಮೀಮಾಂಸೆಯು ನಿರಾಕರಿಸುತ್ತದೆ.ತಾನು ಮತ್ತು ಇದಿರನ್ನು, ಶಬ್ದ ಮತ್ತು ಅರ್ಥಗಳ ಸಂಬಂಧವನ್ನು ಹಾಗೂ ಪ್ರಕ್ರಿಯೆಯ ಸಂಬಂಧ ಸ್ವರೂಪವನ್ನು ವ್ಯಾಖ್ಯಾನಿಸಿಕೊಳ್ಳಬೇಕಾದ ಕ್ರಮ ಇದೇ ಆಗಿದೆ.

ಅನೇಕಾಂತವಾದ:

"ನಾಗಸೇನ: ಉಪ್ಪನ್ನು ತಕ್ಕಡಿಯಲ್ಲಿ ತೂಗಬಹುದೆ ಮಹಾರಾಜ?

ಮಿಲಿಂದ: ತೂಗಲು ಸಾಧ್ಯವಿದೆ ಭನ್ತೇ.

ನಾಗಸೇನ: ಇಲ್ಲ ಮಹಾರಾಜ. ತಕ್ಕಡಿಯಲ್ಲಿ ತೂಗಲು ಸಾಧ್ಯವಿರುವುದು ಉಪ್ಪಿನ ಭಾರವನ್ನು ಮಾತ್ರ. ಅದರ ಬಣ್ಣವನ್ನು, ರುಚಿಯನ್ನು ತಕ್ಕಡಿಯಲ್ಲಿ ತೂಗಲು ಸಾಧ್ಯವಿಲ್ಲ.

ಮಿಲಿಂದ: ನೀನು ಜಾಣ ಭನ್ತೇ."

ಇದು 'ಮಿಲಿಂದ ಪನ್ಹ' ಎಂಬ ಬೌದ್ಧ ತಾತ್ವಿಕ ಕೃತಿಯ ಒಂದು ಮಾತುಕತೆ.ವಸ್ತುಸಂಗತಿಯೊಂದನ್ನು ಇಡಿಯಾಗಿ ಒಂದೇ ಎಂದು ನೋಡುವುದು ಅಥವಾ ಅದರಲ್ಲಿ ಕೂಡಿರುವ ಅಂಶಗಳನ್ನು ಬೇರೆಬೇರೆಯಾಗಿ ನೋಡುವುದು - ಇವೆರಡೂ ಭಿನ್ನ ದೃಷ್ಟಿಕೋನಗಳು. ಶ್ರಮಣಧಾರೆಗಳು ಲೋಕವನ್ನು ಸರಿಯಾಗಿ ಇದಿರಾಗುವ ಕ್ರಮವನ್ನು ತೋರಿಸಿಕೊಡುವ ಪ್ರಯತ್ನ ಮಾಡಿದವು.ಅವುಗಳಲ್ಲಿ ಜೈನರ ಅನೇಕಾಂತವಾದಿ ನಿಲುವು ಪ್ರಮುಖವಾದುದು.

ಅನೇಕಾಂತವಾದಿ ದೃಷ್ಟಿಕೋನ ಬೌದ್ಧಕಾವ್ಯ ಮೀಮಾಂಸೆಯ ಒಂದು ಪ್ರಮುಖ ಪರಿಕಲ್ಪನೆ. ಇದನ್ನು ಜೈನರು ಸ್ಯಾತ್-ವಾದ (ಸ್ಯಾದ್ವಾದ)ಎಂದು ಕೂಡ ಸೂಚಿಸುತ್ತಾರೆ. 'ಸ್ಯಾತ್' ಎನ್ನುವುದು ವಿಶೇಷ ಅರ್ಥಸೂಚಕ ಪದ.ಸಂಸ್ಕೃತದಲ್ಲಿ ಇದು 'ಇರಬಹುದು' ಎಂಬುದನ್ನು ಸೂಚಿಸುತ್ತದೆ. ಅನೇಕಾಂತವಾದದ ನಿಲುವನ್ನು ಪ್ರತಿಪಾದಿಸುವಾಗ ಈ ಪದವನ್ನು ಒಂದು ವಿಶೇಷಾರ್ಥಕ್ಕಾಗಿ ಬಳಸಲಾಗಿದೆ. 'ಒಂದರ್ಥದಲ್ಲಿ ನಿಜ' ಎಂದು ಹೇಳಲು ಬಳಸಿದ ಪದ. ಜೈನರು ಸತ್ಯದ ಸ್ವರೂಪವನ್ನು ಏಳು ಹಂತಗಳಲ್ಲಿ ನಿರೂಪಿಸುತ್ತಾರೆ. ಅದನ್ನು 'ಸಪ್ತಭಂಗೀನ್ಯಾಯ' ಎಂದು ಕರೆದಿದ್ದಾರೆ.ಲೋಕವನ್ನು ಏನೆಂದು ವಿವರಿಸಿಕೊಳ್ಳಬೇಕು? ಈ ಪ್ರಶ್ನೆಗೆ ಇರುವ ಉತ್ತರದ ಸಾಧ್ಯತೆಗಳು ಅವರ ದೃಷ್ಟಿಯಲ್ಲಿ ಏಳು. ಅವುಗಳೆಂದರೆ:

೧. ಒಂದರ್ಥದಲ್ಲಿ ಇದೆ. (ಸ್ಯಾತ್ ಅಸ್ತಿ)

೨. ಒಂದರ್ಥದಲ್ಲಿ ಇಲ್ಲ. (ಸ್ಯಾತ್ ನಾಸ್ತಿ)

೩. ಒಂದರ್ಥದಲ್ಲಿ ಇದೆ ಇಲ್ಲ ಎರಡೂ ಹೌದು. (ಸ್ಯಾತ್ ಅಸ್ತಿ ನಾಸ್ತಿ)

೪. ಒಂದರ್ಥದಲ್ಲಿ ಅದನ್ನು ವ್ಯಕ್ತಪಡಿಸಲು ಸಾಧ್ಯವಿಲ್ಲ. (ಸ್ಯಾತ್ ಅವಕ್ತವ್ಯಃ)

೫. ಒಂದರ್ಥದಲ್ಲಿ ಇರುವ ಅದನ್ನು ವ್ಯಕ್ತಪಡಿಸಲು ಸಾಧ್ಯವಿಲ್ಲ. (ಸ್ಯಾತ್ ಅಸ್ತಿ ಚ ಅವಕ್ತವ್ಯಃ )

೬. ಒಂದರ್ಥದಲ್ಲಿ ಇಲ್ಲದಿರುವ ಅದನ್ನು ವ್ಯಕ್ತಪಡಿಸಲು ಸಾಧ್ಯವಿಲ್ಲ. (ಸ್ಯಾತ್ ನಾಸ್ತಿ ಚ ಅವಕ್ತವ್ಯಃ )

೭. ಒಂದರ್ಥದಲ್ಲಿ ಇರುವ, ಇಲ್ಲದಿರುವ ಅದನ್ನು ವ್ಯಕ್ತಪಡಿಸಲು ಸಾಧ್ಯವಿಲ್ಲ. (ಸ್ಯಾತ್ ಅಸ್ತಿ ಚ ನಾಸ್ತಿ ಚ ಅವಕ್ತವ್ಯಃ)

ಈ ನಿಲುವಿನಲ್ಲಿರಬಹುದಾದ ತಾರ್ಕಿಕ-ಸ್ವವಿರೋಧವನ್ನು ಮುಂದಿಟ್ಟುಕೊಂಡು

ಅನೇಕ ಪ್ರಸ್ಥಾನಗಳು ಈ ತಾತ್ವಿಕತೆಯನ್ನು ತೀವ್ರವಾಗಿ ಪ್ರಶ್ನಿಸಿದ್ದಿದೆ. ಆ ವಿವರಗಳು ಇಲ್ಲಿ ಅನಗತ್ಯವಾಗಿದ್ದು, ಕಾವ್ಯ ಮೀಮಾಂಸೆಯ ದೃಷ್ಟಿಯಿಂದ ಈ ನಿಲುವು ಉಂಟುಮಾಡಿದ ಪ್ರಮುಖ ಪಲ್ಲಟಗಳನ್ನು ಮಾತ್ರ ಇಲ್ಲಿ ಗಮನಿಸಬಹುದು. ಅನೇಕಾಂತವಾದದ ಪ್ರಮುಖ ಲಕ್ಷಣಗಳೆಂದರೆ:

೧. ಏಕಮೂಲವಾದದ ನಿರಾಕರಣೆ

೨. ವಸ್ತುನಿಷ್ಠತೆಯನ್ನು ನಿರಾಕರಿಸಿದ ವ್ಯಕ್ತಿನಿಷ್ಠತೆ

೩. ಸಿದ್ಧ ಸತ್ಯದ ನಿರಾಕರಣೆ

೪ ಆದಿ ಅಂತ್ಯದ ನಿರಾಕರಣೆ

ಅನೇಕಾಂತವಾದದ ನಿಲುವನ್ನು ಸರಳೀಕರಿಸಿ ವಿವರಿಸುವುದಾದರೆ, ಸತ್ಯವು ಸ್ವಭಾವತ: ತೀರ ಅನಿರ್ದಿಷ್ಟವಾದದ್ದು. ಅಂದರೆ ವಿಶ್ವವನ್ನು ಅನೇಕ ದೃಷ್ಟಿಗಳಿಂದ ನೋಡಬಹುದು.ಪ್ರತಿಯೊಂದು ದೃಷ್ಟಿಯೂ ಪ್ರತ್ಯೇಕವಾದ ನಿರ್ಣಯಕ್ಕೆ ತಲುಪಿಸುತ್ತದೆ.ಯಾವ ನಿರ್ಣಯವೂ ಪೂರ್ಣ ಸತ್ಯವಲ್ಲ; ಹಾಗೆಂದು ಸುಳ್ಳೂ ಅಲ್ಲ. ಲೋಕಾನುಸಂಧಾನವು ಕುರುಡರು ಆನೆಯನ್ನು ಕಂಡರಿಸಿದಂತೆ.ಅವರು ಆನೆಯ ಯಾವ ಭಾಗವನ್ನು ಮುಟ್ಟಿಕಂಡರೋ ಅದು ಮಾತ್ರ ಆನೆಯಲ್ಲ; ಹಾಗೆಂದು ಅದು ಆನೆಯಲ್ಲವೆಂದೂ ಹೇಳಲಾಗದು.ಯಾರು ಕಂಡದ್ದೂ ಪೂರ್ಣ ನಿಜವಲ್ಲ. ಹಾಗೆಂದು ಸುಳ್ಳೂ ಅಲ್ಲ. ಎಲ್ಲ ಗ್ರಹಿಕೆಗಳೂ ಅಪೂರ್ಣ ಮತ್ತು ಪಾರ್ಶ್ವಿಕವಾಗಿರಲು ಮಾತ್ರ ಸಾಧ್ಯ. ಅಂದರೆ ಯಾವುದೇ ಒಂದು ನಿಲುವಿನಿಂದ ಸತ್ಯವು ದೊರಕುವುದಿಲ್ಲ. ಸತ್ಯವು ಸ್ವರೂಪತಃ ಜಟಿಲ ಮತ್ತು ಅನಂತ. ಆಧುನಿಕ ಚಿಂತಕರಾದ ಫೂಕೋ ಮತ್ತು ಡೆರಿಡಾ ಸಹ ಸತ್ಯದ ಕುರಿತು, ಅರ್ಥದ ಕುರಿತು ಈ ನಿಲುವುಗಳನ್ನು ಮುಂದಿಡುತ್ತಾರೆ.

ಯಾವ ಕೃತಿಯೂ ಸಿದ್ಧವಾಗಿ ಇರುವುದಿಲ್ಲ

ಪ್ರತಿಯೊಂದು ಕೃತಿಯೂ ಓದಿನಲ್ಲಿ ಸಿದ್ಧವಾಗುತ್ತಾ ಹೋಗುತ್ತದೆಯೇ ವಿನಾ ಈಗಾಗಲೇ ಸಿದ್ಧವಾಗಿರುವ ಕೃತಿ ಎಂಬುದಿರುವುದಿಲ್ಲ. ಕೃತಿ ಸಿದ್ಧವಾಗುವುದೇ ಓದುಗನಲ್ಲಿ/ಕೇಳುಗನಲ್ಲಿ. ಹಾಗಾದರೆ 'ಕೃತಿಗೆ' ಎಷ್ಟು ಪಠ್ಯಗಳಿವೆ? ಅಸಂಖ್ಯ. ಎಷ್ಟು ಓದುಗರೋ ಅಷ್ಟು; ಎಷ್ಟು ಓದುಗಳೋ ಅಷ್ಟು! ಪ್ರತಿ ಓದು ಕೂಡ ಓದುವ ವ್ಯಕ್ತಿ ಮತ್ತು ಸಂದರ್ಭಕ್ಕನುಗುಣವಾಗಿ ಪಠ್ಯವೊಂದನ್ನು ಸೃಷ್ಟಿಸುತ್ತಾ ಹೋಗುತ್ತದೆ. ಹಾಗಾದರೆ ಮುದ್ರಿತವಾಗಿರುವ ಕಣ್ಣೆದುರಿನ ಕೃತಿಯನ್ನು ಏನೆಂದು ಭಾವಿಸುವುದು? ಹೆಚ್ಚೆಂದರೆ ಅದನ್ನು ಸಾಪೇಕ್ಷ ಪಠ್ಯವೆನ್ನಬಹುದು.ಅಂದರೆ ಅದು ಉಂಟಾಗಲು ಓದು ಮತ್ತು ಓದುವ ಸಂದರ್ಭ ಎರಡೂ ಅತ್ಯಗತ್ಯ. ಈ ಎರಡು ಅಂಶಗಳು ಒದಗಿ ಬಾರದಿದ್ದರೆ ಆ ಕೃತಿ ಉಂಟಾಗಲು ಸಾಧ್ಯವೇ ಇಲ್ಲ! ಇದು ಅನೇಕಾಂತವಾದದ ಪ್ರಮುಖ ನಿಲುವು.ಲೋಕವನ್ನು ಪರಿಭಾಷಿಸುವ ಒಂದು ಕ್ರಮ. ಹೀಗೆ ವಸ್ತುನಿಷ್ಠತೆಯಿಂದ ವ್ಯಕ್ತಿನಿಷ್ಠತೆಯ ಕಡೆಗೆ ಲೋಕಗ್ರಹಿಕೆಯ ಕ್ರಮವನ್ನು ಅದು ಪಲ್ಲಟಿಸಿತು. ಅಂದರೆ ಪಠ್ಯ ಉಂಟಾಗುವುದು ಓದುಗನ ತುದಿಯಲ್ಲಿಯೇ ಹೊರತು ಪಠ್ಯದಲ್ಲೂ ಅಲ್ಲ ಕವಿಯಲ್ಲೂ ಅಲ್ಲ. ಅರ್ಥವೆನ್ನುವುದು ಈಗಾಗಲೇ ಇರುವುದಲ್ಲ, ಬದಲಿಗೆ

ಕಟ್ಟಬೇಕಾದದ್ದು. ಅಲ್ಲಮಪ್ರಭು ಇದನ್ನು 'ಪದವನರ್ಪಿಸಬಹುದಲ್ಲದೆ ಪಧಾರ್ಥವನರ್ಪಿಸಬಾರದು' ಎನ್ನುತ್ತಾನೆ.

ಲೋಕವನ್ನು ಏಕವಾಗಿ ಗ್ರಹಿಸಲು ಸಾಧ್ಯವಿಲ್ಲವೆಂಬ ನಿಲುವು ಅನೇಕ ಪರಿಣಾಮಗಳನ್ನುಂಟು ಮಾಡುತ್ತದೆ. ಮೊದಲಿಗೆ ಸತ್ಯವೆನ್ನುವುದು ಸ್ವಭಾವತ: ತೀರ ಅನಿರ್ದಿಷ್ಟವಾದದ್ದು ಎಂಬ ಸಂಗತಿಯನ್ನು ಅದು ಮುಂದಿಡುತ್ತದೆ. ಅನೇಕ ದಿಕ್ಕುಗಳಿಂದ ಒಂದು ಸಂಗತಿಯನ್ನು ನೋಡಿದಾಗ ಕಂಡ ನೋಟವು ಪೂರ್ಣ ಸತ್ಯವಲ್ಲ; ಹಾಗೆಯೇ ಅದು ಸುಳ್ಳೂ ಅಲ್ಲ. ಇದರ ಅರ್ಥ, ವಿಶ್ವವನ್ನು ಅನೇಕ ದೃಷ್ಟಿಗಳಿಂದ ನೋಡಬಹುದು ಮತ್ತು ಪ್ರತಿಯೊಂದು ದೃಷ್ಟಿಯೂ ಪ್ರತ್ಯೇಕವಾದ ಪರಿಣಾಮಕ್ಕೆ ಒಯ್ಯುತ್ತದೆ ಎಂದಾಗುತ್ತದೆ.ಒಂದು ವಸ್ತುವನ್ನು ಕುರಿತು ಹೇಳುವಾಗ ಅದು ದೇಶ, ಕಾಲ, ಸ್ಥಿತಿ ಇವುಗಳಿಗೆ ಸಂಬಂಧಪಟ್ಟಂತೆ ಏನಾಗಿದೆ ಎಂಬುದನ್ನು ನಿರೂಪಿಸಬೇಕು.ಇದು ವಸ್ತುವೊಂದು 'ಹೇಗೆ ಇದೆ' ಎಂಬುದನ್ನು ನಿರಾಕರಿಸಿ 'ಹೇಗೆ ಕಾಣಿಸುತ್ತದೆ' ಎಂಬುದನ್ನು ಮುಂದಿಟ್ಟಿತು.

ಹೀಗಾಗಿ ಅಲ್ಲಿ ಮೂಲಕಾವ್ಯ, ಮೂಲಪಠ್ಯವೆಂಬ ನಿಲುವಿಲ್ಲ. ಆತ್ಮವಾದಿ ಮೀಮಾಂಸೆಯ ಪ್ರಧಾನ ನಿಲುವಾದ 'ಏಕಮೂಲವಾದ' ಮತ್ತು 'ಇರುವಿಕೆ'ಯ ನಿರಾಕರಣೆಯಿದೆ.ಯಾವುದೇ ಕಾವ್ಯದ, ಕಲೆಯ ಪಠ್ಯ ಕಟ್ಟಲ್ಪಡಬೇಕೇ ಹೊರತು ಸಿದ್ಧವಾಗಿ ಇರುವುದಿಲ್ಲ. ಹಾಗಾಗಿ ಮೂಲಪಠ್ಯವೆನ್ನುವುದೇ ಇಲ್ಲಿ ಮೊದಲು ನಿರಾಕರಿಸಬೇಕಾಗಿರುವುದು. ಹಾಗೆಯೇ ಅಂತಿಮಪಠ್ಯವೆನ್ನುವುದೂ ಅಷ್ಟೇ.ಅದೂ ಎಂದೂ ಸಿದ್ಧವಾಗಿ ಇರುವುದಿಲ್ಲ. 'ಮಲೆಗಳಲ್ಲಿ ಮದುಮಗಳು' ಎನ್ನುವ ಹೆಸರಿನ 'ಒಂದು' ಪಠ್ಯವೆನ್ನುವುದು ಎಂದೂ ಇರಲಾರದು ಮತ್ತು ಅದು 'ಆಗಿ ಇರುವ' ಕೃತಿಯಲ್ಲ. ಅದು ಎಂದಿಗೂ ಆಗುತ್ತಲೇ ಇರುವ ಪಠ್ಯ.ಒಬ್ಬೊಬ್ಬನ ಓದಿನಲ್ಲೂ, ಒಂದೊಂದು ಕಾಲದ ಒಂದೊಂದು ಓದಿನಲ್ಲೂ ಅದು ಆಗುತ್ತಲೇ ಇರುತ್ತದೆ. ಒಬ್ಬನೇ ಬೇರೆ ಬೇರೆ ಕಾಲ ಸಂದರ್ಭಗಳಲ್ಲಿ ಅದನ್ನು ಓದಿದಾಗ ಉಂಟಾಗುವ ಪಠ್ಯಗಳು ಒಂದೇ ಇರಲು ಸಾಧ್ಯವಿಲ್ಲ. ಉದಾಹರಣೆಗೆ ಆ ಕಾದಂಬರಿಯನ್ನು ಬಾಲ್ಯದಲ್ಲಿ ಓದಿದಾಗ ಉಂಟಾದ ಪಠ್ಯ, ಯೌವನದಲ್ಲಿ ಓದಿದಾದ ಉಂಟಾದ ಪಠ್ಯ, ವೃದ್ಧಾಪ್ಯದಲ್ಲಿ ಓದಿದಾಗ ಉಂಟಾದ ಪಠ್ಯಗಳು ಒಂದೇ ಆಗಿರಲು ಸಾಧ್ಯವಿಲ್ಲ. ಹಾಗೆಯೇ ಪೂರ್ತಿಯಾಗಿ ಬೇರೆ ಬೇರೆ ಇರಲೂ ಸಾಧ್ಯವಿಲ್ಲ!. ಆಯಾ ವಯೋಸನ್ನಿವೇಶಕ್ಕೆ ಅನುಗುಣವಾಗಿ ಪಠ್ಯಗಳು ಉಂಟಾಗುತ್ತ ಹೋಗುತ್ತವೆ. ಇನ್ನು ನೂರು ವರ್ಷಗಳ ನಂತರ ಮಲೆಗಳಲ್ಲಿ ಮದುಮಗಳನ್ನು ಓದುವ ಒಬ್ಬ ಕಂಪ್ಯೂಟರ್ ತಂತ್ರಜ್ಞನು ಕಟ್ಟಿಕೊಳ್ಳಬಹುದಾದ ಪಠ್ಯವನ್ನು ಕಲ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಹೀಗೆ ನಿಸರ್ಗಸಹಜವಾದ ವಿವೇಕವನ್ನು ಮುಂದಿಡುವ ಈ ಜೈನ ಅನೇಕಾಂತವಾದಿ ತಾತ್ವಿಕತೆಯನ್ನು ಕೇವಲ ಒಂದು ಆಂಶಿಕ ನಿರೂಪಣೆಯ ಸಂಗತಿಯಾಗಿ ನೋಡಲು ಸಾಧ್ಯವಿಲ್ಲ.

ಪಂಪ ವಿಕ್ರಮಾರ್ಜುನ ವಿಜಯವನ್ನು ಕರ್ಣರಸಾಯನ ಎನ್ನುತ್ತಾನೆ. ನಿಜ. ಇದು ಕರ್ಣನ ಕತೆಯೂ ಹೌದು. ಕರ್ಣನಂತಹ ಅಪಮಾನಿತ ನೊಂದ ಜೀವದ

ಕತೆಯೂ ಹೌದು. ಹಾಗೆಯೇ ಇದು ಕೇಳಿಸಿಕೊಳ್ಳುವ ಕಿವಿಗೆ (ಕರ್ಣಕ್ಕೆ) ಸಂಬಂಧಿಸಿದ ಪಠ್ಯ. ಇದು ಕರ್ಣ(ಕಿವಿಯ)ಮೀಮಾಂಸೆ, ಕರ್ಣರಸಾಯನ. ಪಂಪ ರಸವನ್ನು ನಿರಾಕರಿಸುತ್ತಿಲ್ಲ. ಆದರೆ ಈ ರಸ ನಾಲಗೆಯಂತೆಯೇ ದೇಹದ ಭಾಗವಾದ ಕಿವಿಗೆ ದಕ್ಕುವ ರಸ. ಅಂದರೆ ಇಂದ್ರಿಯಕ್ಕೆ ದಕ್ಕುವ ರಸ. ಯಾವ ಮೀಮಾಂಸೆಯೂ ರಸವಿರೋಧಿಯಲ್ಲ; ಬೌದ್ಧ ಕಾವ್ಯಮೀಮಾಂಸೆ ಕೂಡ. ಆದರೆ ರಸಪ್ರತೀತಿ ಎಲ್ಲಿ ಉಂಟಾಗುತ್ತದೆ?ಎನ್ನುವುದು ಪ್ರಶ್ನೆ. ಹಲಗೆ ಬಳಪವ ಪಿಡಿಯದಗ್ಗಳಿಕೆಯ, ಹೇಳತೇನ ಕೇಳ - ಮೀಮಾಂಸಾ ಪರಿಕಲ್ಪನೆಗಳನ್ನು ದಾಟಿ, 'ಕಾವ್ಯ ಕಟ್ಟಿಕೊಳ್ಳಬೇಕಾದವನು ಕೇಳುಗ. ಅದು ಆತನ ಕರ್ಣಪ್ರಜ್ಞೆಗೆ ಬಿಟ್ಟ ಸಂಗತಿ. ಹೇಳುವುದೇನಿದ್ದರೂ ಸಾಪೇಕ್ಷ ಪಠ್ಯವಷ್ಟೆ, ಪರಿಣಾಮ ಪಠ್ಯ ಕೇಳುಗನದೇ. ಅಂತಿಮವಾಗಿ ಕಾವ್ಯಗಳು ಉಂಟಾಗುವುದು ಕೇಳುಗನ ತುದಿಯಲ್ಲೇ ಹೊರತು ಕವಿ ಅಥವಾ ಹೇಳುವವನ ತುದಿಯಲ್ಲಲ್ಲ. ರಸಪ್ರತೀಯುಂಟಾಗುವುದು ಕೇಳುಗನಲ್ಲೇ, ಆತನ ಸಂಸ್ಕಾರಕ್ಕನುಗುಣವಾಗಿ' ಎನ್ನುವ ಕೇಳುಗನ ಕರ್ಣಪ್ರಜ್ಞೆಯನ್ನು ಕವಿ ಗುರುತಿಸುತ್ತಿದ್ದಾನೆ. ಹಾಗಾಗಿ ಒಂದರ್ಥದಲ್ಲಿ ಭಾರತವೊಂದು ಕರ್ಣರಸಾಯನ. ಇಲ್ಲಿ ಅನೇಕ ಭಾರತಗಳಿವೆ; ಇರಲೇಬೇಕು. ಇದನ್ನು ಪ್ರವೇಶಿಸಲು ಒಂದಲ್ಲ ಅನೇಕ ಬಾಗಿಲುಗಳಿವೆ. ಇಲ್ಲಿ ಒಬ್ಬನಲ್ಲ ಅನೇಕರು ಇದ್ದಾರೆ. ಆಲದ ಮರದಂತೆ ಇದಕ್ಕೆ ಅನೇಕ ಮೂಲ, ಅನೇಕಾಂತ (ಅನೇಕ ತುದಿ). ಅದನ್ನೇ ಸೂಚಿಸುವ ಇನ್ನೊಂದು ಪದ್ಯ -

ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ।
ಬಲದೊಳ್ ಮದ್ರೇಶನತ್ಯುನ್ನತಿಯೊಳಮರ ಸಿಂಧೂದ್ಭವಂ ಚಾಪ ವಿದ್ಯಾ ॥
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ।
ರ್ಮಲ ಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ (ಪಂ.ಭಾ. ೧೪- ೬೪)

ಈ ಪದ್ಯ, ನೀನು ಯಾವ ಕಡೆಯಿಂದ ಭಾರತವನ್ನು ನೋಡುತ್ತೀಯ?ಎಂದು ಕೇಳುವಂತಿದೆ. ಕುಮಾರವ್ಯಾಸನಿಗೆ ಅದು ಒಂದು ಕತೆ- ಕೃಷ್ಣಕತೆ.ಕೃಷ್ಣನೇ ಮುಖ್ಯ. ಹಾಗೆ ನೋಡಿದರೆ ಮಾತ್ರ ಸರಿ ಎಂದು ಹೇಳುವುದು ಆತ ಅನುಸರಿಸಿದ ಕಾವ್ಯಮೀಮಾಂಸೆಗೆ ಒಪ್ಪಿಗೆಯಾಗುವ ಸಂಗತಿಯೆ ಆಗಿದೆ. ಆದರೆ ಅನೇಕ ಭಾರತಗಳನ್ನು ಮುಂದಿಡುವ ಪಂಪನಿಗೆ ಹಾಗೆ ಒಂದು ನಿಶ್ಚಿತ ಆಯಾಮ ಇರಲು ಸಾಧ್ಯವಿಲ್ಲ. ಹಾಗಾಗಿ ಅದನ್ನು ದುರ್ಯೋಧನನಿಂದ ಪ್ರಾರಂಭಿಸುವ ಮೂಲಕ ಆದಿಯಿಲ್ಲದ ಪ್ರವಾಹದಲ್ಲಿ ಮುಖ್ಯಾಮುಖ್ಯವೆಂಬ ವಿಂಗಡಣೆ ಸಾಧ್ಯವಿಲ್ಲ ಎಂಬ ಸೂಚನೆ ಪಂಪನಲ್ಲಿದೆ. ಈ ಪಟ್ಟಿಯನ್ನು ಸಮಗ್ರವೆಂದು ಭಾವಿಸಲು ಪಂಪನೂ ಒತ್ತಾಯಿಸಲಾರ.ಏಕೆಂದರೆ ಅನೇಕಾಂತವಾದವು ಯಾವ ನಿಲುವಿನ ನೋಟವೂ ಪಾರ್ಶ್ವಿಕವೇ ಹೊರತು ಪೂರ್ಣವೆನ್ನುವುದಾಗಲೀ, ಒಂದೇ ಸತ್ಯವೆನ್ನುವುದಾಗಲೀ ಇರಲು ಸಾಧ್ಯವೇ ಇಲ್ಲವೆನ್ನುವುದನ್ನು ಸ್ಪಷ್ಟಪಡಿಸಿಕೊಂಡೇ ಮುಂದಡಿಯಿಡುತ್ತದೆ.

ಇಲ್ಲಿ ಕೃಷ್ಣ ಯಾಕಿಲ್ಲ?ಎನ್ನುವ ಪ್ರಶ್ನೆಗೆ, ಯಾಕಿರಬೇಕು?ಎನ್ನುವುದೇ ಉತ್ತರ. ಹಾಗೆ ಕೇಳುವವರ್ಯಾರೂ ನಕುಲ ಸಹದೇವರು ಯಾಕಿಲ್ಲ? ಎಂದು ಕೇಳುವುದಿಲ್ಲವಲ್ಲ?ಅದಲ್ಲದೆ, ಮುಖ್ಯಾಮುಖ್ಯವೆಂಬ ಪೂರ್ವಗ್ರಹದೊಡನೆಯೇ ಈ ಪ್ರಶ್ನೆ ಕೇಳಲ್ಪಡುತ್ತದೆ.ಆದರೆ ಈ ಪಟ್ಟಿ ಶ್ರೇಣೀಕರಣವನ್ನಾಗಲೀ, ಕೆಲವರ ಗೈರುಹಾಜರಿಯ ಮೂಲಕ ಧಾರ್ಮಿಕ/ ಸಾಂಸ್ಕೃತಿಕ ರಾಜಕಾರಣವನ್ನಾಗಲೀ ಮಾಡುತ್ತಿದೆ ಎನ್ನಲು ಸಾಧ್ಯವಾಗುತ್ತಿಲ್ಲ, ಬದಲಿಗೆ 'ಇಲ್ಲಿ ಯಾರು ಮುಖ್ಯರೂ ಅಲ್ಲ, ಅಮುಖ್ಯರೂ ಅಲ್ಲ' ಎನ್ನುವ ನಿಲುವಿನ ಕಡೆಗೆ ಹೆಚ್ಚು ವಾಲುತ್ತಿದೆ ಎಂಬುದೇ ಸರಿಯೆನ್ನಿಸುತ್ತದೆ.ಇನ್ನೊಂದು ದಿಕ್ಕಿನಿಂದ, ಇವರೆಲ್ಲರೂ ಲೌಕಿಕರು ಮತ್ತು 'ಪುರುಷ ಪ್ರಯತ್ನವನ್ನು' ನಚ್ಚಿದವರು.ಕಡೆಯವರೆಗೂ ಅದನ್ನು ಬಿಟ್ಟುಕೊಡದೆ ಬಾಳಿದವರು, ಸತ್ತವರು.ಈ ಪುರುಷಪ್ರಯತ್ನವೇ ಲೋಕಪೂಜ್ಯವಾಗಬೇಕು ಎನ್ನುವ ಒಂದರ್ಥದ ಓದನ್ನು ಕೂಡ ನಡೆಸಲು ಸಾಧ್ಯ. ಹಾಗೆಯೇ ಪಂಪನ ಈ ಪಟ್ಟಿಯನ್ನೇ ಒಪ್ಪಿಕೊಂಡು ಕೂರದೆ ಇಲ್ಲಿ ದ್ರೌಪದಿ ಯಾಕಿಲ್ಲ? ಎಂಬ ಪ್ರಶ್ನೆಯನ್ನೂ ಎತ್ತಬಹುದು.ಈ ಪ್ರಶ್ನೆಯನ್ನು ಈವರೆಗಿನ ಸ್ತ್ರೀವಾದಿ ಓದುಗಳು ದೃಢವಾಗಿ ಮುಂದಿಟ್ಟಿವೆ. ಪಂಪನ ಪಠ್ಯಗಳನ್ನು ಪಠ್ಯವಾಗಿ ಬೋಧಿಸಿಕೊಂಡು ಬರುತ್ತಿರುವ ತರಗತಿಯ ಆವರಣದಲ್ಲಿ ಇನ್ನೂ ಗಂಡುಕವಿ, ಗಂಡು ಅಧ್ಯಾಪಕ ನೆಲೆನಿಂತು ಆಳುತ್ತಲೇ ಇದ್ದಾರೆ. ಹಾಗಾಗಿ ಪಂಪನ ಕಾವ್ಯದ ಅಸಂಪೂರ್ಣವಾದ ನೋಟಗಳು ಸಮಗ್ರವೆಂಬ ಹೆಸರಿನಲ್ಲಿ ಮತ್ತೆ ಮತ್ತೆ ಹುಟ್ಟುತ್ತಲೇ ಇವೆ. ರೂಪಕಗಳು ಸಿದ್ಧ ಅರ್ಥಗಳಾಗಿ ಪುನರುತ್ಪಾದನೆಗೊಳ್ಳುತ್ತಲೇ ಬರುತ್ತಿವೆ. ಈ ಪರಿಸ್ಥಿತಿ ಬದಲಾಗಬೇಕಾದರೆ ಇಲ್ಲಿಯವರೆಗೆ ಕನ್ನಡದ ವಿಮರ್ಶೆ ಕಣ್ಮುಚ್ಚಿ ಬಚ್ಚಿಟ್ಟುಕೊಂಡುಬಂದ ನಿರ್ವಾತವನ್ನು ತೋರಿದ ಪಂಪನಕಾವ್ಯಗಳ ಕುರಿತಾದ ಸ್ತ್ರೀವಾದಿ ಓದುಗಳನ್ನು ಚರ್ಚೆಯ ಕೇಂದ್ರಕ್ಕೆ ತಂದುಕೊಳ್ಳಬೇಕಾಗಿದೆ. ಆ ಮೂಲಕ ಹೆಣ್ತನದ ನಾಪತ್ತೆಗಳನ್ನು ಹುಡುಕಿ ಶೋಧಿಸಿಕೊಳ್ಳಬೇಕಾಗಿದೆ. ಹೀಗೆ ಓದಿನ ಹೊಸಕೋನಗಳು ಹೊಸ ಅರ್ಥಗಳನ್ನು ಹುಟ್ಟುಹಾಕುತ್ತವೆ.

ಕನ್ನಡದ ತತ್ವಪದಕಾರರು ಮತ್ತು ಜನಪದ ಮಹಾಕಾವ್ಯಗಳು ಈ ಅನೇಕಾಂತವಾದಿ ತಾತ್ವಿಕತೆಯನ್ನು ಗ್ರಹಿಸಿ ಅಭಿವ್ಯಕ್ತಿಸಿವೆ. ಕನ್ನಡದ ಬದುಕಿನ ಗುರುಸ್ವರೂಪಿಯಾದ ಶರೀಫ ಕೂಡ ಅದನ್ನು ಮುಂದಿಟ್ಟಿದ್ದಾನೆ.

ಬಿದಿರು ನಾನಾರಿಗಲ್ಲಾದವಳು
ಹುಟ್ಟುತ ಹುಲ್ಲಾದೆ ಬೆಳೆಯುತ ಮರವಾದೆ
ಸುಂದರ ಸ್ತ್ರೀಯರಿಗೆ ಕೇರುವ ಮರವಾದೆ //೧//
. . . . . .
ತಿಪ್ಪೆಯ ಕೆಳಗಿದ್ದೆ
ಅದರುದ್ದ ಬೆಳದಿದ್ದೆ
ಸಿದ್ಧರಾಮೇಶ್ವರನಿಗೆ ನಂದಿಯ ಕೋಲಾದೆ
ದೇಶದೊಳು ಶಿಶುನಾಳಾಧೀಶನ ಮಠದೊಳಗೆ

ಸಾಧೂರ ಕೈಯೊಳಗೆ ಏಕತಾರಿ ಕೊಳುವ್ಯಾದೆ . . .

ಇದೊಂದು ಬಿದಿರಿನ ಅನೇಕ ಉಪಯೋಗಗಳ ಪಟ್ಟಿಯಲ್ಲ. ಬಿದಿರು ಏನು ಎಂಬುದು ಅದರೊಡನೆ ಕಟ್ಟಿಕೊಳ್ಳುವ ನಮ್ಮ ಸಂಬಂಧದಲ್ಲಿ ತೀರ್ಮಾನವಾಗುತ್ತದೆಯೇ ಹೊರತು, ಅದಕ್ಕೆ ಅತಿರಿಕ್ತವಾದ 'ಕೇವಲ ಬಿದಿರು' ಎಂಬುದಿರುವುದಿಲ್ಲ. ಬಿದಿರನ್ನು ಅದರೊಡನೆ ನಾವು ಸ್ಥಾಪಿಸಿಕೊಳ್ಳುವ ಸಂಬಂಧವನ್ನು ಅವಲಂಬಿಸಿ ತೀರ್ಮಾನಿಸಬೇಕೆ ಹೊರತು ಅದರ ಹೊರತಾಗಿ ಬಿದಿರು ನಮಗೆ ಏನೂ ಅಲ್ಲ. ಅದು ಏನಾದರೂ ಆಗಬೇಕಾದರೆ ನಮ್ಮ ಸಂಪರ್ಕಕ್ಕೆ ಬರಬೇಕು. ನಮ್ಮ ಸಂಪರ್ಕಕ್ಕೆ ಬಾರದೆ ಇರುವ ಬಿದಿರು ನಮ್ಮಪಾಲಿನ ಬಿದಿರಲ್ಲ. ಇಲ್ಲಿ ಯಾವುದೂ ಸಿದ್ಧ ಸತ್ಯವೆಂಬುದಿಲ್ಲ. ಹಾಗೆಯೇ ಎಲ್ಲಾ ಸಾಹಿತ್ಯ, ಕಲಾ ಕೃತಿಗಳೂ ಅವುಗಳ ಅನುಸಂಧಾನದಲ್ಲಿ ಉಂಟಾಗುತ್ತವೆ. ಕಲಾಕೃತಿಯೆನ್ನುವುದು ಒಂದು ಜಿುಟ್ಝುಜಜ ಠಡಿಂಜಣಛಿಣ ಅಲ್ಲ. ಅದು ಸದಾ ಆಗುತ್ತಲೇ ಇರುವ ಒಂದು ಪ್ರಕ್ರಿಯೆಯೇ ಹೊರತು ಆಗಿ ಇರುವಂಥದಲ್ಲ. ಜಡವೆಂಬುದು ಬರಿಸುಳ್ಳು ಎಂದು ಕುವೆಂಪು ಇದನ್ನೆ ನುಡಿದಿದ್ದಾರೆ.

ಪ್ರಮಾಣ ನಿರಾಕರಣೆ (ಇಲ್ಲಿ ಯಾರೂ ಮುಖ್ಯರೂ ಅಲ್ಲ, ಯಾರೂ ಅಮುಖ್ಯರೂ ಅಲ್ಲ – ಕುವೆಂಪು)

ಭಾರತದಲ್ಲಿ ಹುಟ್ಟುವ ಪ್ರತಿ ಮಗುವೂ, ಮಾತು ಕಲಿಯುವ ಮುನ್ನ, ಅಕ್ಷರ ಕಲಿಯುವ ಮುನ್ನ, ರಾಜಕೀಯ ಸಂವಿಧಾನಕ್ಕೆ ಪರಿಚಯ ಪಡೆಯುವ ಮುನ್ನ ದೈವವಾದ, ಬ್ರಹ್ಮವಾದ, ಆತ್ಮವಾದ, ಜಾತಿವಾದ, ದ್ವೈತಾದ್ವೈತವಾದಗಳ ಪ್ರಮಾಣಗಳನ್ನಾಧರಿಸಿದ 'ಸಾಂಸ್ಕೃತಿಕ ಸಂವಿಧಾನದ' ಪೊರೆಯೊಳಗೆ ಬಂಧಿಯಾಗುತ್ತದೆ.ಇದು ಭಾರತದಲ್ಲಿ ಹುಟ್ಟುವ ಪ್ರತಿ ಮನುಷ್ಯ ಜೀವಿಯ ಸಮಸ್ಯೆ.ಇಲ್ಲಿ ಆಯ್ಕೆಯೂ ಇಲ್ಲ, ಬಿಡುಗಡೆಯೂ ಇಲ್ಲ. ಬದಲಾಗಿ ಇದನ್ನೇ ಗಟ್ಟಿಗೊಳಿಸುವುದಕ್ಕೆ ಪೂರಕವಾದ ಮೀಮಾಂಸೆಯನ್ನು ನಮ್ಮ ಆಯ್ಕೆಗೆ ಅವಕಾಶವನ್ನೇ ಕೊಡದೆ ಅನ್ವಯಿಸಿಕೊಳ್ಳಲಾಗಿದೆ. ಪ್ರಮಾಣಗಳೆಂದರೇನು? ಅದರಿಂದ ಕಾವ್ಯ ಮತ್ತು ಜೀವನಮೀಮಾಂಸೆಗೆ ಒದಗಿದ ಕೇಡುಗಳೇನು? ಪ್ರಮಾಣಗಳ ನಿರಾಕರಣೆ ಬೌದ್ಧ ಕಾವ್ಯ ಮೀಮಾಂಸೆಯ ಒಂದು ಪ್ರಮುಖ ನಿಲುವಾಗಿದೆ.

ಪ್ರಮಾಣ ಎಂದರೇನು? "ಸರಿಯಾದ ಆಧಾರವುಳ್ಳ ಜ್ಞಾನವನ್ನು, ಪ್ರಮಾ – ಪಡೆಯಲು ಮುಖ್ಯವಾದ ಸಾಧನ ಯಾವುದೋ ಅದೇ ಪ್ರಮಾಣ. ಹಾಗೆ ತಿಳಿದ ವಸ್ತುವು ಪ್ರಮೇಯ, ತಿಳಿಯುವವನು ಪ್ರಮಾತಾ" (ಎನ್.ಹಿರಿಯಣ್ಣ–ಭಾರತೀಯ ತತ್ವಶಾಸ್ತ್ರದ ರೂಪುರೇಖೆಗಳು). "ವಸ್ತು ಸ್ವಭಾವ ಅಥವಾ ಸತ್ಯವನ್ನು ತಿಳಿಯಲು ಇರುವ ಸಾಧನಗಳೇ ಪ್ರಮಾಣಗಳೆಂದು ಸ್ಥೂಲವಾಗಿ ಹೇಳಬಹುದು.ಪ್ರಮಾ ಎಂದರೆ ಯಥಾರ್ಥಜ್ಞಾನ. ಅದನ್ನುಂಟು ಮಾಡುವ ಕಾರಣ ಅಥವಾ ಸಾಧನವೇ ಪ್ರಮಾಣ." (ಎಂ.ಪ್ರಭಾಕರ ಜೋಶಿ, ಎಂ.ಎಂ.ಹೆಗಡೆ–'ಕುಮಾರಿಲಭಟ್ಟ'). – ಇದು ಪ್ರಮಾಣಗಳನ್ನು ಕುರಿತು ಸಿಗುವ ವಿವರಣೆ.

ಲೋಕದಲ್ಲಿ ನಾವು ಪಡೆಯುವ ಅನುಭವಗಳು ಮತ್ತು ಆ ಅನುಭವಗಳಿಗೆ

ಕಾರಣವಾಗುವ ಎದುರಿನ ವಸ್ತುಪ್ರಪಂಚದ ಸತ್ಯಾಸತ್ಯವನ್ನು ಅರಿಯಲು ಪ್ರಮಾಣಗಳನ್ನು ಸಾಧನಗಳೆಂದು ಪರಿಗಣಿಸಲಾಗಿದೆ. ಪ್ರತ್ಯಕ್ಷ ಅನುಮಾನ ಮತ್ತು ಶಬ್ದ–ಈ ಮೂರನ್ನು ಪ್ರಧಾನ ಪ್ರಮಾಣಗಳೆಂದೂ, ಇವುಗಳ ಜೊತೆಗೆ ಉಪಮಾನ, ಅರ್ಥಾಪತ್ತಿ ಮತ್ತು ಅನುಪಲಬ್ಧವನ್ನು ಇತರ ಪ್ರಮಾಣಗಳೆಂದು ಗುರುತಿಸಲಾಗಿದೆ.ಇಂದ್ರಿಯಗಳ ಮೂಲಕ ನಮ್ಮ ಅರಿವಿಗೆ ಬರುವ ರೂಪ, ರಸ, ಗಂಧ ಮುಂತಾದವುಗಳಿಗೆ ಸಂಬಂಧಿಸಿದ್ದು ಅಂದರೆ ನೋಡಿದ್ದು, ಮುಟ್ಟಿದ್ದು, ಮೂಸಿದ್ದು, ಕೇಳಿಸಿಕೊಂಡದ್ದು, ರುಚಿ ನೋಡಿದ್ದು ಮುಂತಾಗಿ ಪಂಚೇಂದ್ರಿಯಗಳ ಮೂಲಕ ಪಡೆದ ಅನುಭವಗಳಿಗೆ ಕಾರಣವಾದದ್ದೆಲ್ಲ ಸತ್ಯವೆನ್ನುವುದು ಪ್ರತ್ಯಕ್ಷ ಪ್ರಮಾಣ.ತರ್ಕದ ಮೂಲಕ ಸಾಧಿತವಾಗುವುದನ್ನು ಅನುಮಾನ ಪ್ರಮಾಣವೆನ್ನುತ್ತಾರೆ. ಉದಾಹರಣೆಗೆ ಹೊಗೆಯಾಡುತ್ತಿರುವುದರಿಂದ ಬೆಂಕಿ ಇದೆ ಎಂದು ತೀರ್ಮಾನಿಸುವುದು.'ಶಬ್ದ'ವೆಂದರೆ ಪ್ರಶ್ನಾತೀತತೆಯ ಹಕ್ಕನ್ನು ಸಾಧಿಸ ಬಯಸುವ ಎಲ್ಲ ಸ್ಥಾಪಿತ ಜ್ಞಾನಗಳು ಎಂಬುದು ಸ್ಥೂಲಾರ್ಥ.ಧರ್ಮ ಗ್ರಂಥದಲ್ಲಿ ಹೇಳಿದೆ, ಆದುದರಿಂದ ಅದೆಲ್ಲ ಸತ್ಯ. ದೇವರೇ ಹೇಳಿದ್ದಾನೆ, ಆದುದರಿಂದ ಅದು ಸತ್ಯ.ಅಂದರೆ ಈ ಪವಿತ್ರ ಪುಸ್ತಕದಲ್ಲಿ ಹೇಳಿರುವುದರಿಂದ ಇದು ಸತ್ಯ, ಋಷಿಯೋ, ಅವತಾರಿಯೋ, ದೇವದೂತನೋ ಹೇಳಿರುವುದನ್ನು ಪ್ರಶ್ನಿಸಲಾಗದು. ಅವರು ಏನು ಹೇಳಿದ್ದರೂ ಅದು ಸತ್ಯವೆನ್ನುವುದೇ 'ಶಬ್ದಪ್ರಮಾಣ'.ನಮ್ಮ ಸಮಾಜವನ್ನು ಮೌಢ್ಯದ ಕೂಪವನ್ನಾಗಿಸಿರುವುದು ಈ ಶಾಸ್ತ್ರ/ಶಬ್ದ/ಅಕ್ಷರ ಪ್ರಮಾಣವೇ. ಅಸ್ಪೃಶ್ಯತೆ, ಜಾತಿ ಅಸಮಾನತೆ, ಲಿಂಗ ಅಸಮಾನತೆ, ನಾವು ಮತ್ತು ಅನ್ಯರು ಮುಂತಾದ ತಾರತಮ್ಯಗಳನ್ನು ಜಾರಿಗೆ ತರಲು ಮತ್ತು ಅದಕ್ಕೆ ಸಮಾಜದ ಒಪ್ಪಿಗೆಯನ್ನು ಪಡೆಯಲು ಬಳಕೆಯಾದುದು ಇದೇ ಪ್ರಮಾಣಗಳು.

ಉಪಮಾನ, ಅರ್ಥಾಪತ್ತಿ ಮತ್ತು ಅನುಪಲಬ್ಧ ಎಂಬ ಮೂರು ಅಪ್ರಧಾನ ಪ್ರಮಾಣಗಳೂ ಇವೆ. ಮೊದಲು ನೋಡಿದ ವಸ್ತುವಿಗೆ ಸದೃಶವಾದ ಬೇರೊಂದು ವಸ್ತುವನ್ನು ನೋಡಿದಾಗ ನೆನಪಾದ ವಸ್ತುವಿನ ಸಾದೃಶ್ಯ ಜ್ಞಾನವುಂಟಾಗುವುದು ಉಪಮಾನ. ಉದಾಹರಣೆಗೆ ಒಂದು ಪಟ್ಟಣವನ್ನು ಹತ್ತು ವರ್ಷಗಳ ನಂತರದ ಅವಧಿಯಲ್ಲಿ ನೋಡಿದಾಗ ಕಾಣುವ ವ್ಯತ್ಯಾಸಗಳು ಮತ್ತು ಮೊದಲಿದ್ದ ಅವಸ್ಥೆಯ ನೆನಪು. ದೊರೆತ ಜ್ಞಾನಕ್ಕೆ ಅನುಭವವು ವಿರುದ್ಧವಾದಾಗ ಅದನ್ನು ಪರಿಹರಿಸಿಕೊಳ್ಳಲು ಮಾಡುವ ಊಹೆಯನ್ನು ಅರ್ಥಾಪತ್ತಿ ಎನ್ನುತ್ತಾರೆ. ಉದಾಹರಣೆಗೆ ಹಗಲು ಊಟಮಾಡದ ವ್ಯಕ್ತಿಯೊಬ್ಬ ದಪ್ಪಗಿದ್ದರೆ, ಅವನು ರಾತ್ರಿ ಚೆನ್ನಾಗಿ ತಿನ್ನುತ್ತಾನೆ ಎಂದು ತೀರ್ಮಾನಿಸುವುದು. ಅನುಪಲಬ್ಧಿಯೆಂಬುದು ಅಭಾವದ ಜ್ಞಾನ. ಅನುಪಸ್ಥಿತಿಯಿಂದ ಉಂಟಾಗುವ ಜ್ಞಾನ. ಉದಾಹರಣೆಗೆ ಮೇಜಿನ ಮೇಲೆ ಪೆನ್ನು ಕಾಣಿಸುತ್ತಿಲ್ಲ. ಯಾಕೆ ಕಾಣಿಸುತ್ತಿಲ್ಲವೆಂದರೆ ಅಲ್ಲಿ ಪೆನ್ನಿಲ್ಲ ಅದಕ್ಕೆ ಕಾಣಿಸುತ್ತಿಲ್ಲ. ಪ್ರತ್ಯಕ್ಷವೆಂದರೆ ಇದ್ದುದು ಕಾಣುವುದಾದರೆ ಅನುಪಲಬ್ಧವೆಂಬುದು ಇಲ್ಲದ್ದನ್ನು ಇಲ್ಲ ಎಂದು ತಿಳಿಯುವುದು.

ಪ್ರತಿಯೊಂದು ದರ್ಶನವೂ ತಾನು ನೀಡುವ ಲೋಕವಿವರಣೆಗೆ ಅನುಗುಣವಾಗಿ ತನಗೆ ಒಪ್ಪಿಗೆಯಾಗುವ ಪ್ರಮಾಣಗಳನ್ನು ಮಾನ್ಯ ಮಾಡುತ್ತದೆ. ಚಾರ್ವಾಕರು ಪ್ರತ್ಯಕ್ಷ

ಪ್ರಮಾಣವನ್ನು ಮಾತ್ರ ಒಪ್ಪುತ್ತಾರೆ.ಅಂದರೆ ಇಂದ್ರಿಯಗಳ ಮೂಲಕ ಅನುಭವಕ್ಕೆ ಬಂದದ್ದು ಮಾತ್ರ ಸತ್ಯವೆನ್ನುವುದು ಅವರ ನಿಲುವು.ಅನುಮಾನವೂ ಸೇರಿದಂತೆ ಉಳಿದ ಎಲ್ಲ ಪ್ರಮಾಣಗಳನ್ನೂ ಅವರು ನಿರಾಕರಿಸುತ್ತಾರೆ. ಸಾಂಖ್ಯರಿಗೆ ಪ್ರತ್ಯಕ್ಷ ಅನುಮಾನ ಮತ್ತು ಶಬ್ದ ಪ್ರಮಾಣಗಳು ಮಾನ್ಯ.ನ್ಯಾಯವು ಪ್ರತ್ಯಕ್ಷ ಅನುಮಾನ, ಶಬ್ದ ಮತ್ತು ಉಪಮಾನವನ್ನೂ ಮಾನ್ಯಮಾಡುತ್ತದೆ. ವಿಜ್ಞಾನಕ್ಕೆ ಪ್ರಶ್ನಿಸಲಾಗದ ಪ್ರಮಾಣವೆನ್ನುವ ಕಲ್ಪನೆ ಇಲ್ಲ. ಪ್ರತ್ಯಕ್ಷ ಮತ್ತು ಅನುಮಾನವನ್ನು ಅದು ಪ್ರಮಾಣಗಳನ್ನಾಗಿ ಮಾನ್ಯಮಾಡುವುದಾದರೂ, ಅವು ಆತ್ಯಂತಿಕ ಸತ್ಯಗಳಲ್ಲ ಎಂಬ ನಿರ್ಬಂಧದೊಡನೆಯೇ ಅವುಗಳೊಡನೆ ವ್ಯವಹರಿಸುತ್ತದೆ. ಇನ್ನು ಶಬ್ದಪ್ರಮಾಣವನ್ನು ಅದು ಅಸಂಬದ್ಧ ಮತ್ತು ಅತಾರ್ಕಿಕವೆಂದೇ ಪರಿಭಾವಿಸುತ್ತದೆ. ವಚನಕಾರರು ಮತ್ತು ಬೌದ್ಧರು ಯಾವ ಪ್ರಮಾಣಗಳನ್ನೂ ಕೊನೆಯ ಸತ್ಯ ಎಂದು ಮಾನ್ಯ ಮಾಡುವುದಿಲ್ಲ.

**ಪ್ರಮಾಣ ನಿರಾಕರಣೆ – ಬೌದ್ಧ ನಿಲುವು**

ಬುದ್ಧಗುರು ಪ್ರಮಾಣಗಳ ಬಗೆಗೆ ಸ್ಪಷ್ಟವಾದ ನಿಲುವನ್ನು ವ್ಯಕ್ತಪಡಿಸಿದ್ದಾನೆ. ಲೋಕಸಮಸ್ತವೂ ನಿರಂತರವಾಗಿ ಬದಲಾಗುತ್ತಲೇ ಇರುತ್ತದೆ.ನಾವು ಪಡೆಯುವ ಎಲ್ಲ ಲೋಕಾನುಭವಗಳು ಅನೇಕ ಪರಿಸ್ಥಿತಿಗಳ ಮಿತಿಗೆ ಒಳಪಟ್ಟು ದೊರಕುತ್ತವೆ. ಯಾವುದಕ್ಕೂ ಸ್ವತಂತ್ರವಾದ ಆತ್ಮವೆನ್ನುವುದು ಇಲ್ಲ. ಆದ್ದರಿಂದ ನಾವು ಇಂದ್ರಿಯಗಳ ಮೂಲಕ ಕಂಡದ್ದನ್ನು, ಅಥವಾ ಅನುಮಾನಿಸಿ ಕಂಡುಕೊಂಡದ್ದನ್ನು ಪ್ರಮಾಣವೆಂದು ಸ್ವೀಕರಿಸಲಾಗದು.ಇನ್ನು ಶಬ್ದ ಪ್ರಮಾಣದ ಬಗೆಗೆ ಬುದ್ಧನ ನಿಲುವು ಸ್ಪಷ್ಟವಿದೆ. ಯಾವುದೇ ಪುಸ್ತಕ: ಅದು ಜ್ಞಾನಿ ಎನಿಸಿಕೊಂಡವನಿಂದ ರಚಿತವಾಗಿರಲಿ, ದೈವಾಂಶಸಂಭೂತ ಎನಿಸಿಕೊಂಡವನಿಂದ ರಚಿತವಾಗಿರಲಿ, ಪ್ರವಾದಿಯಿಂದ ರಚಿತವಾಗಿರಲಿ, ಅವತಾರಿ ಯೆನಿಸಿಕೊಂಡವನಿಂದ ರಚಿತವಾಗಿರಲಿ, ದೇವರ ಅವತಾರ ಎಂದುಕೊಂಡವನಿಂದ ರಚಿತವಾಗಿರಲಿ ಅಂತಹ ಪುಸ್ತಕ ಹೇಳುವುದೇ ಕೊನೆಯ ಸತ್ಯವಲ್ಲ. ಯಾವುದೇ ವಾಕ್ಯ, ಮಾತು, ಸಂಗತಿ ಅದನ್ನು ಗುರು, ಹಿರಿಯರು, ತಂದೆ, ತಾಯಿ, ಅವತಾರಿ, ಪ್ರವಾದಿ, ದೇವರ ಅವತಾರ, ಋಷಿ, ಮತ್ತಾರೇ ಆಗಿರಲಿ ತನ್ನನ್ನೂ ಸೇರಿದಂತೆ ಯಾರೇ ನುಡಿದಿರಲಿ, ಅದೇ ಕೊನೆಯ ಸತ್ಯವಲ್ಲ. 'ಯಾವುದನ್ನು ವರ್ತಮಾನದ ಅಂತರಂಗದ ಬೆಳಕಿನಲ್ಲಿಟ್ಟು ಪರೀಕ್ಷಿಸಿದಾಗ ಅದು ಲೋಕದ ಬದುಕಿಗೆ ಮಂಗಳಕರವಾಗಿರುತ್ತದೋ ಅದನ್ನು ಸತ್ಯವೆಂದು ನಂಬು ಮತ್ತು ಅಂತೆಯೇ ಬಾಳು' ಎಂದಿದ್ದಾನೆ. ಇದು ಸ್ಪಷ್ಟವಾಗಿ ಶಬ್ದ ಪ್ರಮಾಣದ ನಿರಾಕರಣೆಯಾಗಿದೆ. ಪ್ರಮಾಣಗಳ ಬಗೆಗೆ ವಿಜ್ಞಾನದ ನಿಲುವು ಕೂಡ ಇದೇ ಆಗಿದೆ.

ಪ್ರಮಾಣಗಳ ಸ್ವೀಕರಣೆ ಮತ್ತು ನಿರಾಕರಣೆಗಳು ಭಾರತೀಯ ಬದುಕಿನ ನಿರ್ಣಯಾತ್ಮಕ ಸಂಗತಿಗಳಾಗಿರುವುದರಿಂದ ಮತ್ತು ಮೀಮಾಂಸೆಯು ಅದರಿಂದ ಗಾಢವಾಗಿ ಪ್ರಭಾವಿತವಾಗಿರುವುದರಿಂದ ಅವುಗಳ ವಿಸ್ತಾರವಾದ ವಿವರಣೆ ಅಗತ್ಯವಿದೆ. ಭಾಷೆ ಮತ್ತು ಕಾವ್ಯ ಮೀಮಾಂಸೆಯ ಬಗೆಗೆ ಬೌದ್ಧ ತಾತ್ವಿಕತೆಯು ಮುಂದಿಟ್ಟ ನಿಲುವುಗಳು ಪ್ರಜಾಸತ್ತೆಗೆ ಆಪ್ತವಾದವುಗಳೂ, ಸಮೂಹವನ್ನು ಮೌಢ್ಯದಿಂದ

ಬಿಡುಗಡೆಗೊಳಿಸಬಲ್ಲವುಗಳೂ ಆಗಿವೆ. ಆದರೆ ಈ ಕುರಿತು ಹೆಚ್ಚು ಚರ್ಚೆಗಳೇ ನಡೆಯದಂತೆ ಅವುಗಳನ್ನು ಸಮೂಹದಿಂದ ಮರೆಮಾಡುವ ಯತ್ನಗಳೂ ನಿರಂತರ ನಡೆದುಬಂದಿವೆ. ಹಾಗಾಗಿ ಈಗಲಾದರೂ ಅವುಗಳನ್ನು ಎದುರಿಗಿಟ್ಟುಕೊಂಡು ಪರಿಶೀಲಿಸಬೇಕಾಗಿದೆ. ಸರಳೀಕರಿಸುವುದಾದರೆ ಎದುರಿನಲ್ಲಿ ವಸ್ತುವೊಂದು ಇದೆ ಅಥವಾ ಇಲ್ಲ ಎಂಬುದನ್ನು ಸಾಧಿಸಲು ಈ ಮೂರು ಪ್ರಮಾಣಗಳು ಬಳಕೆಯಾಗುತ್ತವೆ. ನಾನೇ ನೋಡಿದ್ದರಿಂದ, ಮುಟ್ಟಿದ್ದರಿಂದ, ಕೇಳಿಸಿಕೊಂಡೆನಾದ್ದರಿಂದ ಇದೆ, ವಾಸನೆಬಂತು ಹಾಗಾಗಿ ಇದೆ, ರುಚಿ ನೋಡಿದೆ ಆದುದರಿಂದ ಇದೆ – ಇದು ಪ್ರತ್ಯಕ್ಷ ಪ್ರಮಾಣ. ಇದು ಇರುವುದರಿಂದಾಗಿ ಇನ್ನೊಂದು ಇರಲೇಬೇಕು ಎಂದು ತೀರ್ಮಾನಿಸುವುದು ಅನುಮಾನ ಪ್ರಮಾಣ.ಪ್ರಶ್ನಿಸಬಾರದ ಇಂತಹ ದಾಖಲೆಯಲ್ಲಿ ಹೇಳಿರುವುದರಿಂದ ಅದು ಇರಲೇಬೇಕು ಎನ್ನುವುದು ಶಬ್ದ ಪ್ರಮಾಣ.ಇವುಗಳಲ್ಲಿ ಯಾವುದೋ ಪುಸ್ತಕದಲ್ಲಿ ಹೇಳಿದೆಯಾದುದರಿಂದ ಅದು ಸತ್ಯವಿರಲೇಬೇಕು, ಇಂಥವರು ಹೇಳಿರುವುದರಿಂದ ಅದು ಸತ್ಯ ಎಂಬ ಶಬ್ದಪ್ರಮಾಣವನ್ನು ನಿರಾಕರಿಸಲು ಸಾಮಾನ್ಯ ನಿಸರ್ಗವಿವೇಕವೇ ಸಾಕು. ಆದರೆ ಪ್ರತ್ಯಕ್ಷ ಮತ್ತು ಅನುಮಾನ ಪ್ರಮಾಣಗಳು ಅಷ್ಟು ಸರಳವಲ್ಲ. ಅವುಗಳನ್ನು ನಿರಾಕರಿಸಲು ತರ್ಕದ ದಾರಿಯೊಂದನ್ನು ಸವೆಸಬೇಕಾಗುತ್ತದೆ.

# ಪ್ರಾರ್ಥನೆ ಎಂಬ ಅರಿವಿನ ಮೆಟ್ಟಿಲು....
# ಕಾರ್ನಾಡರ 'ತುಘಲಕ್' ಒಂದು ವಿವೇಚನೆ

**– ಪ್ರೊ.ಎಂ.ಎಸ್. ರಘುನಾಥ್**

ಕೆಲವು ವರ್ಷಗಳ ಹಿಂದೆ, ನಾನು ಬೆಂಗಳೂರಿನ ಸರ್ಕಾರಿ ರಾಮನಾರಾಯಣ ಚೆಲ್ಲಾರಾಂ ಕಾಲೇಜಿನಲ್ಲಿ ಭೋದಿಸುತ್ತಿದ್ದಾಗ, ಪ್ರತಿ ಶುಕ್ರವಾರ ಪಕ್ಕದ ರಸ್ತೆಯ ಮಸೀದಿಯೊಂದಕ್ಕೆ ಸಮಯಕ್ಕೆ ಸರಿಯಾಗಿ ರಸ್ತೆಯಲ್ಲೇ ಕಾರ್‌ವೊಂದನ್ನು ನಿಲ್ಲಿಸಲು ಅನುವು ಮಾಡಿಕೊಡಲು ಪೊಲೀಸರು ಬರುತ್ತಿದ್ದರು. ಅದಕ್ಕೆ ಕಾರಣ, ಅಲ್ಲಿಗೆ ಕರ್ನಾಟಕದ ರಾಜ್ಯಪಾಲರಾದ ಶ್ರೀ ಖುರ್ಷಿದ್ ಆಲಂ ಖಾನ್ ಅವರು ಶುಕ್ರವಾರದ ನಮಾಜ್‌ಗೆ ಬರುತ್ತಿದ್ದರು. ಯಾವುದೇ ಶಿಷ್ಟಾಚಾರವಿಲ್ಲದೆ, ಅವರು ಸಾಧಾರಣ ಪೋಷಾಕಿನಲ್ಲಿ ಸಾಧಾರಣ ವ್ಯಕ್ತಿಯಂತೆ ಬಂದು ಎಲ್ಲರೊಂದಿಗೆ ಪ್ರಾರ್ಥನೆಯನ್ನು ಸಲ್ಲಿಸುತ್ತಿದ್ದರು. ಅದು ನನಗೆ ಆಶ್ಚರ್ಯವನ್ನುಂಟು ಮಾಡುವುದರೊಂದಿಗೆ, ಪ್ರಾರ್ಥನೆಯ ನಿಜವಾದ ಮಹತ್ವದ ಅರಿವು ಇಲ್ಲಿ ಆಗುತ್ತಿರುವುದರ ಬಗ್ಗೆ ನಾನು ಚಕಿತನಾಗಿದ್ದೆ. ಈ ಘಟನೆ ನನಗೆ ನೆನಪಿಗೆ ಬಂದದ್ದು, ಇತ್ತೀಚೆಗೆ ಕಾರ್ನಾಡರ ನಿಧನಾ ನಂತರ. ಅವರ ಮಹತ್ವದ ನಾಟಕ ತುಘಲಕ್ ಅನ್ನು ಮರು ಓದು ಮಾಡುವ ಸಂದರ್ಭದಲ್ಲಿ. ಪ್ರಾರ್ಥನೆಯನ್ನೇ ಸ್ಥಗಿತಗೊಳಿಸಬೇಕೆನ್ನುವ ನಿರ್ಧಾರ ಕೈಗೊಳ್ಳಲು ತುಘಲಕ್‌ನ ಕಾರಣವೆಂದರೆ, ಆ ಸಮಯದಲ್ಲಿ ಅವನನ್ನು ಕೊಲ್ಲಿಸುವ ಪಿತೂರಿ ನಡೆದಿತ್ತು ಎಂಬುದು. ಆ ದೃಶ್ಯದಲ್ಲಿ ತುಘಲಕ್ ಹೇಳುತ್ತಾನೆ, 'ನಾನು ಪಟ್ಟವೇರಿದಾಗ ಎಂಥಾ ಕನಸು ಕಂಡಿದ್ದೆ. ನನ್ನ ರಾಜ್ಯದಲ್ಲಿಯ ಪ್ರತಿಯೊಂದು ಕಾರ್ಯ ಪ್ರಾರ್ಥನೆಯಾಗಬೇಕು. ಪ್ರತಿಯೊಂದು ಪ್ರಾರ್ಥನೆ ಅರಿವಿನ ಮೆಟ್ಟಿಲಾಗಬೇಕು. ಪ್ರತಿಯೂಂದು ಮೆಟ್ಟಿಲು ದೇವರ ಸನಿಹಕ್ಕೆ ಒಯ್ಯಬೇಕು. ಆದರೆ, ಪ್ರಾರ್ಥನೆಗೂ ರಾಜಕಾರಣದ ಬೇನೆ ಬಿಟ್ಟಿಲ್ಲ. ಈಗ ನಾನು ಪ್ರಾರ್ಥನೆಯನ್ನೇ ದೇಶಭ್ರಷ್ಟಗೊಳಿಸಬೇಕು'.

ಪ್ರಾರ್ಥನೆಯ ಮಹತ್ವಕ್ಕೆ ಸಂಬಂಧಿಸಿದ ಈ ಮೇಲಿನ ಸಾಲುಗಳು ಎಷ್ಟು ಅರ್ಥಗರ್ಭಿತವಾಗಿದೆ ! ಎಷ್ಟು ಕಾವ್ಯಾತ್ಮಕವಾಗಿದೆ ! ನಿಜವಾಗಿಯೂ ಈ ಸಾಲುಗಳಲ್ಲಿನ ಅಭಿವ್ಯಕ್ತಿ ಕಾವ್ಯ ಪ್ರತಿಭೆಯ ತುಟ್ಟತುದಿ ಎಂದು ನನಗನ್ನಿಸಿತು. ಈ ನಾಟಕದ ಮಹತ್ವವಿರುವುದು ಈ ಅಭಿವ್ಯಕ್ತಿಯ ಅಸಾಮರ್ಥ್ಯ ಮತ್ತು ದುಷ್ಟತನ ಇವುಗಳ ಗಾಲಿಯ ಮೇಲೆ ತಿರುಗುವ ನಾಟಕೀಯ ಬೆಳವಣಿಗೆಗಳ ಮೇಲೆ.

ನಮ್ಮಲ್ಲಿ ಒಳ್ಳೆಯ ಐತಿಹಾಸಿಕ ನಾಟಕಗಳು ಇಲ್ಲ, ಎಂದು ಕುರ್ತುಕೋಟಿಯವರು ಬರೆದದ್ದನ್ನು ಓದಿ 'ಏಕೆ ನಾನೊಂದು ಐತಿಹಾಸಿಕ ನಾಟಕವನ್ನು ಬರೆಯಬಾರದು ಎನ್ನಿಸಿತು. ತುಘಲಕ್ ತನ್ನ ರಾಜ್ಯದಲ್ಲಿ ಪ್ರಾರ್ಥನೆಯನ್ನು ನಿಲ್ಲಿಸಿದ್ದನು ಎಂಬುದನ್ನು ಕೇಳಿದಾಗ ಹಾಗಾದರೆ ಅವನ ಬಗ್ಗೆಯೇ ಒಂದು ನಾಟಕ ಬರೆಯೋಣ ಎಂದು ಎನ್ನಿಸಿ ನಾನು ಈ ನಾಟಕವನ್ನು ಬರೆದೆ ಎಂದು ಕಾರ್ನಾಡರು, ಅವರ ಬಗ್ಗೆ ಬಂದ ಇತ್ತೀಚಿನ ಡಾಕ್ಯುಮೆಂಟರಿಯೊಂದರಲ್ಲಿ ಹೇಳಿದ್ದಾರೆ.

ಮೊದಲು ಅವರು ನಾಟಕಕ್ಕೆ ಕೊಟ್ಟ ಶೀರ್ಷಿಕೆ 'ಎರಡು ರಾಜ್ಯಗಳ ನಡುವೆ' ಎಂದು. ಆದರೆ, ಈ ಶೀರ್ಷಿಕೆ ಕೃತಿಯ ಪ್ರಕಾಶಕರಾದ ಮನೋಹರ ಗ್ರಂಥಮಾಲೆಯವರಿಗೆ ಹಿಡಿಸದೆ ಇದ್ದಾಗ, ಅವರ ಸೂಚನೆಯ ಮೇರೆಗೆ ತುಘಲಕ್ ಎಂದೇ ಹೆಸರಿಟ್ಟರಂತೆ. ಈ ನಾಟಕ ರಾಷ್ಟ್ರೀಯ, ಅಂತರಾಷ್ಟ್ರೀಯ ಮಟ್ಟದಲ್ಲಿ ಅವರಿಗೆ ಖ್ಯಾತಿಯನ್ನು ತಂದುಕೊಟ್ಟ ನಾಟಕ. ಭಾರತದ ಬಹುತೇಕ ಎಲ್ಲಾ ಭಾಷೆಗಳಿಗೆ ಮಾತ್ರವಲ್ಲದೇ ಜರ್ಮನಿ ಮತ್ತು ಹಂಗೇರಿಯ ಭಾಷೆಗಳಿಗೂ ಅನುವಾದಗೊಂಡಿದೆ. ಬಿ.ವಿ.ಕಾರಂತ ಅವರ ನಿರ್ದೇಶನದಲ್ಲಿ ಅದರ ಹಿಂದಿಯ ನಾಟಕದ ಅಭಿನಯ ಉತ್ತರ ಭಾರತದಲ್ಲಿ ಎಲ್ಲಾ ಕಡೆ ಬಹಳ ಯಶಸ್ವಿಯಾಯಿತು.

ತುಘಲಕ್ ನಾಟಕ ಮೊದಲ ಬಾರಿಗೆ ಧಾರವಾಡದಲ್ಲಿ ಅಭಿನಯಗೊಂಡಾಗ, ಅದನ್ನು ವೀಕ್ಷಿಸಲು ದ.ರಾ.ಬೇಂದ್ರೆ ಯವರು ಬಂದಿದ್ದರೆಂಬುದು ಉಲ್ಲೇಖನೀಯ. ಆ ಹೊತ್ತಿಗಾಗಲೇ ಅದರ ಹಿಂದಿ ಅವತರಣಿಕೆಯೂ ಸಿದ್ಧವಾಗಿತ್ತೆಂಬುದನ್ನು ತಿಳಿದ ಬೇಂದ್ರೆಯವರು, 'ಹಾಗಾದರೆ ಇದು ಇಲ್ಲಿ, ಅದು ಅಲ್ಲಿ (ಅಂದರೆ ದೆಹಲಿಯಲ್ಲಿ) ಅಭಿನಯಗೊಳ್ಳಬೇಕು' ಎಂದು ಸೂಚಿಸಿದರಂತೆ. ಕೆಲವೇ ದಿನಗಳಲ್ಲಿ ಬಿ.ವಿ.ಕಾರಂತರ ನಿರ್ದೇಶನದಲ್ಲಿ ಅದು ದೆಹಲಿಯಲ್ಲಿ ಪ್ರದರ್ಶಿತಗೊಂಡು, ಕೇವಲ ದೆಹಲಿ ಮಾತ್ರವಲ್ಲ, ದೇಶಾದ್ಯಂತ ರಂಗಾಸಕ್ತರ ಗಮನ ಸೆಳೆಯುವಲ್ಲಿ ಯಶಸ್ವಿಯಾಯಿತು.

ಇತಿಹಾಸದಲ್ಲಿ ನಾವು ಓದಿದ ತುಘಲಕ್ ಐಲುದೊರೆ ಎಂದೇ ಖ್ಯಾತನಾದವನು. ಹಿಂದೂ ಮುಸ್ಲಿಮರ ಬಾಂಧವ್ಯವನ್ನು ಉತ್ತಮಪಡಿಸುವ ಸಲುವಾಗಿ ಹಿಂದಿನ ಇಸ್ಲಾಂ ರಾಜರುಗಳು ವಿಧಿಸಿದ್ದ ಝುಜಿಯ ಎಂಬ ತಲೆಗಂದಾಯವನ್ನು ರದ್ದುಮಾಡಿ, ಹಿಂದೂಗಳ ವಿಶ್ವಾಸವನ್ನು ಗಳಿಸಿಕೊಂಡರೆ, ಮತ್ತೊಂದು ಕಡೆ ಸತಿಪದ್ಧತಿಯನ್ನು ರದ್ದು ಮಾಡಿ ಸಂಪ್ರದಾಯಿ ವಾದಿಗಳ ಕೋಪಕ್ಕೂ ಗುರಿಯಾಗಬೇಕಾಗುತ್ತದೆ.

ಪದೇ ಪದೇ ಉತ್ತರದ ಕಡೆಯಿಂದ ನಡೆಯುತ್ತಿದ್ದ ದಾಳಿಗಳಿಂದ ರಕ್ಷಿಸಿಕೊಳ್ಳಲು, ಹಿಂದೂಗಳ ನಡುವೆ ತನ್ನ ರಾಜ್ಯ ಸ್ಥಾಪಿಸಲು, ತನ್ನ ಸಾಮ್ರಾಜ್ಯವನ್ನು ದಕ್ಷಿಣ ಭಾರತದಲ್ಲಿ ವಿಸ್ತರಿಸಲು ಹಾಗೂ ತನ್ನ ಸಾಮ್ರಾಜ್ಯದ ಕೇಂದ್ರದಲ್ಲಿ ರಾಜಧಾನಿಯನ್ನು ಸ್ಥಾಪಿಸಲು, ದೆಹಲಿಯಿಂದ ದೇವಗಿರಿಗೆ ರಾಜಧಾನಿಯನ್ನು ಬದಲಾಯಿಸುತ್ತಾನೆ. ಈ ಪ್ರಯೋಗದಲ್ಲಿ ಭಾರಿ ನಷ್ಟಕ್ಕೆ ಒಳಗಾಗುತ್ತಾನೆ. ಇದು ಅವನ ರಾಜ್ಯದಲ್ಲಿ ಪ್ರಜೆಗಳೆಲ್ಲರೂ

ಬಂಡಾಯವೇಳಲು ಮುಖ್ಯ ಕಾರಣವಾಯಿತು. ತನ್ನ ಆಡಳಿತದ ಅವಧಿಯಲ್ಲಿ ಚಿನ್ನ ಮತ್ತು ಬೆಳ್ಳಿ ನಾಣ್ಯಗಳ ಬದಲು ತಾಮ್ರದ ನಾಣ್ಯವನ್ನು ಜಾರಿಗೆ ತರುತ್ತಾನೆ. ಆದರೆ, ಈ ವ್ಯವಸ್ಥೆಯನ್ನು ದುರುಪಯೋಗಪಡಿಸಿಕೊಂಡ ಕೆಲವರು ಅವನ ರಾಜ್ಯದಲ್ಲಿ ಅರಾಜಕತೆಯನ್ನು ಸೃಷ್ಟಿಸಿ ಆರ್ಥಿಕ ವ್ಯವಸ್ಥೆಯನ್ನು ಏರುಪೇರುಗೊಳಿಸುತ್ತಾರೆ.

ಇತಿಹಾಸದ ತುಘಲಕ್ ರಾಜಕೀಯ ತಂತ್ರ-ಪ್ರತಿ ತಂತ್ರಗಳ ಚತುರಮತಿ, ಕಾವ್ಯಪ್ರೇಮಿ, ಬುದ್ಧಿವಂತ ರಾಜ. ಆದರೆ ಕಾರ್ನಾಡರ ನಾಟಕದಲ್ಲಿ ಈ ಎಲ್ಲಾ ಗುಣಗಳೊಂದಿಗೆ ತನ್ನ ಆದರ್ಶದ ಕನಸುಗಾರ, ಉದಾತ್ತತೆಯ, ಧಾರ್ಮಿಕ ಸಹಿಷ್ಣುತೆಯ ವ್ಯಕ್ತಿತ್ವಗಳೊಂದಿಗೆ ದುರ್ಬಲ, ಕ್ರೂರ ಹಾಗೂ ಆಧುನಿಕ ಜಗತ್ತಿನ ಕಿರಾತನಂಥ ಮನುಷ್ಯ. ಎಂಬುದಾಗಿ ವಿಮರ್ಶಕರು ವಾಖ್ಯಾನಿಸಿದ್ದಾರೆ.

ಪ್ರಜಾಪ್ರಭುತ್ವದ ಮೂಲ ಎಳೆಗಳನ್ನು ತುಘಲಕ್ ತನ್ನ ಆಡಳಿತಾವಧಿಯಲ್ಲಿ ಪ್ರತಿಪಾದಿಸುತ್ತಾನೆ. ಆದರೆ, ತುಘಲಕ್‌ನ ಈ ಸರಳ ಮಾನವ ಗುಣಗಳನ್ನು, ಅವನ ಆದರ್ಶವನ್ನು ಅರ್ಥಮಾಡಿಕೊಳ್ಳಲಾಗದ ಜನ ಅವನ ವೇಗಕ್ಕೆ ಸರಿಸಮನಾಗಿ ಹೆಜ್ಜೆ ಹಾಕಲಾರದೇ, ಅವನನ್ನೇ ಹುಚ್ಚು ದೊರೆ, ಐಲು ದೊರೆ ಎಂದು ಟೀಕಿಸುತ್ತಾರೆ. ಅವನ ಆದರ್ಶಗಳಾದ, ರಾಜಕಾರಣದಿಂದ ಧರ್ಮವನ್ನು ಬೇರೆಯಾಗಿಸುವುದು, ರಾಜಧಾನಿಯ ಬದಲಾವಣೆ, ನಾಣ್ಯ ಪದ್ಧತಿಯ ಹೊಸ ಆವಿಷ್ಕಾರ, ಕಂದಾಚಾರವನ್ನು ಹತ್ತಿಕ್ಕುವುದು, ಇತ್ಯಾದಿಯಾಗಿತ್ತು. ಆದರೆ, ಇವುಗಳಿಗೆ ಇತರ ರಾಜರುಗಳ ಬೆಂಬಲವಿಲ್ಲದೇ ಹೋಗುತ್ತದೆ. ಮನುಷ್ಯರ ನಡುವೆ ಸರಳ ರಾಜನಾಗಿ ಸಮಾನ ಸಮಾಜದ ಕಲ್ಯಾಣದ ಕನಸನ್ನು ಕಂಡಿದ್ದ ತುಘಲಕ್‌ನಿಗೆ ಈ ದಾರಿಯಲ್ಲಿ ವಿಶ್ವಾಸ ಬರುವುದಿಲ್ಲ. 'ಮನುಷ್ಯರೆಂದೂ ಮನುಷ್ಯರ ಮಾತನ್ನು ಕೇಳುವುದಿಲ್ಲ' ಎಂಬ ಸತ್ಯವನ್ನು ಅರಿತ ತುಘಲಕ್ ದೇವರಾಗಲು ಹವಣಿಸುತ್ತಾನೆ. ಜಡ್ಡುಗಟ್ಟಿದ ಸಮಾಜಕ್ಕೆ ಚಿಕಿತ್ಸೆ ನೀಡಬೇಕು ಎಂಬಂತೆ ತುಘಲಕ್ ಆಜ್ಞೆ ಮಾಡುತ್ತಾನೆ. ಪ್ರಾರ್ಥನೆಯ

ಸಮಯದಲ್ಲಿ ತುಘಲಕ್‌ನನ್ನು ಕೊಲ್ಲಲು ಹೊಂಚು ಹಾಕಿದ ಅಮೀರರನ್ನು, ಶಹಾಬುದ್ದೀನ್ ಮತ್ತಿತ್ತರನ್ನು ನಾಶಪಡಿಸಿ ತುಘಲಕ್ ಮಂತ್ರಿ ನಜೀಬನಿಗೆ ಹೀಗೆ ಆಜ್ಞೆಮಾಡುತ್ತಾನೆ. 'ಕೂಡಲೇ, ದಿಲ್ಲಿಯ ಪ್ರಜೆಗಳಿಗೆ ದೌಲತಾಬಾದಿಗೆ ಹೊರಡಬೇಕು ಎಂದು ಆಜ್ಞೆ ಮಾಡು' ಎನ್ನುತ್ತಾನೆ.

ರಾಜಧಾನಿಯನ್ನು ವರ್ಗಾಯಿಸುವ ಅವನ ನಿರ್ಣಯವನ್ನು ವ್ಯಾಪಾರಿಗಳು, ಶ್ರೀಮಂತರು ವಿರೋಧಿಸಿದರು. ಆದರೆ, ಅದಕ್ಕೆ ಒಪ್ಪದ ತುಘಲಕ್ ಎಲ್ಲರೂ ದೌಲತಾಬಾದಿಗೆ ಹೋಗಲೇ ಬೇಕೆಂದು ಕಟ್ಟಾಜ್ಞೆ ವಿಧಿಸಿದ.

ದಂಗೆ, ಬಂಡಾಯ ಇವುಗಳಿಂದ ಮನನೊಂದ ಸುಲ್ತಾನ ತನ್ನೊಡನೆ ಹೀಗೆ ಹೇಳಿದ ಎಂದು ಬರನಿ ಒಂದೆಡೆ ದಾಖಲಿಸುತ್ತಾನೆ. 'ನನ್ನ ರಾಜ್ಯಕ್ಕೆ ರೋಗ ಹತ್ತಿದೆ, ಅದನ್ನು ಯಾವ ಚಿಕಿತ್ಸೆಯೂ ಗುಣಪಡಿಸಲಾರದು....ಅರಾಜಕತೆ ರಾಜ್ಯದಲ್ಲಿ ತಾಂಡವವಾಡುತ್ತಿದೆ....ನನ್ನ ಆಜ್ಞೆ ಉಲ್ಲಂಘಿಸುವವರಿಗ ನಾನು ಮರಣ ದಂಡನೆ ವಿಧಿಸುತ್ತೇನೆ.'

ಅಗಸನಾದ ಅಜೀಜ ಹೇಳುವಂತೆ, 'ಅಗಸನಾದರೆ ಏನಾಯಿತು, ಸ್ವಾಮಿ? ಅಗಸ ತೊಳೆದಷ್ಟು ಕೊಳೆಯನ್ನು ಯಾವ ಧರ್ಮಗುರುವೂ ತೊಳೆದಿಲ್ಲ.' ಅದಕ್ಕೆ ತುಘಲಕ್ ಹೇಳುತ್ತಾನೆ, 'ಶಾಹಮತ್ ! ಶಾ..... ಬರನಿ ಇವನೊಬ್ಬ ಕಳ್ಳನಲ್ಲ, ಕಲಾಕಾರ ! ಇಂಥಾ ಸಹಜ ಉದ್ಧಟನನ್ನು ಎಂದೂ ಕಂಡಿರಲಿಲ್ಲ !' ಹೀಗೆ ನಾಟಕದ ಅನೇಕ ಕಡೆ ಕಾಣುವಂತಹ ಕಾವ್ಯಾತ್ಮಕ, ಮನನೀಯ ಮಾತುಗಳು, ತುಘಲಕ್‌ನ ವ್ಯಕ್ತಿತ್ವವನ್ನು ಬಹಿರಂಗಗೊಳಿಸುವಂತೆ, ನಾಟಕದ ಕಲೆಗಾರಿಕೆಯನ್ನೂ ವೃದ್ಧಿಸುತ್ತದೆ.

ಆರಂಭದಲ್ಲಿ ಮಾನವೀಯ ಗುಣಗಳ ಸಾಕಾರವಾಗಿದ್ದ ಸಾಮಾನ್ಯರಂತೆ ಬದುಕುತ್ತಿದ್ದ, ಉದಾತ್ತನಂತೆ ಆಲೋಚಿಸುತ್ತಿದ್ದ ತುಘಲಕ್‌ನು ತನ್ನ ಸುತ್ತಲಿನ ಜನರ, ಅಮೀರರ, ಧಾರ್ಮಿಕ ಮುಖಂಡರ ವಿರೋಧವನ್ನು ಎದುರಿಸುತ್ತಾ, ತನ್ನ ಆದರ್ಶಗಳು ಮತ್ತು ಕನಸುಗಳು ನನಸಾಗದೇ ಇದ್ದುದರಿಂದ ನೋವನ್ನು ಅನುಭವಿಸುತ್ತಾನೆ. ಕನಸನ್ನು ನನಸಾಗಿಸಲು ತಾನೇ ದೇವರಾಗುತ್ತಾನೆ. ಮೃದುವಾಗಿ ಕಾವ್ಯಮಯವಾಗಿ ಮಾತನಾಡುತ್ತಿದ್ದ ತುಘಲಕ್‌ನ

ಧ್ವನಿ ಕ್ರಮೇಣ ದೊಡ್ಡದಾಗುತ್ತದೆ. ಕಾವ್ಯಮಯತೆ ಇದ್ದ ಮಾತಿನಲ್ಲಿ ಕ್ರೌರ್ಯ ಮೂಡುತ್ತದೆ. ಪ್ರಾರ್ಥನೆಯ ಬಗ್ಗೆ ತನ್ನ ಕನಸು ನನಸಾಗದ ಬಗ್ಗೆ ಅಲವತ್ತುಕೊಳ್ಳುತ್ತಾನೆ. 'ತುಘಲಕ್ ಅನುಭವ ಕುಸಿತಕ್ಕೆ ಒಳಗಾಗುತ್ತಾನೆ. ಅವನ ಹಲವಾರು ದುಷ್ಕೃತ್ಯಗಳಿಂದ ಅವನ ರಾಜ್ಯದಲ್ಲಿ ಅರಾಜಕತೆ ಉಂಟಾಗುತ್ತದೆ. ದೇವತ್ವಕ್ಕೆ ಏರುವ ಹಂಬಲದಿಂದ, ದಾನತ್ವಕ್ಕೆ ಇಳಿಯುತ್ತಾನೆ. ಇದು ಕೇವಲ ಅವನ ಕನಸನ್ನು ಅರ್ಥೈಸಲಾಗದ ತಪ್ಪು ಮಾತ್ರವಲ್ಲದೇ, ಅವನ ರಾಜ್ಯದ ಪ್ರಜೆಗಳ ತಪ್ಪೂ ಆಗಿದೆ'. ಎಂಬುದನ್ನು ನಾಟಕ ಚಿತ್ರಿಸುತ್ತದೆ. ಈ ಸಂದರ್ಭದಲ್ಲಿ, ಇಂದಿರಾಗಾಂಧಿಯವರ ಆಳ್ವಿಕೆಯಲ್ಲಿ ಹೇರಲಾದ ತುರ್ತು ಪರಿಸ್ಥಿತಿ ಹಾಗೂ ಅದರ ಪರಿಣಾಮಗಳನ್ನು ಇದಕ್ಕೆ ಹೊಂದಿಕೊಂಡಂತೆ ನೆನಪಿಸಿಕೊಳ್ಳಬಹುದು. ಅಧಿಕಾರ ಶಾಹಿ ಅಂದು-ಇಂದೂ ಒಂದೇ ಎನ್ನುವುದಕ್ಕೆ ಇದು ಅತ್ಯುತ್ತಮ ಉದಾಹರಣೆ. ನಾಗರಿಕ ಸಮಾಜದ ಅನಾಗರಿಕ ಪ್ರವೃತ್ತಿ ಹೊಂದಿರುವ ಸತ್ಯ ಎಂದು ಗುರುತಿಸಲಾಗಿದೆ. ಈ ಕಾರಣಕ್ಕೆ ತುಘಲಕ್ ನಾಟಕ ಇಂದಿಗೂ ಪ್ರಸ್ತುತ ಎಂದು ಹೇಳಬಹುದು.

ಆದರ್ಶಗಳಿಂದ ತುಂಬಿದ ತುಘಲಕ್ ತನ್ನ ಆದರ್ಶಗಳನ್ನು ನಿಜವಾಗಿಸಲು ಬಳಸುವ ಮಾರ್ಗಗಳ ಕಾರಣದಿಂದಾಗಿಯೇ ಸೋಲುತ್ತಾ ಹೋಗುತ್ತಾನೆ. 'ಹೀಗೆ ತುಘಲಕ್ ನಾಟಕವು ಶ್ರೀಮಂತ ಸಾಂಕೇತಿಕತೆಯಿಂದ, ಮನುಷ್ಯ ಸ್ವಭಾವಗಳ ಬಗೆಗಿನ ಗಾಢ ಒಳನೋಟಗಳಿಂದ ಅವನ್ನು ಅನಾವರಣಗೊಳಿಸುವ ನಾಟಕೀಯತೆಯಿಂದ ವಿಶ್ಲೇಷಿಸಿದಷ್ಟೂ ಮೀರಿ ನಿಲ್ಲುವ, ಓದಿದಷ್ಟು ಹೊಸತಾಗಿ ಕಾಣುವ ನಾಟಕವಾಗಿ ಉಳಿದಿದೆ ಎಂಬ ವಿಮರ್ಶಕರ ಅಭಿಪ್ರಾಯ ಸಮಂಜಸವಾಗಿದೆ.

ತುಘಲಕ್ ಒಂದು ದುರಂತ ನಾಟಕ. ಇಲ್ಲಿ ನಾಯಕನಾಗಲೀ, ಇನ್ನಾವುದೇ ಪ್ರಮುಖ ಪಾತ್ರವಾಗಲೀ ಕೊನೆಯಲ್ಲಿ ಸಾಯುವುದಿಲ್ಲ. ಐದು ವರ್ಷಗಳಿಂದ ನಿದ್ದೆ ಬಾರದೇ ನರಳುತ್ತಿದ್ದ ತುಘಲಕ್‌ನಿಗೆ ಒಮ್ಮೆಲೇ ನಿದ್ದೆ ಆವರಿಸುತ್ತದೆ. ಅದೇ ನಾಟಕದ

ಮುಕ್ತಾಯ. ನಾಟಕದ ಮುಕ್ತಾಯದಲ್ಲಿರುವುದು ಸಾವಲ್ಲ. ಸೋಲು. ತುಘಲಕ್‌ನ ಆದರ್ಶದ ಸೋಲು. ಅವನ ಪ್ರಗತಿಪರ ಚಿಂತನೆಯ ಸೋಲು. ಅವನ ಎಲ್ಲಾ ನಂಬಿಕೆಯ ಕನಸುಗಳ ಸೋಲು. ಒಂದು ದೃಷ್ಟಿಯಿಂದ ಇದು ವಾಸ್ತವತೆಯ ಆದರ್ಶದ ಸೋಲೂ ಹೌದು. ಚೈತನ್ಯ, ಆದರ್ಶ, ದೂರದೃಷ್ಟಿ, ಪ್ರಜಾಚಿಂತನೆ ಎಲ್ಲಾ ಇರುವ ತುಘಲಕ್ ನಂತಹ ವ್ಯಕ್ತಿತ್ವ ಒಂದಕ್ಕೆ ಸೋಲೇ ಸಾವು. ಅದೇ ನಾಟಕದ ದುರಂತ ಎಂಬ ಮತ್ತೊಂದು ಅಭಿಪ್ರಾಯ. ನಾಟಕದ ಆತ್ಮವನ್ನು ಸರಿಯಾಗಿ ವಿಷಧೀಕರಿಸುತ್ತದೆ.

'ಪಂಪಭಾರತ ದೀಪಿಕೆಯ ಮೇಲೊಂದು ಕ್ಷ ಕಿರಣ' ಎಂಬ ಲೇಖನದಲ್ಲಿ 'ವರ್ಡ್' ಫೈಲ್ ನಿಂದ ಪೇಜ್ ಮೇಕರ್‌ಗೆ ವರ್ಗಾಯಿಸುವಲ್ಲಿ 'ನ' > 'ನಿ' ಆಗಿ ಪರಿವರ್ತಿತವಾಗಿಲ್ಲ. ಓದುಗರು ಇದನ್ನು ಗಮನಿಸಬೇಕಾಗಿ ವಿನಂತಿ. ಈ ಪ್ರಮಾದಕ್ಕಾಗಿ ವಿಷಾದಿಸುತ್ತೇವೆ.

ಈ ಲೇಖನದಲ್ಲಾದ ಮುದ್ರಣ ದೋಷಗಳನ್ನು ತಿದ್ದಿಕೊಳ್ಳಬೇಕಾಗಿ ವಿನಂತಿ

| | |
|---|---|
| **ಪುಟ ಸಂಖ್ಯೆ ೪** | ಸರಿಯಾದ ರೂಪ |
| ಚಾಗದೂಳ್ಪಟಿಗಾದುದೇ | ಚಾಗದೊಳ್ಪಱಿಗಾದುದೆ |
| **ಪುಟ ಸಂಖ್ಯೆ ೫** | |
| ತಳ್ತಿಟಿ‍ದೇಟಿಂ | ತಳ್ತಿದೇಱಿಂ |
| ತಿಱುನೀರಿಕ್ಕುವುದು | ತಿಱುನೀರಿಕ್ಕುವುದು |
| ಪೆಱುಕೇಳ್ದು | ಪೇಟಿಕೇಳ್ದು |
| **ಪುಟಸಂಖ್ಯೆ ೬** | |
| ತಾಳ್ದು | ತಾಳ್ದು |
| ಕಾಮಿನೇ | ಕಾಮಿನೀ |
| **ಪುಟ ಸಂಖ್ಯೆ೧೫** | |
| ತಣ್ಬೆಟಿಲ್ | ತಣ್ಬುಱಿಲ್ |
| ಪಲಾಱ | ಪಲ್ಲಾಱ |
| **ಪುಟ ಸಂಖ್ಯೆ ೧೬** | |
| ನೆಟಿಲ್ದಿರೆ | ನೆಱಿಲ್ದಿರೆ |
| ತೆಟಿದಿಂದೆ | ತೆಱಿದಿಂದೆ |
| **ಪುಟ ಸಂಖ್ಯೆ ೧೮** | |
| ಬಗೆದೊಟಿದೊಡಂ | ಬಗೆದೊಱದೊಡಂ |
| **ಬೆನ್ನುಡಿಯಲ್ಲಿ** | |
| ಪ್ರೆಹರಾ ಎಂಬುದಲ್ಲಿ | ಪ್ರೆಹರಾ ಎಂಬುದಲ್ಲ |
| ಕಠೋರಸಾಧಕ | ಕಠೋರ ಸಾಧಕಳು |

**ಪುಟ ೯೬**

೭ (೨) ಇಠಿ.ಖಟಿಜ.ಗಿಂಟ.ಗಿಖ & (ಖ) ಖಂ.ಗಿಂಟ.ಗಿ ಇತ್ಯಾದಿ – 7 (i) Ep.Ind.Vol.VI & (ii) IA.Vol.V ಇತ್ಯಾದಿ

**ಪುಟ ೯೯**

ಎ.ಂ.ಊ.ಖ., ಗಿಂಟ.ಖಖಖ ೯ — J.A.H.R.S., Vol.III 9

ಡಾ.ಡಿ.ಎಲ್.ಎನ್. ಅವರ ಅಭಿಪ್ರಾಯಗಳಿಗೆ ಭಿನ್ನವಾದ ಅಭಿಪ್ರಾಯಗಳನ್ನು ಮಾತ್ರ ನಾನು ಸಂಗ್ರಹಿಸಿದ್ದೇನೆ. ಹಾಗೆ ಸಂಗ್ರಹಹಿಸುವಾಗ ಮೊದಲು ಡಿ.ಎಲ್.ಎನ್. ಅವರ ಅಭಿಪ್ರಾಯಗಳನ್ನು ಕೊಟ್ಟಿರುವೆನು. –ದಿ॥ ಪಿ. ಸುಬ್ಬರಾಯ ಭಟ್

ಹಸ್ತಪ್ರತಿಗಳು ಯವುದೋ ಕಾಲದಲ್ಲಿ ಬರೆದಿಟ್ಟ ಏಕಘನಾಕೃತಿಯ ಸ್ಥಿರ ಪಠ್ಯಗಳಲ್ಲಿ ಕಾಲಕಾಲದಲ್ಲಿ ಕನ್ನಡ ಸಂಸ್ಕೃತಿಯನ್ನು ಪುನರ್‌ರಚಿಸಿ ಕೊಳ್ಳುತ್ತಾ ಬಂದ ಚರಪಠ್ಯಗಳು
– ಡಾ.ಸಿ.ನಾಗಭೂಷಣ

ಇರಬೇಕಾದ ಶಬ್ದ 'ಪ್ರೇಹರಾ' ಎಂಬುದಲ್ಲಿ ' ಪ್ರಹರಾ' ಎಂದು ತೆಗೆದು ಕೊಳ್ಳಬೇಕಾಗುತ್ತದೆ. ಇದೇ ಮುಂದೆ ಪಗರೆ, ಹಗರೆ ಮತ್ತು ಹಗರಿ ಎಂಬ ರೂಪಾಂತರವನ್ನು ಹೊಂದಿರುವುದಾಗಿ ಕಾಣುತ್ತದೆ. –ಡಾ. ಬಿ.ರಾಜಶೇಖರಪ್ಪ

ಅಕ್ಕ ಸಾಮಾನ್ಯ ಸ್ತ್ರೀಯ ಮಿತಿಯ ಸಾಧ್ಯತೆಯನ್ನು ಮೀರಿ ಸಾಧನೆಗೈದ ಒಬ್ಬ ಕಠೋರ ಸಾಧಕ. –ಡಾ. ದಾಕ್ಷಾಯಣಿ ಯಡಹಳ್ಳಿ

ಕನ್ನಡ ಮಾತಿನಲ್ಲಿ ಕಾಲ ಚಕ್ರವನ್ನೂ ಜೀವನ ವ್ಯಾಪಾರವನ್ನೂ ಇದ್ದದ್ದಿದ್ದ ಹಾಗೆ ಸ್ವಲ್ಪವೂ ವ್ಯತ್ಯಾಸವಿಲ್ಲದೆ ತೋರಿಸುವುದೇ ಈ ನಾಟಕದ ಮುಖ್ಯಲಕ್ಷಣ (ಮುನ್ನುಡಿ)
–ಡಾ. ಬಿ. ನಂಜುಂಡಸ್ವಾಮಿ

ಎಂಬತ್ತರ ದಶಕದಲ್ಲಿದ್ದ 'ಕೆಂಪು ಬಂಗಾಳ' ದ ಒಳಗು ಹೊರಗನ್ನು ಅರಿಯದ ತಾತ್ವಿಕವಾದದ್ದನ್ನೂ ಅನುಭವದ ಒರೆಗಲ್ಲಿಗೆ ಉಜ್ಜಿನೋಡುವ 'ಕೆಂಪಿನ' ವಸ್ತುಸ್ಥಿತಿಯನ್ನು ಬದುಕಿನ ಸಂದರ್ಭದಲ್ಲಿ ಕಂಡುಕೊಳ್ಳುವುದು ಈ ಬರಹದಲ್ಲಿ ಬಹಳ ಮುಖ್ಯವಾಗಿದೆ.
–ಡಾ. ಎಚ್. ಶಶಿಕಲಾ

ವಚನಗಳ ಈ ಬಹುಪಟ್ಯೀಯ ಗುಣ ಕಾರಣವಾಗಿ ವಚನಗಳ ಭಾಷೆ ಇವತ್ತಿನ ಭಾಷೆಯ ವ್ಯಾಕರಣವನ್ನು ಹೊಂದಿರುವಂತೆ ಕಂಡು ಬರುತ್ತದೆ. –ಶ್ರೀ ಬಸವರಾಜ ಕೋಡಗುಂಟಿ

ಈ ಗುಡಿಗಳು ದರ್ಗಾಗಳಾಗಿ ಪರಿವರ್ತನೆ ಹೊಂದಿದ್ದು ಅಲ್ಲಿ ಲಿಂಗಾಯುತ ಹಾಗೂ ಮುಸ್ಲೀಮ ಎರಡೂ ಸಮಾಜದವರು ಪೂಜೆಯ ಅವಕಾಶ ಹೊಂದಿದ್ದಾರೆ.
–ಡಾ.ವೀರಣ್ಣದಂಡೆ ಮತ್ತು ಡಾ. ಜಯಶ್ರೀದಂಡೆ

ದಿ॥ ಶರ್ಮರ ಆಶಯದಂತೆ ಪೂರ್ವಗ್ರಹಪೀಡೆಯಿಲ್ಲದೆ ಘನೀಕೃತ ಆಕರಗಳೊಂದಿಗೆ 'ಅಹಿಚ್ಛತ್ರ' ಪ್ರದೇಶ ಕುರಿತು ವಿವರಿಸಲಾಗಿದೆ. –ಡಾ. ಕೆಳದಿ ಗುಂಡಾಜೋಯಿಸ್

ಕಾವ್ಯ ಮೀಮಾಂಸೆಯ ಬಗೆಗೆ ಬೌದ್ಧ ತಾತ್ವಿಕತೆಯು ಮುಂದಿಟ್ಟ ನಿಲುವುಗಳು ಪ್ರಜಾಸತ್ತೆಗೆ ಆಪ್ತವಾದವುಗಳೂ ಸಮೂಹವನ್ನು ಮೌಢ್ಯದಿಂದ ಬಿಡುಗಡೆಗೊಳಿಸಬಲ್ಲವೂ ಆಗಿವೆ.
– ಡಾ. ನಟರಾಜ್ ಬೂದಾಳ್